

ಟಾಗೋರ್ - ಕಂಬಾರ ವಿಶೇಷಾಂಕ



# ಅನ್ವೇಷಣೆ

ಂಚಿಕೆ : ೬೯ ಸಾಹಿತ್ಯ - ಸಂಸ್ಕೃತಿ - ಕಲೆ ಬೆಲೆ ರೂ. ೫೦





## ಟಾಗೋರ್ - ೧೫೦ ವರ್ಷ

ಮೂಡಲಕ ಮೂಡೀದಿ! ಪಡುವಲಕ ಓಡೀದಿ
ದಿಕ್ಕೆಲ್ಲ ಕೂಡೀದಿ ಗುರುದೇವಾ
ಹಾಡಿ ಹಣ್ಣಾದಿ ನೀ! ಜಗದ ಕಣ್ಣಾದಿ ನೀ
ದುಡಿದು ಸಣ್ಣಾದಿ ನೀ ಗುರುದೇವಾ!
- ಅಂಬಿಕಾತನಯದತ್ತ

## ಕಂಬಾರ - ೮ನೇ ಜ್ಞಾನಪೀಠ

ಸಣ್ಣಾಟ ದೊಡ್ಡಾಟ ಬಯಲಾಟಗಳಿಗಲ್ಲದೆ
ಪಾರಿಜಾತಕ್ಕೂ ಪರಿಮಳವ ಪೂಸಿಸಿ
ದಟ್ಟಿ ದಾವಣಿ ತೊಡಿಸಿ ಶಿಸ್ತಿನಿಂದಾಡಿಸಿ
ರಸದೂಟ ಮಾಡಿಸುವ ಶಾಸ್ತ್ರಪ್ರವೀಣ.
- ಮನು ಬಳಿಗಾರ್














## 'ಅನ್ವೇಷಣೆ' ಸಾಹಿತ್ಯ ಸಂಸ್ಕೃತಿ ಕಲೆ ಪತ್ರಿಕೆಗೆ ಚಂದಾದಾರರಾಗಿ

ಅನ್ವೇಷಣೆ



* ನವ್ಯೋತ್ತರ ಕನ್ನಡ ಸಾಹಿತ್ಯ ವಿಸ್ತರಿಸಿ ಕೊಳ್ಳುತ್ತಿರುವ ಬದುಕಿನ ವಿವಿಧ ಆಯಾಮಗಳ ಬಗ್ಗೆ – ಬದಲಾಗಲೇಬೇಕಾದ ಸೃಷ್ಟಿಕ್ರಿಯೆಯ ಶೈಲಿ, ವಸ್ತು, ವಿನ್ಯಾಸ, ವಿಮರ್ಶಾ ಮಾನದಂಡಗಳ ಬಗೆಗೆ ಮುಕ್ತ ಚರ್ಚೆಯ ಅಗ್ರವೇದಿಕೆ.
* ಹಿರಿಕಿರಿಯ ಲೇಖಕರನ್ನೊಳಗೊಂಡು ನಡೆಯುತ್ತಿರುವ ಸಮಕಾಲೀನ ಸಾಂಸ್ಕೃತಿಕ ಸಂವಾದಕ್ಕೆ ತೆರೆದ ವೇದಿಕೆ.
* ಪ್ರಗತಿಪರ ವಿಚಾರಗಳ ದಾಖಲಾತಿಗೆ ಅನ್ವೇಷಣೆ.
* ವಾರ್ಷಿಕ ಚಂದಾ ರೂ.೨೦೦. ಚಂದಾಹಣವನ್ನು ಎಂ.ಓ. ಅಥವಾ ಡಿ.ಡಿ. ಮೂಲಕ 'ಅನ್ವೇಷಣೆ' ಹೆಸರಿಗೆ ಕಳುಹಿಸಿ.

## ಕನ್ನಡಕ್ಕೆ ಎಂಟನೇ ಜ್ಞಾನಪೀಠ ಪ್ರಶಸ್ತಿ ತಂದುಕೊಟ್ಟ ಕಂಬಾರರಿಗೆ ಅಭಿನಂದನೆಗಳು





'ನಾನು ಬಹುಹಿಂದೆಯೇ ಕವಿ, ನಾಟಕಕಾರ ಡಾ. ಚಂದ್ರಶೇಖರ ಕಂಬಾರರಿಗೆ ಜ್ಞಾನಪೀಠ ಪ್ರಶಸ್ತಿ ಬರುತ್ತದೆ ಎಂದು ನುಡಿದಿದ್ದ ಭವಿಷ್ಯ ಇಂದು ನಿಜವಾಗಿದೆ. ಅವರಿಗೆ ಕನ್ನಡಿಗರೆಲ್ಲರ ಪರವಾಗಿ ಅಭಿನಂದನೆಗಳು.'

– ಧರ್ಮದರ್ಶಿ ಹರಿಕೃಷ್ಣ ಪುನರೂರು

ಮಾಜಿ ಅಧ್ಯಕ್ಷರು, ಕನ್ನಡ ಸಾಹಿತ್ಯ ಪರಿಷತ್ತು





The Tamasha Folkdance - Sketch by K.K. Hebbar

### ಅನ್ವೇಷಣೆ

* ನವ್ಯೋತ್ತರ ಕನ್ನಡ ಸಾಹಿತ್ಯ ವಿಸ್ತರಿಸಿಕೊಳ್ಳುತ್ತಿರುವ ಬದುಕಿನ ವಿವಿಧ ಆಯಾಮಗಳ ಬಗ್ಗೆ - ಬದಲಾಗಲೇಬೇಕಾದ ಸೃಷ್ಟಿಕ್ರಿಯೆಯ ಶೈಲಿ, ವಸ್ತು, ವಿನ್ಯಾಸ, ವಿಮರ್ಶಾ ಮಾನದಂಡಗಳ ಬಗೆಗೆ ಮುಕ್ತ ಚರ್ಚೆಯ ಅಗ್ರವೇದಿಕೆ.
* ಹಿರಿಕಿರಿಯ ಲೇಖಕರನ್ನೊಳಗೊಂಡು ನಡೆಯುತ್ತಿರುವ ಸಮಕಾಲೀನ ಸಾಂಸ್ಕೃತಿಕ ಸಂವಾದಕ್ಕೆ ತೆರೆದ ವೇದಿಕೆ.
* ಪ್ರಗತಿಪರ ವಿಚಾರಗಳ ದಾಖಲಾತಿಗೆ ಅನ್ವೇಷಣೆ.

### ಚಂದಾ ವಿವರ

| | |
|---|---|
| ವಾರ್ಷಿಕ ಚಂದಾ | ರೂ. ೨೦೦/- |
| ಆಜೀವ ಚಂದಾ | ರೂ. ೨,೦೦೦/- |
| ಪೋಷಕ ನಿಧಿ | ರೂ. ೫,೦೦೦/- |

ಚಂದಾ ಹಣವನ್ನು ಎಂ.ಓ. ಅಥವಾ ಡಿ.ಡಿ. ಮೂಲಕ 'ಅನ್ವೇಷಣೆ' ಹೆಸರಿಗೆ ತಮ್ಮ ಪೂರ್ಣ ವಿಳಾಸದೊಂದಿಗೆ ಕಳುಹಿಸಿ.

**ವಾರ್ಷಿಕ ಚಂದಾ ರೂ. ೨೦೦**


ಪ್ರಗತಿಪರ ವಿಚಾರಗಳಿಗೆ

# ಅನ್ವೇಷಣೆ

ಸಂಪುಟ : ೨೭ ಸಂಚಿಕೆ : ೬೯

ಜುಲೈ - ಸೆಪ್ಟೆಂಬರ್ ೨೦೧೧





ವಿಳಾಸ

ಸಂಪಾದಕ, ಅನ್ವೇಷಣೆ
# ೧೬೧, 'ಶ್ರೀಮಾತಾ', ೬ನೇ ಕ್ರಾಸ್
ಕೆ.ಆರ್. ರಸ್ತೆ, ಶಾಸ್ತ್ರೀನಗರ
ಬೆಂಗಳೂರು - ೫೬೦ ೦೨೮.

ದೂರವಾಣಿ :
೦೮೦ - ೨೬೭೬ ೧೦೨೧
ಮೊಬೈಲ್ : ೯೯೦೦೫ ೬೬೦೨೦

Email : rghalli7@gmail.com


**ಸಾಂಸ್ಕೃತಿಕ ಚಟುವಟಿಕೆಗಳಿಗೆ**

## ಪತ್ರಗಳು-ಅನಿಸಿಕೆ

ಪ್ರಿಯ ನಾಗರಾಜ,

'ಅನ್ವೇಷಣೆ' (ಸಂ.೬೮) ತಲುಪಿ ತುಂಬಾ ದಿನಗಳಾಯಿತು. ವಿದ್ವಾಂಸರು, ಈ ಹಿಂದೆ ಚಿತ್ರದುರ್ಗದಲ್ಲಿ ನಡೆದ ೭೫ನೇ ಸಾಹಿತ್ಯ ಸಮ್ಮೇಳನಾಧ್ಯಕ್ಷರಾಗಿದ್ದ ಶ್ರೀ ಎಲ್. ಬಸವರಾಜು ಅವರ ಸಂದರ್ಶನ ಪ್ರೊ. ಲಕ್ಷ್ಮಣ ತೆಲಗಾವಿ ಅವರ 'ಚಿತ್ರದುರ್ಗದ ಸಂಕ್ಷಿಪ್ತ ಇತಿಹಾಸ, ರಾಮಲಿಂಗಪ್ಪ. ಟಿ. ಬೇಗೂರರ 'ಕುಮಾರವ್ಯಾಸ ಕಾವ್ಯ ಪ್ರಣಾಳಿಕೆ', ಕುಂ.ವೀ ಅವರ 'ರಾಹುಲ ಸಾಂಕೃತ್ಯಾಯನ', ಜ.ನಾ.ತೇಜಶ್ರೀ ಅವರ 'ವಿಭಾ ಎಂಬ ಕಾವ್ಯ ನಕ್ಷತ್ರ' ಎಂಬಿತ್ಯಾದಿ ಬರಹಗಳು....ಒಂದೊಂದೂ ಓದಿಗೆ ಆನಂದ ನೀಡಿದ್ದವು.

ನೀವು ಅನ್ವೇಷಣೆ ನಿಯಮಿತವಾಗಿ ತನ್ನಿರಿ. ನಿಮ್ಮಲ್ಲಿ ಪತ್ರಿಕೆ ಮಾಡುವ, ಅದನ್ನು ಕಲಾತ್ಮಕವಾಗಿ ರೂಪಿಸುವ ಶಕ್ತಿಯಿದೆ. ನಿಮ್ಮ ಜೊತೆ ರಾಜ್ಯದ ದೊಡ್ಡ ಲೇಖಕರ ಬಳಗವೇ ಇದೆ. ವಂದನೆಗಳೊಂದಿಗೆ.

**-ಎಚ್.ಎಸ್.ಪಾಟೀಲ, ಕೊಪ್ಪಳ**

'ಅನ್ವೇಷಣೆ' ಪತ್ರಿಕೆಯ ಸಂಚಿಕೆಗಳನ್ನು ಒಮ್ಮೆ ಹಾಗೇ ತಿರುವಿ ಹಾಕುತ್ತಿದ್ದೆ....ನೀವು 'ಅನ್ವೇಷಣೆ' ಕಡೆ ಸೆಳೆದಿರುವ ಲೇಖಕರ ಬಳಗ ದೊಡ್ಡದು. ಸಾಹಿತ್ಯದ ಹಲವು ಪ್ರಕಾರ, ಮಗ್ಗಲುಗಳ, ನಮೂನೆಗಳು ಬರಹಗಳು ಇಲ್ಲಿ ಅವಕಾಶ ಪಡೆದಿರುವುದು ಮತ್ತೊಂದು ಬಹುಮುಖ್ಯ ಅಂಶ. ಪತ್ರಿಕೆ ಧೋರಣೆ ನನಗೆ ಇಷ್ಟವಾಯಿತು.

ಬಹಳ ವರ್ಷಗಳಿಂದ ಇದ್ದದ್ದೊಂದು ಪತ್ರಿಕೆಯನ್ನು ತುಂಬಾ ಪರಿಶ್ರಮದಿಂದ ನೀವು ನಡೆಸಿಕೊಂಡು ಬರುವ ಸಾಹಸ ಮಾಡಿದ್ದೀರಿ! ಮುಂದೆಯೂ ಅದು ಮತ್ತಷ್ಟು ಸಮೃದ್ಧಿಯಾಗಿ, ಮೌಲಿಕವಾಗಿ ಮೈ ತುಂಬಿಕೊಂಡು ಬರಲಿ ಎಂದು ಆಶಿಸುವೆ.

**-ಬಿ. ರಾಜಣ್ಣ, ಬೆಂಗಳೂರು**

'ಅನ್ವೇಷಣೆ' ಬಗ್ಗೆ ಕೇಳಿದ್ದೆ. ನೋಡುವ, ಓದುವ ಅವಕಾಶ ಸಿಕ್ಕಿದ್ದಕ್ಕೆ ಧನ್ಯವಾದಗಳು. ಹೆಸರಿನಲ್ಲೇ ಒಳ್ಳೆಯ ಶೋಧನೆ ಮತ್ತು ಹುಡುಕಾಟವಿದೆ ಮತ್ತು ಚರ್ಚೆಗೆ, ಸಾಂಸ್ಕೃತಿಕ ಸಂವಾದಕ್ಕೆ ಪ್ರಗತಿಪರ ವಿಚಾರಗಳಿಗೆ ಅನ್ವೇಷಣೆ ವೇದಿಕೆ ಆಗಿರುವುದು ಶ್ಲಾಘನೀಯ. ಡಾ.ಎಲ್. ಬಸವರಾಜು ಸಂದರ್ಶನ ಅವನ ವ್ಯಕ್ತಿತ್ವಕ್ಕೆ ಹಿಡಿದ ಕನ್ನಡಿ. ಬದುಕು-ಬರಹ-ಭಾಷಣ ಒಂದೇ ಆಗಿರಬೇಕು ಎಂಬುದನ್ನು ಸಾಬೀತುಪಡಿಸಿದೆ. ಪದ್ಯಗಳು ಆಪ್ತವೆನಿಸಿವೆ. ಇನ್ನು ಉಳಿದಂತೆ ಎಲ್ಲವೂ ವೈಚಾರಿಕ ಮತ್ತು ಅರ್ಥಪೂರ್ಣ. ಹಿರಿ-ಕಿರಿ ಸಾಹಿತಿಗಳ ಒಂದುಗೂಡಿಸುವಲ್ಲಿ, ವಿಚಾರಗಳನ್ನು ಬಿತ್ತುವಲ್ಲಿ ಕನಸುಗಳನ್ನು ಕಟ್ಟುವಲ್ಲಿ ಪತ್ರಿಕೆ ಉತ್ತಮ ಕೆಲಸ ಮಾಡಿದೆ. ನಂಬಿಕೆ-ಪ್ರೀತಿ-ಮೌಲ್ಯಗಳನ್ನು ಬೆಳೆಸುವಲ್ಲಿ ಪತ್ರಿಕೆ ಒಳ್ಳೆಯ 'ರಸಬಳ್ಳಿ'ಯಾಗಲೆಂದು ನನ್ನ ಪ್ರೀತಿಯ ಹಾರೈಕೆ. ಕಲೆ-ಸಾಹಿತ್ಯ-ಸಂಸ್ಕೃತಿ ಬಿತ್ತನೆಯ ಕಾಯಕದಲ್ಲಿ ನನ್ನ ಕೈಯು ಕೆಸರಾಗಲೆಂದು ಕೋರಿಕೆ!

**- ಪೂರ್ಣಿಮಾ ಜಗದೀಶ್, ಹಾಸನ**

## ಅನ್ವೇಷಣೆ ಈ ಸಂಚಿಕೆಯಲ್ಲಿ...











## ಸಂಪಾದಕರ ಟಿಪ್ಪಣಿ






# ಜ್ಞಾನಪೀಠಸಿರಿ ಕಂಬಾರ ಮತ್ತು ವಾಸ್ತವ

'ಹಿಂದಣ ಹೆಜ್ಜೆಯ ನೋಡಿ ಕಂಡಲ್ಲದೆ, ನಿಂದ ಹೆಜ್ಜೆಯನರಿಯಬಾರದು

–ಅಲ್ಲಮಪ್ರಭ

'ಕನ್ನಡ ಭಾಷಾ ಸಾಹಿತ್ಯ' – ಮತ್ತೊಮ್ಮೆ 'ಶಿಖರಸೂರ್ಯ'ನಂತ ಬೆಳಗಿದೆ. ಕನ್ನಡದ ಕೋಡು ಚಿಗುರಿ ಮತ್ತಷ್ಟು ಎತ್ತರಕ ಬೆಳೆಯಲು ಕಂಬಾರರು ನೀರು ಗೊಬ್ಬರ ಹಾಕಿ ಫಲವತ್ತು ಮಾಡಿ ಪೋಷಿಸಿದ್ದಾರೆ. ಫಲ ತಡವಾಗಿ ಕೈ ಸೇರಿದೆ! ದಶಕದಿಂದಲೂ 'ಜ್ಞಾನಪೀಠ'ದತ್ತ ಕನ್ನಡಿಗ ಕಣ್ಣರಳಿಸಿ ಕತ್ತು ತಿರುಗಿಸಿ ಇಣುಕಿದು ನಿಜ. ಈ ನಿಜದಲ್ಲಿ ಕನ್ನಡಿಗನಿಗೆ ಕನಸಷ್ಟೇ ಅಲ್ಲ, ಆತ್ಮವಿಶ್ವಾಸವು ಇತ್ತು. – ಅದು ಖಂಡಿತಾ ಕನ್ನಡದ ಈಗಿನ ಮೂರ್‍ನಾಲ್ಕು ಸಾಹಿತಿಗ ಸಾಧನೆಯ ಹಿನ್ನೆಲೆಯಲ್ಲಿನ ಲೆಕ್ಕಾಚಾರವೂ ಹೌದು. ಆದರೆ ಈ ಸಾ ನಿರೀಕ್ಷೆ ಹುಸಿಯಾಗದೆ ನಿಜವಾಗಿದೆ – ಸಹಜವಾಗಿ ನಾಡೋ 'ಪಾಪು'ರನ್ನುಳಿದು ಕನ್ನಡಿಗರಿಗೆ ಖುಷಿ ತಂದಿದೆ. ನಿಜಕ್ಕೂ ಕನ್ನಡ ಸಾಹಿ ಭಾರತೀಯ ಬಹುಭಾಷೆಗಳಲ್ಲಿನ ಸಾಹಿತ್ಯ ಸೃಷ್ಟಿಗಿಂತ ನಾಲ್ಕೆಜ್ಜೆ ಮುಂದಿ ಎರಡು ಸಾವಿರ ವರ್ಷಗಳ ಇತಿಹಾಸ ಇರುವ ಈ ಭಾಷಾ ವೈವಿಧ್ಯ ಪರಂಪರೆಯ ಕನ್ನಡಿಗೆ ಪುರಾವೆಗಳು ಇವೆ. ಶಾಸ್ತ್ರೀಯ ಭಾಷೆ ಸ್ಥಾನಮಾ ದಕ್ಕಿಸಿಕೊಳ್ಳಲು 'ಪುರಾವೆಗಳು' ಕೆಲಸ ಮಾಡಿದ್ದವು. ದುರದೃಷ್ಟವಶಾತ್ ತಮಿಳು ನಾಡಿನ ಒಬ್ಬ ಅಸೂಯಾಪರ ಕೋಡಂಗಿಯ ದುಷ್ಟತನದಿಂ 'ಕನ್ನಡಕ್ಕೆ ಶಾಸ್ತ್ರೀಯ ಸ್ಥಾನಮಾನ' ಕೊಟ್ಟ ಬಗ್ಗೆ ಕೋರ್ಟಿನಲ್ಲಿ ತಕರಾ ಅರ್ಜಿ ಸಲ್ಲಿಕೆಯಾಗಿದೆ. ಆ ಕೊಕ್ಕೆಯನ್ನು ಬಿಡಿಸಿಕೊಂಡು ಸಮ ಇತ್ಯರ್ಥ ಮಾಡದೆ ಚೆನ್ನೈ ನ್ಯಾಯಾಲಯದಲ್ಲಿ ಗೊಂದಲ ಸೃಷ್ಟಿಯಾಗಿ

ಜನರಿಂದ ಆಯ್ಕೆಯಾದ ರಾಜ್ಯ ಸಂಸದರಿಗಾಗಲಿ, ರಾಜ್ಯದ ಸಚಿವರು, ಶಾಸಕರಿಗಾಗಲಿ ಈ ಬಗ್ಗೆ ಕಿಂಚಿತ್ತೂ ಆಸಕ್ತಿ ಇಲ್ಲ. ಕೇಂದ್ರದಲ್ಲಿ ನಮ್ಮವರೇ ನಾಲ್ಕೈದು ಸಚಿವರು ಇದ್ದು– ಅವರೆಲ್ಲ ಗೊಡ್ಡುಗಳಾಗಿದ್ದಾರೆ. ಇದ್ದುದರಲ್ಲಿ ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷ ಮುಖ್ಯಮಂತ್ರಿ ಚಂದ್ರು ಆಗಾಗ್ಗೆ ದನಿ ಎತ್ತಿ ಗುಡುಗಿದ್ದು ಬಿಟ್ಟರೆ ಮತ್ತ್ಯಾರಿಗೂ ಈ ಬಗ್ಗೆ ಕಾಳಜಿ ಇಲ್ಲ!

ದೊಡ್ಡದಾಗಿ ಬಾಯಿ ಬಡಿದುಕೊಂಡು ಸದಾ ಅಬ್ಬರ ಮಾಡುವ ತಮಿಳರು ಕನ್ನಡಿಗರಿಗೆ ನಿರಂತರ ತೊಡರುಗಾಲು. ಭಾಷೆ, ಸಾಹಿತ್ಯ, ಸಂಸ್ಕೃತಿಯಲ್ಲಷ್ಟೇ ಅಲ್ಲ; ರಾಜ್ಯದ ಪ್ರಗತಿಯಲ್ಲೂ ಕಾಲು ಕೆದರಿ ಕೋಳಿ ಜಗಳಕ್ಕೆ ಸದಾ ಸಿದ್ದರಿದ್ದಾರೆ ಈ ನಮ್ಮ ದ್ರಾವಿಡ ಸಹೋದರರು!

ಇರಲಿ, ದೇಸಿ ಸಂಸ್ಕೃತಿಯ ಅಪ್ಪಟ ಜಾನಪದ ಸೊಗಡಿನ ಅರಿವುಗಾರ ನಾಡೋಜ ಡಾ. ಚಂದ್ರಶೇಖರ ಕಂಬಾರರು ಎಂಟನೇ ಜ್ಞಾನಪೀಠ ಗೌರವವನ್ನು ಕನ್ನಡಕ್ಕೆ ತಂದಿರುವುದು ಹೆಮ್ಮೆ, ಅವರಿಗೆ 'ಅನ್ವೇಷಣೆ' ಪರವಾಗಿ ಅಭಿನಂದನೆ.

೧೯೯೮ರಲ್ಲಿ ಗಿರೀಶ್ ಕಾರ್ನಾಡರಿಗೆ ಏಳನೇ ಜ್ಞಾನಪೀಠದ ಗೌರವ ಸಂದಾಗ ಇದೇ ಸಂಪಾದಕೀಯದಲ್ಲಿ ಒಂದು ಮಾತು ಬರೆದಿದ್ದೆ: **ಕನ್ನಡ ಸಾಹಿತ್ಯ ಶ್ರೀಮಂತವಾಗಿದೆ: ಕನ್ನಡ ಮಾತ್ರ ದಿನವೂ ಅನಾಥವಾಗುತ್ತಿದೆ!** – ಈ ಮಾತು ದಶಕದ ನಂತರವೂ ವಾಸ್ತವ ಸ್ಥಿತಿಯನ್ನೇ ಬಿಂಬಿಸುತ್ತಿದೆ. ಕನ್ನಡಭಾಷೆಯ ರಕ್ಷಣೆಗೆ 'ಕೋಟೆಗಳು' ಹಲವಾರು. ಆದರೆ ಸಮರ್ಥ ಕಾವಲುಗಾರರು ಇನ್ನೂ ಬೇಕಿದ್ದಾರೆ! ಭಾಷೆ ಉಳಿವಿಗಾಗಿ ಈ ನಾಡಿನಲ್ಲಿ ಎಷ್ಟೊಂದು ಜನಪರ ಹೋರಾಟ, ಪ್ರತಿಭಟನೆ, ಆಂದೋಲನಗಳು ನಡೆದವು – ಅವ್ಯಾವೂ ಜಾಗೃತಿ ಮೂಡಿಸಲಿಲ್ಲ. ಈಗಿನ ಹಾಗೂ ಹಿಂದಿನ ಎಲ್ಲಾ ಸರ್ಕಾರಗಳ ಅತಂತ್ರ – ಗೊಂದಲ ಭಾಷಾನೀತಿಯಲ್ಲಿ ಶಿಕ್ಷಣನೀತಿಯಲ್ಲಿ ಕಂಡು ಬಂದಿದೆ. ಜತೆಗೆ ನ್ಯಾಯಾಂಗದ ಅಸ್ಪಷ್ಟ ತೀರ್ಪಿನಿಂದಾಗಿ ರಾಜ್ಯಭಾಷೆ, ಮಾತೃಭಾಷೆ ಕಲಿಕೆಗೆ ಅನೇಕ ತೊಡರುಗಾಲುಗಳಿವೆ. ಗ್ರಾಮಾಂತರ ಪ್ರದೇಶಗಳಲ್ಲಿ ಇಂಗ್ಲಿಷ್ ಶಿಕ್ಷಣದ ಕಾನ್ವೆಂಟ್‌ಗಳು ಮೇಲ್ಗೈ ಸಾಧಿಸುವತ್ತ ದಾಪುಗಾಲು ಹಾಕುತ್ತಿವೆ. ಈಗಾಗಲೇ ಅನೇಕ ಕನ್ನಡ ಶಾಲೆಗಳು ಮುಚ್ಚಿ ಹೋಗಿವೆ. ಸಾವಿರಾರು ಶಾಲೆಗಳು ಮುಚ್ಚುವ ಆತಂಕದಲ್ಲಿವೆ. ಬಡವ, ಕೂಲಿಕಾರ ಕೂಡ ತನ್ನ ಮಗುವಿಗೆ ಇಂಗ್ಲಿಷ್ ಶಿಕ್ಷಣ ಬೇಕು ಎಂದು ಹಂಬಲಿಸುತ್ತಿದ್ದಾನೆ. ಬಡ–ಮಧ್ಯಮ ವರ್ಗದ ಅತಂತ್ರ ನಿಲುವು, ಗೊಂದಲಗಳಿಗೆ (ಆಯಾ ಸಂದರ್ಭದ) ಸರ್ಕಾರಗಳೂ ಕಾರಣವಾಗಿವೆ. ಹಳ್ಳಿ – ನಗರಗಳ ನಡುವಿನ ಕಂದಕ ಹೆಚ್ಚುತ್ತಿದೆ.

ಭಾಷಾ ಕಲಿಕೆ, ಶಿಕ್ಷಣದ ಅತಂತ್ರಸ್ಥಿತಿ, ಕನ್ನಡದ ಮಕ್ಕಳ ಸ್ಥಿತಿ ಬಗ್ಗೆ ಕಂಬಾರರ ಮಾತು ಚಿಂತನಾರ್ಹ. **"ಕನ್ನಡಕ್ಕೆ ಬಹಳ ಆತಂಕ ಇದೆ. ಶಿಕ್ಷಣ ವ್ಯವಸ್ಥೆಯಲ್ಲೇ ಇರುವ ಲೋಪ ಇದಕ್ಕೆ ಕಾರಣ. ಅದರಲ್ಲೂ ಸರಕಾರಕ್ಕೆ ಕನ್ನಡದ ಬಗ್ಗೆ ಕಿಂಚಿತ್ತೂ ಬದ್ಧತೆ ಇಲ್ಲ. ಪ್ರಾಥಮಿಕ ಒಂದನೇ ತರಗತಿಯಿಂದ ಪ್ರೌಢಶಿಕ್ಷಣದವರೆಗೆ ಕಡ್ಡಾಯವಾಗಿ ಕನ್ನಡದಲ್ಲೇ ಶಿಕ್ಷಣ ನೀಡಬೇಕು. ಇಂಗ್ಲಿಷನ್ನು ಕಲಿಕೆಯ ಭಾಷೆಯನ್ನಾಗಿ ಬೇಕಾದರೆ ಕಲಿಸಲಿ..."** ಸರಕಾರದ ಜವಾಬ್ದಾರಿ ಕುರಿತು ಅವರು ಹೇಳಿದ ಮಾತು ವಿಧಾನಸೌಧದ ಕಲ್ಲು ಕಟ್ಟಡದಲ್ಲಿ ಕೂತು ಅಧಿಕಾರ ಚಲಾಯಿಸುವ ಅಧಿಕಾರಿಗಳಿಗೆ, ಜನಪ್ರತಿನಿಧಿಗಳಿಗೆ ತಾಕೀತೇ?

ನಗರೀಕರಣದ ಬದುಕು ಸುಂದರವಾಗಿ ಕಾಣುತ್ತದೆ. ಕೆಲವು ಹುದ್ದೆಗಳಿಗೆ ಲಕ್ಷಾಂತರ

ರೂಪಾಯಿಗಳ ಸಂಬಳವಿದ್ದು ಆ ಚಿತ್ರ ಗ್ರಾಮೀಣರ ಕಣ್ಣೆದುರಿದೆ. ಬೆವರಿಳಿಸಿ ದುಡಿವ ಹಳ್ಳಿಗನಿಗೆ ಯಾವುದೇ ಭದ್ರತೆ ಇಲ್ಲವಾಗಿದೆ. ಇಂಥ ಸ್ಥಿತಿಯಲ್ಲಿ "ಕನ್ನಡ, ಜನರ ಅನ್ನದ ಪ್ರಶ್ನೆಯಾಗಲಿಲ್ಲ!" ಕನ್ನಡದಲ್ಲಿ ಶಿಕ್ಷಣ ಕಲಿತರೆ ಸ್ವಾಭಿಮಾನದಿಂದ ಬದುಕು ಕಟ್ಟಿಕೊಳ್ಳಬಹುದು, ಅದೂ ಉದ್ಯೋಗ ಸೃಷ್ಟಿಸುತ್ತದೆ, ಬದುಕಲ್ಲಿ ಭದ್ರತೆಗೆ ಕೈ ತುಂಬಾ ಸಂಪಾದನೆ ಸಾಧ್ಯವಿದೆ ಎಂಬ 'ಭರವಸೆ', 'ಆತ್ಮವಿಶ್ವಾಸ' ಮೂಡಿದರೆ ಕನ್ನಡ ಕಲಿಕೆಗೆ ದಾರಿ ಸುಗಮ ಆಗಬಹುದು.

ನಾವು ಹೆಮ್ಮೆ ಪಡುವ 'ಜ್ಞಾನಪೀಠ' ಪುರಸ್ಕಾರದ ಹಿಂದೆ ಇಂಥ ವಾಸ್ತವ ಸ್ಥಿತಿಯೂ ಇದೆ ಎಂದು ತಿಳಿಯಲು ಈ ಮಾತು ಬರೆಯಬೇಕಾಯಿತು. ಇದು ನನ್ನದೇ ಮಾತೇನೂ ಅಲ್ಲ. ಈಗಾಗಲೇ ರಾಷ್ಟ್ರಕವಿ ಕುವೆಂಪು ಇದರ ಬಗ್ಗೆ ಸಾಕಷ್ಟು ಹೇಳುತ್ತಲೇ ಬಂದಿದ್ದರು. ಆರನೇ ಜ್ಞಾನಪೀಠ ಪುರಸ್ಕೃತ ಯು.ಆರ್. ಅನಂತಮೂರ್ತಿ ಮತ್ತೆ ಮತ್ತೆ ಹೇಳುತ್ತಿರುತ್ತಾರೆ. ಜತೆಗೆ ಸಂಶೋಧಕ ಎಂ. ಚಿದಾನಂದಮೂರ್ತಿ, ಚಂಪಾ, ಬರಗೂರು ಮೊದಲಾದ ವಿದ್ವಾಂಸರೆಲ್ಲರ ಮಾತೂ ಇದೇ ಆಗಿದೆ.

ಕಂಬಾರರು ಅಪ್ಪಟ ದೇಸಿ ಕವಿ ಎಂಬ ಮಾತಿನ ಬಗ್ಗೆ ಭಿನ್ನಾಭಿಪ್ರಾಯವೇ ಇಲ್ಲ. ಬೆಳಗಾವಿಯ ನೆಲದ ಸೊಗಡೇ ಅಂಥಾದ್ದು. ಅದನ್ನು ಗಡಿ ಜಿಲ್ಲೆ ಎಂದು ಮಹಾರಾಷ್ಟ್ರದತ್ತ ಕಣ್ಣು ಹೊರಳಿಸುತ್ತಲೇ ಇರುತ್ತೇವೆ. ಹಾಗೆ ನೋಡಿದರೆ ಕನ್ನಡಿಗರ ರಕ್ಷಣೆಗೆ ಆ ಜಿಲ್ಲೆ ಐತಿಹಾಸಿಕವಾಗಿ, ಸಾಂಸ್ಕೃತಿಕವಾಗಿ, ರಾಜಕೀಯವಾಗಿ ಮಹತ್ವದ ಪಾತ್ರವಹಿಸಿದೆ. ಅದೆಲ್ಲವನ್ನೂ ವಿವರಿಸುವ ಗೋಜಿಗೆ ಹೋಗಲಾರೆ. ಭೌಗೋಳಿಕವಾಗಿ (ರಾಜಕೀಯವಾಗಿಯೂ) ಬೆಳಗಾವಿ ಕನ್ನಡದ ಮುಕುಟಮಣಿ. ಇಂಥ ಜಿಲ್ಲೆಯ ಘೋಡಗೇರಿ ಚಂದ್ರಶೇಖರ ಕಂಬಾರ ('ಚಂದ್ರಪ್ಪ' – ಕಂಬಾರರ ಅಣ್ಣ ಪರಸಪ್ಪ ಹೇಳಿದಂತೆ) ಹುಟ್ಟೂರಿನ ಭಾಷೆ, ವಸ್ತ್ರ ವಿನ್ಯಾಸ, ನಡೆ ನುಡಿಯಲ್ಲಿ ಥೇಟ್ 'ಘೋಡಗೇರಿ ಚಂದ್ರಣ್ಣ!'. ಇನ್ನು ಅವರ ಶ್ರೀಮತಿಯವರಂತೂ ಉತ್ತರ ಕರ್ನಾಟಕದ ಸಂಪ್ರದಾಯ ಮೀರಿಲ್ಲ. ತಲೆಮ್ಯಾಲೆ ಸೆರಗು ಹೊದ್ದು, ಹಣೆಯಲ್ಲಿ ಸದಾ ಅಗಲ ಕುಂಕುಮ ಧರಿಸುವ ಈ 'ಅವ್ವ' ಎಲ್ಲರ ಮೆಚ್ಚುಗೆಗೆ ಪಾತ್ರರಾಗುತ್ತಾರೆ. ಕಂಬಾರರು ನಾಲ್ಕು ದಶಕಗಳಿಂದ ಬೆಂಗಳೂರು ನಿವಾಸಿ ಆದರೂ 'ಮಾತು' ನೆಲ ಮೂಲದ್ದೆ. ಬೆಂಗಳೂರು ಬದುಕಿನ ಮಿಶ್ರ ಸಂಸ್ಕೃತಿಯಲ್ಲಿ ನವನಾಗರೀಕ ಬಡಿವಾರದಿಂದ ಕಳೆದು ಹೋಗಲಿಲ್ಲ. ನಾಟಕ, ಕಾದಂಬರಿ, ಕಾವ್ಯದ ವಸ್ತು, ವೇದಿಕೆಯ ಮಾತು, ಕಲಬೆರಕೆ ಆಗಲಿಲ್ಲ. ನೆಲಮೂಲ ಸಂಸ್ಕೃತಿಯ ನೆಲೆಯಲ್ಲಿ ಅದನ್ನು ಕಾಪಿಟ್ಟುಕೊಂಡು ಬಂದವರು ಹಾಗೇ ಅದನ್ನು ಉಣಬಡಿಸಿದವರು ಕಂಬಾರರು.

ಕಂಬಾರರು ಮಹಾ ಪ್ರತಿಭಾನ್ವಿತ ಅಂದರೆ ಅವರ ಬಗ್ಗೆ ಎಲ್ಲಾ ಹೇಳಿದಂತೆ! ಹಾಗಲ್ಲ, ಅವರೊಬ್ಬ ಕನಸುಗಾರ, ಪ್ರಯೋಗಶೀಲ, ಹೊಸತರ ಹುಡುಕಾಟದಲ್ಲಿರುವ ಮಹತ್ವಾಕಾಂಕ್ಷಿ. ಕಷ್ಟಗಾಲದ ಬಾಲ್ಯ, ಊರುಕೇರಿ ಬಿಟ್ಟು ಬೆಳಗಾವಿ, ಧಾರವಾಡ, ಸಾಗರ, ಬೆಂಗಳೂರು ಅಂತ ನೆಲೆ ಹುಡುಕಿದ ಕಂಬಾರರಿಗೆ 'ಮನೆ ಸಂಸ್ಕೃತಿ' ಇದುವರೆಗಿನ 'ಹೇಳತೇನ ಕೇಳ' ಆಗಿದೆ.

ಎಂಬತ್ತರ ದಶಕದ ಆರಂಭದ ದಿನಗಳಲ್ಲಿ ಬೆಂಗಳೂರು ಹೊಕ್ಕ ನಾವುಗಳು, ಸಾಂಸ್ಕೃತಿಕ ಜಗತ್ತಿನ ವಿಸ್ಮಯಗಳಿಗೆ ಕಣ್ಣು–ಕಿವಿ ಆಗಿದ್ದೆವು. ದಿಗ್ಗಜ ಸಾಹಿತಿ ಕಲಾವಿದರುಗಳನ್ನು ನೋಡಿ ಮಾತಾಡುತ್ತಲೇ ಅವರ ಹತ್ತಿರವಾಗುತ್ತ ನಮ್ಮ ಭುಜ ಮುಟ್ಟಿ ನೋಡಿಕೊಳ್ಳುತ್ತಿದ್ದೆವು. ರವೀಂದ್ರ ಕಲಾಕ್ಷೇತ್ರದಂಥ ಸಾಂಸ್ಕೃತಿಕ ಕೇಂದ್ರದಲ್ಲಿ ನಾಟಕಗಳು ಹೊಸ ಅಭಿರುಚಿಗೆ

ಕಾರಣವಾಗಿದ್ದವು. ಆಗಲೇ ಕಂಬಾರರ 'ಜೋಕುಮಾರಸ್ವಾಮಿ', 'ಕರಿಮಾಯಿ'ಯನ್ನು ನೋಡಿ ಬೆಚ್ಚನೆ ಅನುಭವ ಪಡೆದು ಕುಣಿದಾಡಿದ್ದೆವು. ಅವರ ಗ್ರಾಮೀಣ ಸೊಗಡಿನ ಜಾನಪದ ವಸ್ತು – ನಿರೂಪಣೆ, ಹಾಡು-ಕುಣಿತ ಹಳ್ಳಿಗಾಡಿನ ನನ್ನಂಥವನನ್ನು ಮೂಕ ವಿಸ್ಮಿತನನ್ನಾಗಿಸಿತ್ತು.

ಬೆಂಗಳೂರು ವಿಶ್ವವಿದ್ಯಾಲಯದ ಜ್ಞಾನಭಾರತಿಯ ಸಾವಿರಾರು ಎಕರೆಯ ಆ ನಿರ್ಜನ ಪ್ರದೇಶದ ಕನ್ನಡ ಅಧ್ಯಯನ ಕೇಂದ್ರದಲ್ಲಿ ಕವಿ, ವಿಮರ್ಶಕ, ಜಿ.ಎಸ್. ಶಿವರುದ್ರಪ್ಪ ನಿರ್ದೇಶಕರಾಗಿದ್ದರು. ಅವರು ಆ ಸಂಸ್ಥೆಯನ್ನು ಶಿಖರದೆತ್ತರಕ್ಕೆ ಕೊಂಡೊಯ್ದಿದ್ದರು. ಅಲ್ಲಿ ಕರ್ನಾಟಕವನ್ನೇ ಪ್ರತಿನಿಧಿಸುವ ಶ್ರೇಷ್ಠ ಬರಹಗಾರರಿದ್ದರು. ಕಂಬಾರರನ್ನು ಒಳಗೊಂಡಂತೆ ಸಾಹಿತ್ಯದ ಬೇರೆ ಬೇರೆ ಕ್ಷೇತ್ರದಲ್ಲಿ ಹೆಸರು ಮಾಡಿದ್ದ ಕವಿ, ವಿಮರ್ಶಕ, ಸಂಶೋಧಕರ ಪಡೆಯೇ ಅಲ್ಲಿತ್ತು. ಎಂ. ಚಿದಾನಂದಮೂರ್ತಿ, ಕಿ.ರಂ. ನಾಗರಾಜ, ಕೆ.ವಿ. ನಾರಾಯಣ, ಲಕ್ಷ್ಮಿನಾರಾಯಣಭಟ್ಟ, ಸುಮತೀಂದ್ರ ನಾಡಿಗ, ಕಾರ್ಲೋಸ್, ಬರಗೂರು ರಾಮಚಂದ್ರಪ್ಪ, ಡಿ.ಆರ್. ನಾಗರಾಜ, ಸಿದ್ಧಲಿಂಗಯ್ಯ, ಎಸ್‌ವಿದ್ಯಾಶಂಕರ್, ಬಸವರಾಜ ಕಲ್ಗುಡಿ– ಹೀಗೆ ಇನ್ನೂ ಹಲವು ವಿದ್ವಾಂಸರು 'ಭಾಷೆ', 'ಸಂಸ್ಕೃತಿ', 'ಚಳವಳಿ' ಕಟ್ಟುವಲ್ಲಿ ಗಟ್ಟಿಗರಾಗಿದ್ದರು. ರಾಜ್ಯದ ಇತರೆ ವಿಶ್ವವಿದ್ಯಾಲಯಗಳ ಉಪನ್ಯಾಸಕ, ಪ್ರಾಧ್ಯಾಪಕರು ಬೆಂಗಳೂರು ವಿ.ವಿ. ನೋಡಿ ಅಸೂಯೆ ಪಟ್ಟಿದ್ದೂ ಉಂಟು. ಇಂಥ ಸಾಂಸ್ಕೃತಿಕ ಭದ್ರ ಬೇರಿನಿಂದ ಆಳಕ್ಕಿಳಿದಿದ್ದ ಕಂಬಾರರು ನೇರವಾಗಿ 'ಹಂಪಿ ಕನ್ನಡ ವಿಶ್ವವಿದ್ಯಾಲಯ' ಕಟ್ಟಲು ಹೊರಟರು. ಕಲ್ಲುಗುಡ್ಡದ ನೆಲವನ್ನು ಕಲಾತ್ಮಕವಾಗಿ ಬಳಸಿಕೊಂಡು ಹಸಿರ ಸೀರೆಯನ್ನುಡಿಸಿ ಕನ್ನಡ ವಿಶ್ವವಿದ್ಯಾಲಯವನ್ನು ಸಿಂಗಾರಬಾಲೆಯನ್ನಾಗಿಸಿ ಬಂಡೆಗಳ ಮೇಲೆ ಚಿಗುರೊಡೆಸಿದರು. ಮತ್ತೆ ಮುಂದಿನದ್ದೆಲ್ಲ ಇತಿಹಾಸ.

ಹಂಪಿ ವಿಶ್ವವಿದ್ಯಾಲಯದ ಕುಲಪತಿ ಆಗಿದ್ದಾಗ ತುಂಬಾ ಅಂತರ ಇಟ್ಟುಕೊಂಡಿದ್ದ ನಾನು, ಅವರು ಅಧಿಕಾರದಿಂದ ಕೆಳಗಿಳಿದಾಗ ಅಷ್ಟಿಷ್ಟು ಹತ್ತಿರವಾಗಿದ್ದೆ! ಅಧಿಕಾರದ ಗದ್ದುಗೆ ಹಿಡಿದವರ ಹತ್ತಿರ ಸುಳಿಯಬಾರದು, ಅವರ ಕಾರ್ಯಚಟುವಟಿಕೆ ದೂರವಿದ್ದೇ ಗಮನಿಸಬೇಕು, ವಿಮರ್ಶಿಸಬೇಕು ಎಂಬುದು ನನ್ನ ವೈಯಕ್ತಿಕ ನಿಲುವು. ರಾಜ್ಯದ ಅನೇಕ ಕಾರ್ಯಕ್ರಮಗಳಿಗೆ ಅವರ ಜೊತೆ ನೂರಾರು ಕಿ.ಮಿ. ಪಯಣ ಬೆಳೆಸಿದ್ದೇನೆ. ಹತ್ತಾರು ವಿಚಾರ ಕುರಿತು ಚರ್ಚಿಸಿದ್ದೇನೆ. ದೂರದ ಬೆಳಗಾವಿ, ಹರಿಹರ, ಹೊಸದುರ್ಗ, ಚಿತ್ರದುರ್ಗ ಮೊದಲಾದೆಡೆ ಹೋದಾಗಲೆಲ್ಲಾ ಸಾಹಿತ್ಯ–ಸಂಸ್ಕೃತಿ–ಸಿನಿಮಾ–ಕಿರುತೆರೆ–ರಾಜಕಾರಣ ಕುರಿತು ಅವರ ಒಳನೋಟಗಳ ಬಗ್ಗೆ ಅರಿತಿದ್ದೇನೆ.

ಅವರ ಇತ್ತೀಚಿನ ನಾಟಕ 'ಶಿವರಾತ್ರಿ' ಹಸ್ತಪ್ರತಿಯಲ್ಲಿದ್ದಾಗಲೇ, ಅವರಿಂದಲೇ ಇಡೀ ನಾಟಕವನ್ನು ಪ್ರಥಮ ಬಾರಿಗೆ ಓದಿಸಿ ಕೇಳಿದ್ದೆ. 'ಶಿವಸಂಚಾರ'ದ ರೂವಾರಿ ಸಾಣೇಹಳ್ಳಿಯ ಶ್ರೀ ಪಂಡಿತಾರಾಧ್ಯ ಶಿವಾಚಾರ್ಯ ಸ್ವಾಮೀಜಿಯವರ ಜೊತೆಯಲ್ಲಿ ಬೆಂಗಳೂರಿನ ಆರ್.ಟಿ. ನಗರದ ತರಳಬಾಳು ಸಾಂಸ್ಕೃತಿಕ ಕೇಂದ್ರದಲ್ಲಿ ಈ ನಾಟಕದ ಓದು ನಡೆದಿತ್ತು. ಆ ದಿನ ಸುದೀರ್ಘ ಚರ್ಚೆಯಲ್ಲಿ ನಿರ್ದೇಶಕ ಚಿದಂಬರರಾವ್ ಜಂಬೆ ಕೂಡಾ ಇದ್ದರು. ಬಸವಣ್ಣ – ಬಿಜ್ಜಳರ ಸಮಾಗಮ ಶರಣೆ ಸೂಳೆ ಸಂಕವ್ವೆಯ ಮನೆಯಲ್ಲಾಗುವ ಒಂದು ಸಂದರ್ಭ, ಅಲ್ಲಿನ ಒಂದಷ್ಟು ಸನ್ನಿವೇಶಗಳು '... ಹೀಗಿದ್ದರೆ ಹೇಗೆ?... ಹಾಗಿದ್ದರ ಚೆನ್ನ... ಇದು ಸರಿಹೊಂದಬಹುದೇ?' ಹೀಗೆಲ್ಲಾ ಚರ್ಚೆಗಳು ನಡೆದಾಗ; ಕಂಬಾರರ ಮೂಲ ಆಶಯಕ್ಕೆ ಧಕ್ಕೆ ಆಗದಂತೆ ಸೂಕ್ಷ್ಮ ಬದಲಾವಣೆಗೆ ಅಲ್ಲಿನ ಚರ್ಚೆ ಸಾಗಿತ್ತು. ನನ್ನ ಅನಿಸಿಕೆಯನ್ನು ಅಲ್ಲಿ ಮುಕ್ತವಾಗಿ ವ್ಯಕ್ತಪಡಿಸಿದ್ದೆ. ಮುಂದೆ ಸಾಣೇಹಳ್ಳಿ ರಂಗಶಾಲೆ ವಿದ್ಯಾರ್ಥಿಗಳು

ಪ್ರಾಯೋಗಿಕವಾಗಿ ಈ ನಾಟಕವನ್ನು ಬೆಳಗಾವಿಯಲ್ಲಿ ನಡೆದ ವಿಶ್ವಕನ್ನಡ ಸಮ್ಮೇಳನದಲ್ಲಿ ಪ್ರದರ್ಶಿಸಿದ್ದರು. ಆದರೆ ನಾಟಕ ಪ್ರದರ್ಶನ ಕಂಬಾರರಿಗೆ ತೃಪ್ತಿ ತಂದಂತೆ ಕಾಣಲಿಲ್ಲ. ನಿರ್ದೇಶನದ ಬಗ್ಗೆ ಗೊಣಗಿದ್ದರು. ಈಗ ಹಲವು ಮಾರ್ಪಾಟುಗಳೊಂದಿಗೆ ೨೦೧೧ರ 'ಶಿವಸಂಚಾರ' ತಂಡ ರಾಜ್ಯಾದ್ಯಂತ ಪ್ರದರ್ಶಿಸಲು ಸಿದ್ಧವಾಗಿದೆ.

ಈ ಮೊದಲು ಕಂಬಾರರು ನನ್ನಿಂದ ವಚನ ಸಾಹಿತ್ಯದ ಹಿನ್ನೆಲೆಯಲ್ಲಿ ಬಸವಣ್ಣನ ಸುತ್ತಲಿನ ಕೆಲವು ಘಟನಾವಳಿಗಳನ್ನು ಕುರಿತು ಪುಟ್ಟ ನಾಟಕ ಬರೆಯಿಸಿ, ಅದನ್ನು ಚಿತ್ರೀಕರಿಸಿ ದೂರದರ್ಶನದಲ್ಲಿ ಪ್ರಸಾರ ಕೂಡಾ ಮಾಡಿದ್ದರು. ನೀಲಾಂಬಿಕೆಯ ಒಂದು ವಚನ: "ಕಲ್ಯಾಣವಿಲ್ಲ, ಕೈಲಾಸವಿಲ್ಲ ಬಸವಾ/ಕಲ್ಯಾಣವಿಲ್ಲದ ಕಾರಣ ಕೈಲಾಸವಿಲ್ಲವೆನಗೆ, ಬಸವಾ...." ನೆನಪಿಸಿಕೊಂಡು ವಸ್ತುವಿನ ಆಯ್ಕೆ, ನಿರೂಪಣೆಯನ್ನು ನಾಟಕಕ್ಕೆ ಅಳವಡಿಸಿದ್ದೆ. ಹಸ್ತಪ್ರತಿಯಲ್ಲದು ಇಪ್ಪತ್ತು ಪುಟಗಳಿದ್ದ ಪುಟ್ಟ ನಾಟಕ. ಮುಂದೆ ಅದೇ ವಸ್ತು ಇಟ್ಟುಕೊಂಡು ರಂಗಪ್ರದರ್ಶನಕ್ಕೆ ಹನ್ನೆರಡನೇ ಶತಮಾನದ ಶರಣ ಚಳವಳಿ ಕುರಿತು ನಾಟಕ ಸಿದ್ಧಪಡಿಸುವ ಮತ್ತೊಂದು ತಯಾರಿಯಲ್ಲಿದ್ದೇನೆ. ಇದಕ್ಕೆ ಕಂಬಾರರ ಒತ್ತಾಸೆ ಕಾರಣ. ಅವರಿಗೆ ಆತ್ಮೀಯರಾಗಿದ್ದ ಕೀರ್ತಿನಾಥ ಕುರ್ತಕೋಟಿ 'ಬಸವಣ್ಣನ ಕುರಿತು' ಬರೆದಿದ್ದ ಪುಟ್ಟ ನಾಟಕದ ಹಸ್ತಪ್ರತಿ ಏಕೋ ಇಷ್ಟವಾಗದೆ ಪಕ್ಕಕ್ಕಿಟ್ಟಿದ್ದರು. (ಅದರ ಒಂದು ಪ್ರತಿ ನನ್ನಲ್ಲೆ ಉಳಿದಿದೆ.)

ಕರ್ನಾಟಕ ಸರ್ಕಾರದ ವಿಧಾನಮಂಡಲದ ಗ್ರಂಥಾಲಯ ಸಮಿತಿ "ಪ್ರತಿಭಾನ್ವಿತ ಸಂಸದೀಯ ಪಟುಗಳು" (ಇದು ಲೋಕಸಭೆ/ರಾಜ್ಯಸಭೆಗೆ ಜಾರಿಗೆ ತಂದ ಯೋಜನೆ) ಮಾಲಿಕೆಯಲ್ಲಿ ಹರಿಹರ ಕ್ಷೇತ್ರ (೧೯೫೨-೧೯೭೪ ಅವಧಿ) ಪ್ರತಿನಿಧಿಸುತ್ತಿದ್ದ ಮಾಜಿ ಗೃಹಸಚಿವ, ಆರೋಗ್ಯ ಸಚಿವ ಎಚ್. ಸಿದ್ದವೀರಪ್ಪ ಅವರ ಬಗ್ಗೆ ಕೃತಿ ರಚಿಸಲು ತಿಳಿಸಿತ್ತು. ಒಪ್ಪಿ ಕ್ಷೇತ್ರ ಕಾರ್ಯದ ಕೆಲಸ ಶುರುಮಾಡಿದಾಗ ವ್ಯಕ್ತಿ ಮಾಹಿತಿಯ ಕೊರತೆಯಿಂದಾಗಿ ಅರ್ಧಕ್ಕೆ ನಿಲ್ಲಿಸಿದ್ದೆ. ಇದು ಆರೇಳು ವರ್ಷ ಕುಂಟುತ್ತಾ ನಡೆದಿತ್ತು. ಸಮಿತಿ ನನಗೆ ಕೊಟ್ಟ ಆದೇಶ ಹಿಂಪಡೆಯಿತು. (ಕಂಬಾರ, ಎಲ್. ಹನುಮಂತಯ್ಯ ಆಗ ವಿಧಾನ ಪರಿಷತ್ ಸದಸ್ಯರು) ಕಂಬಾರರು ಕರೆದು 'ಪುಸ್ತಕ ಬರೆದು ಮುಗಿಸಲು ನಿನಗೇನಯ್ಯ ಕಷ್ಟ? ಅಲ್ಲಿ ಇಲ್ಲಿ ಅಲೆಯೋದು ಕಮ್ಮಿ ಮಾಡಿ ಪಟ್ಟಾಗಿ ಕೂತು ಬರೆದು ಮುಗಿಸು. ಬೇಕಾದರೆ ಮತ್ತಷ್ಟು ಕಾಲಾವಕಾಶವನ್ನ ಸ್ಪೀಕರ್‌ಗೆ ಹೇಳಿ ಕೊಡಿಸೋಣ' -ಎಂದದ್ದಲ್ಲದೆ ಹಾಗೇ ಮಾಡಿ, ನನ್ನ ಸಂಗಾತಿ ಎಚ್.ಎಲ್. ಪುಷ್ಪಾಗೂ ಬೆನ್ನತ್ತಿ ಆಕೆಯಿಂದಲೂ ಒತ್ತಡ ಹಾಕಿಸಿ ಕೊನೆಗೂ ಪುಸ್ತಕ (೩೮೬ ಪುಟ) ಹೊರಬರಲು ಕಾರಣರಾದರು. ಅದು ಇದುವರೆಗೂ ಪ್ರಕಟವಾಗಿರುವ ಸಂಸದೀಯಪಟು ಮಾಲಿಕೆಯಲ್ಲೇ ಅತ್ಯುತ್ತಮ ಹಾಗೂ ಶ್ರೇಷ್ಠ ಮಾಹಿತಿಯ ಪುಸ್ತಕ ಎಂದು ಮೆಚ್ಚುಗೆಗೆ ಪಾತ್ರವಾಗಿದೆ. ಇದಕ್ಕೆ ಕಾರಣರಾದವರು ಕಂಬಾರರು. ಅವರಿಗೆ ಆಭಾರಿ. ಅದೊಂದು ಸಂಶೋಧನಾತ್ಮಕ ಗ್ರಂಥ. ತಪಸ್ಸಂತೆ ಕೂತು ಕೆಲಸ ಮಾಡಿದೆ. ಕಂಬಾರರ ಒತ್ತಾಸೆ, ಪ್ರೀತಿ ಇಲ್ಲದಿದ್ದರೆ ಅಂಥದ್ದೊಂದು ವಿಧಾನ ಮಂಡಲ ಗ್ರಂಥಾಲಯ ಪ್ರಕಟಣೆಯಲ್ಲಿ ದಾಖಲಾಗುವ ಕೃತಿ ಹೊರಬರುತ್ತಿರಲಿಲ್ಲ.

ಕಂಬಾರರು ಏರಿದ ಹುದ್ದೆಗಳ ಬಗ್ಗೆ, ಪಡೆದ ಪ್ರಶಸ್ತಿ, ಗೌರವಗಳ ಬಗ್ಗೆ ಮತ್ತೆ ಹೇಳುವ ಅಗತ್ಯ ಇಲ್ಲ. ಅವರು ಏರಿದ ಎತ್ತರ ಸೂರ್ಯಶಿಖರ! ಜ್ಞಾನಪೀಠದ ನೆಪದಲ್ಲಿ ನಾವು 'ಕನ್ನಡ-ಕಂಬಾರ'ರನ್ನು ಅರಿವುದು ಹೇಗೆ? ಈ ನೆಲದ ಭಾಷೆ, ಬದುಕು, ಸಂಸ್ಕೃತಿಯನ್ನು

ಮತ್ತಷ್ಟು ಶ್ರೀಮಂತಗೊಳಿಸುವುದು ಹೇಗೆ ಎಂಬ ಆಲೋಚನೆಯಲ್ಲಿ ಇತರೆ ಮಗ್ಗಲುಗಳ ಚರ್ಚೆಗೆ ಸಣ್ಣ ರಹದಾರಿ ಈ ಬರಹದ ಉದ್ದೇಶ.

ನಮ್ಮ ಭಾಗ್ಯ. ದೇಶದಲ್ಲಿ ಅತ್ಯಧಿಕ ಜ್ಞಾನಪೀಠ ಪಡೆದ ಕನ್ನಡ ನಾಡಿನಲ್ಲಿ ಕಂಬಾರ ಒಳಗೊಂಡಂತೆ ಅನಂತಮೂರ್ತಿ, ಕಾರ್ನಾಡರೂ ನಮ್ಮ ಜೊತೆ ಇದ್ದಾರೆ. ಒಬ್ಬೊಬ್ಬರದ್ದೂ ಒಂದೊಂದು ಸಾಂಸ್ಕೃತಿಕ ಬದ್ಧತೆ. ರಾಜ್ಯದ ಸಾಂಸ್ಕೃತಿಕ ಶ್ರೀಮಂತಿಕೆಗೆ ಅವರದ್ದೇ ಭಿನ್ನ ಆಲೋಚನೆಗಳು ಇರಬಹುದು. ಇವೆ. ಈ ಮೂವರ ಕನಸಿನ ಕರ್ನಾಟಕ ರೂಪುಗೊಳ್ಳಬೇಕಾಗಿದೆ. ಹೀಗೆ ಕನಸು ಕಂಡವರು ಇವರಷ್ಟೇ ಅಲ್ಲ. ಇವತ್ತೂ ರಾಜ್ಯದ ಪ್ರಗತಿಗೆ ಹಲವಾರು ಸಾಹಿತಿ, ಕಲಾವಿದರು, ಕನ್ನಡಪರ ಹೋರಾಟಗಾರರು ಬೀದಿಗೆ ಬಂದು ಹೋರಾಟ ನಡೆಸುತ್ತಿದ್ದಾರೆ. ಅವರೆಲ್ಲರ ವಿಚಾರಗಳು ಗಂಭೀರವಾದವುಗಳೇ. ರಾಜ್ಯ ರಾಜಕಾರಣ ದಿಕ್ಕೆಟ್ಟು ಹೊಲಸಾಗಿದೆ. ಭ್ರಷ್ಟಾಚಾರದ ಕಬಂಧಬಾಹು ದೈನಿಕ ಬದುಕನ್ನು, ಜನಸಾಮಾನ್ಯರ ಬದುಕನ್ನು ತತ್ತರಿಸುವಂತೆ ಮಾಡಿದೆ. ವಿಶ್ವಮಾರುಕಟ್ಟೆ, ಆಧುನಿಕ ತಂತ್ರಜ್ಞಾನ, ಜಾಗತೀಕರಣ, Global Village Concept ಗ್ರಾಮೀಣರ ಬದುಕನ್ನು ನರಕಸದೃಶ ಮಾಡಿವೆ. ನಗರಗಳು ಸೊಕ್ಕಿ ಬೆಳೆಯುತ್ತಿವೆ. ರಾಜ್ಯದ ಭೂಮಿ, ಗಣಿ ಸಂಪತ್ತು ಲೂಟಿಯಾಗಿದೆ. ಇಂಗ್ಲಿಷ್ ಶಿಕ್ಷಣ ಹೆಗಲೇರಿ ಕುಳಿತು ಕನ್ನಡಮ್ಮನನ್ನು ನುಂಗಿ ನೊಣೆಯುತ್ತಿದೆ. ನಾವೆಲ್ಲರೂ ಈ ಸಾಮ್ರಾಜ್ಯಶಾಹಿ ಭಾಷೆಯ ಗುಲಾಮರಾಗಿದ್ದೇವೆ. ಇವೆಲ್ಲವೂ ಇವತ್ತಿನ ಆತಂಕಗಳೇ...

ಕಂಬಾರರು ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಬೆಳೆದುಬಂದ ಅನೇಕ ಚಳವಳಿಗಳ (ಅಭ್ಯಾಸಯೋಗ್ಯ) ಘಟ್ಟಗಳನ್ನು ದಾಟಿ ಬಂದಿದ್ದಾರೆ. ನವ್ಯಸಾಹಿತ್ಯ ಪ್ರಖರವಾಗಿದ್ದಾಗ – ಪಾಶ್ಚಾತ್ಯ ಸಾಹಿತ್ಯದ ಪ್ರಭಾವದಿಂದ ಮಣ್ಣಿನ ವಾಸನೆ ದೂರವಾಗಿ ಮುಸುಕು ಎಳೆದುಕೊಂಡಿದ್ದ ಈ ಪ್ರಕಾರದ ಗರ್ಭದಲ್ಲೇ ಕಾಲೂರಿ, ಟಿಸಿಲೊಡೆದು, ಕೊಂಬೆರೆಂಬೆ ಚಾಚಿಕೊಂಡಿದ್ದವರು ಕಂಬಾರರು. ನವ್ಯದಲ್ಲಿ ಪ್ರಯೋಗಶೀಲರಾಗಿದ್ದ ಅಡಿಗರೇ ಇವರ ವೃತ್ತಿ ಬದುಕಿಗೆ ಕೈ ಜೋಡಿಸಿದ್ದರು. ಅಡಿಗರಂಥವರ ಸಹವಾಸದಲ್ಲಿದ್ದರೂ ನವ್ಯವನ್ನೇ ಮೈಮೇಲೆ ಎಳೆದುಕೊಳ್ಳಲಿಲ್ಲ. ಎ.ಕೆ. ರಾಮಾನುಜನ್ ಬಳಿ ಇದ್ದರೂ ಪೂರ್ಣ ನವ್ಯದವರೂ ಆಗಲಿಲ್ಲ. ಜಾನಪದ ಹಾಗೂ ಪ್ರಾದೇಶಿಕ ಸೊಗಡು, ಹಳ್ಳಿಗಾಡಿನ ದಟ್ಟ ಅನುಭವ, ಕೂಡುಕುಟುಂಬಗಳ ನಂಟು, ಗ್ರಾಮೀಣ ಸಂಸ್ಕೃತಿಯ ಛಾಪು – ಇವೆಲ್ಲಾ 'ಕಂಬಾರತನ'ಕ್ಕೆ ದಾರಿ ಮಾಡಿವೆ. ದೇಸಿ ಚಿಂತನೆ, ಅವರ ಬದುಕು ಬರಹದ ಭಾಗ.

"ಎಷ್ಟು ತಿಳಿಯಾಗಿತ್ತು ನಮ್ಮೂರ ಹೊಳೆ ಆಗ!
ಹೆಸರು ಗೊತ್ತಿಲ್ಲದ ಹಸಿರು ದೇವರೆಷ್ಟೋ ಮಂದಿ
ನದಿಯಲ್ಲಿ ನೀರಾಟವಾಡಿದುದ ನಾವೆ ಕಂಡಿದ್ದೇವೆ!
ದಡದಲ್ಲಿ ಜಂಬುನೇರಳೆ ಹಣ್ಣು,
ಕೆಳಗೆ ತಿಳಿನೀರಿನಲ್ಲಿ ಸಾವಿರಾರು ಕಣ್ಣು!..."

ತುಂಬಿ ಹರಿವ ನದಿಯೆಂದರೆ ಅದು ಚಲನೆ. 'ನದಿ' ಬದುಕಿನ ಹೊಸರಾಗ ಹೊಮ್ಮಿಸುವ ಸಂಕೇತ. ಗಂಡು ಹೆಣ್ಣಿನ ನಡುವಿನ ಬೆಸುಗೆಯಲ್ಲಿ ಇವರ ಸುತ್ತುಬಳಸನ್ನು ಬದುಕಿನ ಪರಿಳಿತಗಳನ್ನು ಗುರ್ತಿಸುವಲ್ಲಿ ಸಫಲರಾದರು. ತಮ್ಮ ಹುಟ್ಟಿನ ಬಾಲ್ಯದ ನೆನಪನ್ನು ಹೀಗೆ

ಅರ್ಥಪೂರ್ಣವಾಗಿ ಮಾಡಿಕೊಂಡಿದ್ದಾರೆ.

ಬಂಡಾಯ ಸಾಹಿತ್ಯದ ಬೇರು ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದಲ್ಲಿ ಚಾಚಿತ್ತು. 'ಖಡ್ಗವಾಗಲಿ ಕಾವ್ಯ, ಜನರ ನೋವಿಗೆ ಮಿಡಿವ ಪ್ರಾಣಮಿತ್ರ' ಎಂಬುದು ಬಂಡಾಯದ ಧ್ಯೇಯವಾಕ್ಯವಾಗಿತ್ತು. ಮೂರ್‍ನಾಲ್ಕು ಗಟ್ಟಿಬೀಜಗಳು ಅಲ್ಲಿ ಕುಡಿಯೊಡೆದಿದ್ದವು. ವೈಚಾರಿಕತೆಯ ಅರಿವು, ಸಾಮಾಜಿಕ ಅಸಮಾನತೆಯ ಬೇಗುದಿ, ಶೋಷಣೆ, ದೌರ್ಜನ್ಯಗಳ ಕಪಿಮುಷ್ಟಿಯಲ್ಲಿ ಒಟ್ಟು ವ್ಯವಸ್ಥೆಯೇ ಸಿಲುಕಿತ್ತು. ಇವುಗಳ ವಿರುದ್ಧದ ದನಿಗೆ ಬಂಡಾಯ ಸಾಹಿತ್ಯ ವೇದಿಕೆಯಾಗಿತ್ತು. ೧೨ನೇ ಶತಮಾನದ ವಚನ ಚಳವಳಿಯ ನಂತರ ಕನ್ನಡ ಸಾಹಿತ್ಯದಲ್ಲಿ ಹೊಸ ಸಂವೇದನೆಯ ದನಿಗಳು ಕೇಳಿಬರುತ್ತಿದ್ದವು. ಗ್ರಾಮೀಣ ಸಂವೇದನೆ, ಮುಸ್ಲಿಮ್ ಸಂವೇದನೆ, ದಲಿತ ಸಂವೇದನೆ ಹೊಸ ಹಾದಿ ತುಳಿದಿದ್ದವು. ಕಂಬಾರರು ಈ ಸಾಹಿತ್ಯದ ಸೃಷ್ಟಿಯತ್ತ ಸುಳಿಯದೆ ತಾವು ನಂಬಿಕೊಂಡು ಬಂದ ತಿಳಿವಿನ ಸಾಹಿತ್ಯಧರ್ಮಕ್ಕೆ ಬದ್ಧವಾಗಿದ್ದರು. ನಾನಿಲ್ಲಿ ಕಂಬಾರರು ಬಂಡಾಯಕ್ಕೆ ಬರಲಿಲ್ಲ, ಬಂಡಾಯ ಸಾಹಿತ್ಯ ಬರೆಯಲಿಲ್ಲ ಎಂದು ಹೇಳುತ್ತಿಲ್ಲ ಅವರು ಬಂದ ಓಸ್ಸೆಲೆಯಲ್ಲಿ ಅವರು ಬರೆಯುವುದೇ ಬಂಡಾಯವಾಗಿತ್ತು. "ಕಬ್ಬಿಣ ಕಾಯಿಸುವ ಕೆಲಸ ಮಾಡೋರೆಲ್ಲ ಕಾವ್ಯ ಬರೀತಾರ" ಎಂಬ ಮೂದಲಿಕೆ ಧಾರವಾಡದ ದೊಡ್ಡ ಕವಿ ಬೇಂದ್ರೇ ಮಾಡಿದ್ದು ಅವರು ಮರೆತಿರಲಿಲ್ಲ. ಹೀಗಾಗಿ ಛಲದಿಂದ ಬರೆದರು.

ಈ ನಡುವೆಯೇ ನಾವು ಕಂಬಾರರ ಜಾನಪದ ಶೈಲಿ, ಬೆಳಗಾವಿ ಕರದಂಟಿನಂಥ ಸಿಹಿ ರುಚಿಯನ್ನು ಚಪ್ಪರಿಸುತ್ತಲೇ 'ಜೋಕುಮಾರಸ್ವಾಮಿ'ಯಲ್ಲಿ, 'ಕರಿಮಾಯಿ'ಯಲ್ಲಿ, 'ಸಂಗ್ಯಾಬಾಳ್ಯಾ'ದಲ್ಲಿ ಭಾಷೆ ಹಾಗೂ ನೆಲದ ಕಸುವನ್ನು, ಗಂಡು-ಹೆಣ್ಣಿನ ಲೈಂಗಿಕ ಸಂಬಂಧಗಳನ್ನು ಅರ್ಥಮಾಡಿಕೊಳ್ಳಲು ಯತ್ನಿಸಿದ್ದೆವು. ಆ ಸಂದರ್ಭದಲ್ಲೇ 'ಸಿಂಗಾರವ್ವ ಮತ್ತು ಅರಮನೆ', 'ಜೀಕೆ ಮಾಸ್ತರ ಪ್ರಣಯ ಪ್ರಸಂಗ'ದಂಥ ಭಿನ್ನಶೈಲಿ, ವಸ್ತುನಿರೂಪಣೆಯ ಗದ್ಯ, ಕಾವ್ಯದಲ್ಲಿ ಬೆಳಗಾವಿಯ ನೆಲದ ಸತ್ವಯುತ 'ಬನಿ'ಯನ್ನು ಉಣಬಡಿಸಿದ್ದರು. ಹಾಗೆಯೇ ಹಾಡು-ಕುಣಿತ ಇವರ ನಾಟಕಗಳಲ್ಲಿ ವಿಶಿಷ್ಟ ಅನುಭವವನ್ನೇ ನೀಡಿದ್ದವು.

* * * *

ಈ ಪ್ರತಿಷ್ಠಿತ ಪ್ರಶಸ್ತಿ ಪ್ರಕಟವಾದಾಗ ಸ್ವತಃ ಕಂಬಾರರೇ ನಂಬದಾದರಂತೆ! ಈ ಹಿಂದೆಯೂ ಇಂಥದ್ದೊಂದು ಸುದ್ದಿ ಹುಟ್ಟಿದಾಗ ಅದು ಸುಳ್ಳಾದ್ದರಿಂದ ಅವರಿಗೆ ಹಾಗೆ ಅನ್ನಿಸಿತ್ತಂತೆ. ಮುಂದಿನದ್ದೆಲ್ಲ ಮಾಧ್ಯಮಗಳಲ್ಲಿನ ಸುದ್ದಿ-ಕತೆ. ಪಾಪ! ಅವರವರ ಭಾವಕ್ಕೆ, ಅವರವರ ಭಕುತಿಗೆ ತಕ್ಕಂತೆ (ಸಾಮರ್ಥ್ಯ?) ಸುದ್ದಿ. ಅವರು ಬರೆಯದ ಕೃತಿಗಳ ಹೆಸರು, ಅವರು ಲೇಖನಿ ಹಿಡಿಯದ ಕ್ಷೇತ್ರ ಎಲ್ಲವನ್ನು ಇಪ್ಪತ್ನಾಲ್ಕು ಗಂಟೆ ಸುದ್ದಿ ಬಿತ್ತರಿಸುವ ತರಾತುರಿಯ ವಿದ್ಯುನ್ಮಾನ ಮಾಧ್ಯಮಗಳು ಅನೇಕ ತಪ್ಪು ಮಾಹಿತಿ ರವಾನಿಸಿದವು. ನನ್ನ ಅನುಭವದಲ್ಲಿ ಹೇಳೋದಾದ್ರೆ ಯಾವುದೇ ಮಾಧ್ಯಮದಲ್ಲೂ ಸಾಹಿತ್ಯ-ಸಂಸ್ಕೃತಿಯ ಸುದ್ದಿ ಕೊನೆಯ ಪುಟದ ಕೊನೆಯ ಸಾಲು - ಇಲ್ಲ, ಅದು ಆಟಕ್ಕುಂಟು ಲೆಕ್ಕಕ್ಕಿಲ್ಲ! ಆದರೆ ಜ್ಞಾನಪೀಠ ಪ್ರಶಸ್ತಿಯೇ ಕನ್ನಡದ ಕಿರೀಟಪ್ರಾಯ ಎಂದು ಬೊಬ್ಬಿಡುವವರೂ ಅವರೇ....

ಹಾಗಾದರೆ ಮಾಡಿದ್ದೇನು? ಇಲ್ಲಿ ಒಂದಷ್ಟು ಒಳ್ಳೆಯ ಕೆಲಸವೂ ಎರಡು ಮೂರು ದಿನಗಳ ವಿದ್ಯುನ್ಮಾನ ಮಾಧ್ಯಮಗಳಲ್ಲಿ ಆಗಿದೆ. ಒಂದು ಚಾನೆಲ್‌ನಲ್ಲಿ ಪ್ರಕಾಶ ಬೆಳವಾಡಿ ಸಾಹಸ ಮಾಡಿ ಈಗಿರುವ ಮೂವರು ಜ್ಞಾನಪೀಠ ದಿಗ್ಗಜರನ್ನು ಒಂದೆಡೆ ಸೇರಿಸಿ ಒಂದಷ್ಟು ಚರ್ಚೆ ನಡೆಸಿದ್ದು ಮೆಚ್ಚುವಂತಾದ್ದು. ಇನ್ನೊಂದು ಚಾನೆಲ್ ಕಂಬಾರರೂ ಸೇರಿದಂತೆ ಶಿವಮೊಗ್ಗ ಸುಬ್ಬಣ್ಣ ಮೊದಲಾದವರನ್ನು ಸೇರಿಸಿ 'ಗೀತಗೌರವ' ಸಲ್ಲಿಸಿದ್ದು ಅರ್ಥಪೂರ್ಣ. ಮತ್ತೊಂದೆಡೆ ಬರಗೂರು, ಸಿ.ಆರ್. ಸಿಂಹ ಅವರುಗಳನ್ನು ಒಳಗೊಂಡ ನೆನಪಿನ ಚರ್ಚೆಯೂ ಉತ್ತಮವಾಗಿತ್ತು.

**ಅಸಹನೆಯ ಕೆಂಡ ಕಾರಿದವರು:**

ಆದರೆ ಒಂದು ಸತ್ಯ ಹೇಳಲೇಬೇಕು. ೧೯೭೭ರಲ್ಲಿ ಕಾರ್ನಾಡರಿಗೆ ಜ್ಞಾನಪೀಠ ಪ್ರಕಟವಾದಾಗ ಮುಖಪುಟ ಪೂರ್ತಿ ದಪ್ಪದಪ್ಪ ಅಕ್ಷರಗಳಲ್ಲಿ ಭಾರೀ ಸುದ್ದಿ ಮಾಡಿದ್ದ ಪತ್ರಿಕೆಗಳು ಕಂಬಾರರಿಗೆ ಮೂರು, ನಾಲ್ಕು ಕಾಲಂ ಸುದ್ದಿ, ಒಳಗೊಂದು ಪುಟದಲ್ಲಿ ಅನಿಸಿಕೆ ಪ್ರಕಟಿಸಿ ಕೈ ತೊಳೆದುಕೊಂಡವು. ಜತೆಗೆ ಕಂಬಾರರಿಗೆ ಈ ಪುರಸ್ಕಾರ ಬಂದಿದಕ್ಕೆ ಅಸೂಯೆಯಿಂದ ಒಳಗಿನದ್ದನ್ನು ಕಕ್ಕಿದವರು ಪತ್ರಿಕಾಬ್ರಹ್ಮ(?) ಪಾಟೀಲ ಪುಟ್ಟಪ್ಪ! ಪಾಪ, ಈ 'ಪಾಪು'ಗೆ ತೊಂಬತ್ತರ ಅರೆಪ್ರಜ್ಞಾವಸ್ಥೆ. ಹಾಸಿಗೆ ಹಿಡಿದಿರುವ ಅವರಿಗೆ ಅರಳು ಮರಳಲ್ಲ! ಮಾತಲ್ಲಿ ಸ್ಥಿಮಿತತೆ ಇಲ್ಲ. ಬೌದ್ಧಿಕಶಕ್ತಿ, ಆಲೋಚನೆ ಕುಗ್ಗಿಹೋಗಿದೆ. ಒಂದು ಕಾಲದಲ್ಲಿ ಅವರನ್ನು ಆರಾಧಿಸಿ ಅವರ ಅಪಾರ ನೆನಪಿನ ಶಕ್ತಿಗೆ ತಲೆದೂಗಿ 'ಚಲಿಸುವ ವಿಶ್ವಕೋಶ' ಎಂದೆಲ್ಲ ಬೆಳಗಾವಿ ಸಾಹಿತ್ಯ ಸಮ್ಮೇಳನದ ಸಂದರ್ಭದಲ್ಲಿ 'ಅನ್ವೇಷಣೆ'ಯ ಸಂಪಾದಕೀಯ ಬರೆದಿದ್ದ ನನಗೆ ಪಾಪು ಮಾತಿನಿಂದ – ತಲೆ ತಗ್ಗಿಸುವಂತಾಯಿತು. ಇವರಿಗೆ ಹುಚ್ಚು ಹಿಡಿದಿದೆಯೆ? ನಿಮ್ಹಾನ್ಸ್ ತಜ್ಞರು ಪರೀಕ್ಷಿಸಬೇಕೆ? ಈಗ ಬಂದಿರುವ ಜ್ಞಾನಪೀಠ ಪ್ರಶಸ್ತಿಯು ಮತ್ತೊಬ್ಬ ಪ್ರತಿಭಾನ್ವಿತ ಕನ್ನಡಿಗನಿಗೆ ಬಂದಿದೆ ಎಂದು ಸ್ವಾಗತಿಸುವ ಬದಲು ಹುಚ್ಚುಹುಚ್ಚಾಗಿ ನಾಲಗೆ ಹರಿಬಿಟ್ಟಿದ್ದು ಎಷ್ಟುಸರಿ? ಮನುಷ್ಯ ವಿರೋಧಿ, ಹಿಂದೂ ಧರ್ಮದ ವಕ್ತಾರನಂತೆ ಪುಂಖಾನುಪುಂಖ 'ಕವಲು'ದಾರಿಯಲ್ಲಿ ನಿಂತ 'ಅನ್ವೇಷಣ'ದ ಲೇಖಕರೊಬ್ಬರಿಗೆ ಜ್ಞಾನಪೀಠದ ಕಿರೀಟ ತೊಡಿಸಿದ್ದರೆ ಇವರು ಚೊಂಬು ಹಾಲು ಕುಡೀತಿದ್ದರಂತೆ! ಹಿಂದೆ ಅನಂತಮೂರ್ತಿ ಅವರಿಗೆ ಜ್ಞಾನಪೀಠ ಬಂದಾಗಲೂ ಸಾಕಷ್ಟು ಅಸಹನೆಯ ಕೆಸರಾಟ ನಡೆಸಿದ್ದರು ಈ ಮಹಾಶಯರು. ಆರೋಗ್ಯಕರ ಮನಸ್ಸು ಇಲ್ಲದ ಇವರ ಬಗ್ಗೆ ಜನ ಆಡಿಕೊಂಡದ್ದು ಕಿವಿಗೆ ಬಿದ್ದಿದೆ. ಲಿಂಗಾಯಿತರಲ್ಲಿ ಯಾರಿಗಾದರೂ ಜ್ಞಾನಪೀಠ ಬಂದಿದ್ದರೆ ಖುಷಿ ಆಗುತ್ತಿತ್ತೇ? ಪಾಪ, ಎಂಟು ಜನರಲ್ಲಿ ಇಬ್ಬರು ಶೂದ್ರರು, ಆರು ಜನ ಬ್ರಾಹ್ಮಣರು. ಕನ್ನಡದಲ್ಲಿ ಮೊದಲ ಜ್ಞಾನಪೀಠ ಪಡೆದ ಕುವೆಂಪು ಹಾಗೂ ಈಗ ಎಂಟನೇ ಜ್ಞಾನಪೀಠ ಪಡೆದ ಕಂಬಾರರನ್ನು ಹೊರತುಪಡಿಸಿ ಮಿಕ್ಕ ಆರು ಜನರಿಗೂ ಜ್ಞಾನಪೀಠ ಬಂದಾಗಿನ ಆಯ್ಕೆ ಸಮಿತಿಯಲ್ಲಿ ಕನ್ನಡಿಗರಿದ್ದರು. ಯಾರದ್ದಿರಬಹುದು? ಊಹೆ ನಿಮಗೆ ಬಿಟ್ಟಿದ್ದು. ಈ ಸಾರಿ ಒರಿಸ್ಸಾದ ಖ್ಯಾತ ಕವಿ ಡಾ. ಸೀತಾಕಾಂತ ಮಹಾಪಾತ್ರ ಆಯ್ಕೆ ಸಮಿತಿ ಅಧ್ಯಕ್ಷರು. ಕನ್ನಡಿಗರು ಇಲ್ಲದೆ ಆಯ್ಕೆ ಆದವರಲ್ಲಿ ಇಬ್ಬರು ಶೂದ್ರ ಪ್ರತಿಭೆಗಳೇ. ಹಾಗಾದರೆ ದಶಕಗಳ ಅಂತರದಲ್ಲಿ ಕನ್ನಡಕ್ಕೆ ಜ್ಞಾನಪೀಠ ಬಾರದಿರಲು ಕಾರಣರಾರು? ಆ ಸಮಿತಿಯಲ್ಲಿ ಇದ್ದವರು ಯಾರಿಗೆ ಪ್ರಯೋಜನ ಮಾಡಿರಬಹುದು ಪಾಪು ಅವರೇ?

ಯೋಚಿಸಿ. ಯಾರ ಮೇಲೆ ನಿಮಗೆ ಕೋಪ? ಏನಕ್ಕೆ ಕಂಬಾರರ ಮೇಲೆ ಸೇಡಿನ ಮಾತು?

ಬೆಳಗಾವಿಯ ಕವಿ, ಪತ್ರಕರ್ತ ಗೆಳೆಯ ಸರಜೂಗೆ ಆ ದಿನ ಬೆಳಗ್ಗೆಯೇ ಕೆಲವು ಹಿಂದುಳಿದ ವರ್ಗದ ಸ್ನೇಹಿತರು ಫೋನ್ ಮಾಡಿ 'ಪಾಟೀಲ ಪುಟ್ಟಪ್ಪನಿಗೆ ತಲೆ ಸರಿ ಇಲ್ಲವೇನ್ರೀ?' ಎಂದು ಪ್ರಶ್ನಿಸಿದ್ದಾರೆ. ಕಂಬಾರರು ತಮ್ಮ ಬರಹದಲ್ಲಿ ಲಿಂಗಾಯಿತರ ಬಗ್ಗೆಯೇ ಸ್ಮರಿಸಿಕೊಳ್ಳೋದನ್ನು ಅವರು ನೆನಪಿಸಿದ್ದಾರೆ. ನಾಟಕದೊಳಗೆ ಮೊದಲ ನಮೂನವೇ 'ಸಾವಳಗಿ ಶಿವಲಿಂಗ', 'ಘೂಸನೂರು ಮಠದಯ್ಯ'ನಿಗೆ. ಅನ್ನ ಕೊಟ್ಟ, ಅಕ್ಷರ ಕೊಟ್ಟ ಘೂಸನೂರು ಮಠದಯ್ಯ ಯಾರು? ಕಂಬಾರರಿಗೆ ಇರುವ ಕೃತಜ್ಞತೆ, ಸ್ವಾಮಿನಿಷ್ಠೆ ಪ್ರಶ್ನಿಸುವಂಥಾದ್ದೇ? ಲೇವಡಿಗೆ ಯೋಗ್ಯವೇ? ಒಟ್ಟಿನಲ್ಲಿ ಪಾಪು ಅವರ ಒಕ್ಕಣೆ: 'ಲಿಂಗಾಯಿತರಿಗೆ ಸಂತೋಷ ಆಗಿಲ್ಲ' ಅನ್ನುವ ನೋವೆ? ಅದಲ್ಲದಿದ್ದರೆ ಭೈರಪ್ಪನವರ ಮೇಲೆಂಥ ಪ್ರೀತಿ? ಜೀವವಿರೋಧಿ, ಕೋಮು ಭಾವನೆಯ ಭೈರಪ್ಪ ಅವರ ಎಷ್ಟು ಕೃತಿಗಳನ್ನು ಪಾಪು ಓದಿದ್ದಾರೆ? ದಾಟು, ಕವಲು ಮೊದಲಾದುವುಗಳಲ್ಲಿ ಪ್ರತಿಪಾದಿಸುವುದೇನು?

ರಾಷ್ಟ್ರಕವಿ ಜಿ.ಎಸ್. ಶಿವರುದ್ರಪ್ಪ, ಸಂಶೋಧಕರಾದ ಎಂ. ಚಿದಾನಂದ ಮೂರ್ತಿ, ಗೊರುಚ, ಎಂ.ಎಂ.ಕಲಬುರ್ಗಿ, ಕವಿ ಎಚ್.ಎಸ್. ಶಿವಪ್ರಕಾಶ್ ಮೊದಲಾದವರು ಯಾರು? ಇವರೆಲ್ಲ ಒಡಕು ದನಿಯಲ್ಲಿ ಎಲ್ಲೂ ಮಾತಾಡಿಲ್ಲ. ಕಂಬಾರರಿಗೆ ಪ್ರಶಸ್ತಿ ಬಂದದ್ದು ಕರ್ನಾಟಕವೇ ಹೆಮ್ಮೆ ಪಡುವ ಸಂಗತಿ ಅಲ್ಲವೆ? ನಮ್ಮಲ್ಲಿನ ಅಲ್ಪತನ, ಸಣ್ಣತನ, ಅಸೂಯೆ, ಈರ್ಷ್ಯೆ, ದುರುಳತನವನ್ನು ದೂರ ಇಟ್ಟರೆ ಮಾತ್ರ 'ಜಾತ್ಯಾತೀತ'ವಾಗಿಯೂ ಯೋಚಿಸಬಹುದು.

* * * *

ಪ್ರಶಸ್ತಿ ಬಂದು ಐದಾರು ದಿನಗಳಾಗಿತ್ತು. ಖುದ್ದು ಭೇಟಿ ಮಾಡಿ ಅಭಿನಂದಿಸಿರಲಿಲ್ಲ. ನಾನು, ಪುಷ್ಪಾ, ಮಗಳು ಅಂಕಿತ ಕಂಬಾರರ ಮನೆಗೆ ಹೋದೆವು. ಅವರು ಹಾಗೂ ಅವರ ಕುಟುಂಬದ ಜೊತೆ ಹರಟುತ್ತಾ ಒಂದು ಗಂಟೆ ಕಳೆದದ್ದೇ ತಿಳಿಯಲಿಲ್ಲ. ಆಗಲೂ ಸಾಕಷ್ಟು ಜನ ಹಾರ, ಹಣ್ಣು, ಶಾಲು ತಂದು ಫೋಟೋ ಕ್ಲಿಕ್ಕಿಸುತ್ತಿದ್ದರು. ನಡುವೆ ಪಾಪು ಅವರ ಒಡಕು ಮಾತು ಪ್ರಸ್ತಾಪಕ್ಕೆ ಬಂತು. "ನನಗೂ ತುಂಬಾ ಕೆಟ್ ಅನ್ನಿಸ್ತು. ಹಂಪಿ ವಿಶ್ವವಿದ್ಯಾಲಯದ ಕುಲಪತಿ ಆಗಿದ್ದಾಗ ಮೊದಲ ಬಾರಿಗೆ ಕೊಡಮಾಡಿದ್ದ 'ನಾಡೋಜ' ಗೌರವಕ್ಕೆ ಎಷ್ಟೊಂದು ಒತ್ತಡ ತಂದಿದ್ದು... ಅವರಿಗೆ ಕೊಡೋಕೆ ಬರ್ತಿರಲಿಲ್ಲ. ಯಾಕಂದ್ರ ಆಗಿನ್ನೂ ಇವರಿಗಿಂತ ಹೆಚ್ಚು ಸಾಧನೆ ಮಾಡಿದ್ದ ಹಿರಿಯರಿದ್ದರು. ಶಿವರಾಮ ಕಾರಂತರಿಗೆ ಇನ್ನೂ ಈ ನಾಡೋಜ ಕೊಟ್ಟಿರಲಿಲ್ಲ. ಈ ಪಾಪುಗೆ ಮುಂದೆ ನೋಡಿದರಾಯಿತು ಎಂದರೆ, ಒತ್ತಡ ಹಾಕಿ 'ನಾಡೋಜ' ಹೊಡಕೊಂಡ!" – ಪಾಪು ಕಥೆ ಕೇಳಿ ನಾವು ಬೆಚ್ಚಿದೆವು.

* * * *

ನಮ್ಮ 'ಸಂಕ್ರಮಣ' ಚಂಪಾ ದ್ವೈಮಾಸಿಕವೊಂದರಲ್ಲೂ ತಾವು ಕಂಡಂತೆ, ಕಂಡಷ್ಟು ಬರೀತಾರೆ. ಚಂಪಾ ಅಂದ್ರೆ–ಮೊನಚು. ಅವರ wit – ವ್ಯಂಗ್ಯ(ಹಾಸ್ಯವಲ್ಲ) ಬೆಚ್ಚಿ ಬೀಳಿಸಿದ್ದೂ ಕೆಲವೊಮ್ಮೆ ಉರಿಸು ಮುರಿಸು.

'...ಸಾಹಿತ್ಯೇತರ ಆಯಾಮಗಳ ಬಗ್ಗೆ ನಾನು ಕಡಿಮೆ ಮಾತಾಡಿದಷ್ಟೂ ಒಳ್ಳೆಯದು...

ನಾನು ಕಂಬಾರನ ಬಗ್ಗೆ ಪ್ರೀತಿಯಿಂದ, ಚೇಷ್ಟೆಯಿಂದ ಬರೆದ ಕವನ ಇಲ್ಲಿದೆ' ಎಂದು 'ನಮ್ಮ ಕಂಬಾರ' ಅನ್ನೋ ಕವನ ಮರು ಓದಿಗೆ ದಾಖಲಿಸಿದ್ದಾರೆ. ಒಟ್ಟು ಬರಹದಲ್ಲಿ ಇನ್ನೂ ಜಾಸ್ತಿ ಇದ್ದಿರಬಹುದಾದ್ದನ್ನು ಆ ಪತ್ರಿಕೆಯ ಸಂಪಾದಕೀಯ ಟೇಬಲ್‌ನಲ್ಲಿ ಒಂದಷ್ಟು ಕತ್ತರಿ ಪ್ರಯೋಗಕ್ಕೂ ಒಳಪಡಿಸಿರಬಹುದು!

"ಈ ಸಂದರ್ಭ ಹೀಗೆ ಬರೆಯೋದು ಸರಿ ಇರಲಿಲ್ಲ" ಎಂದು ಕುಂದಾಪುರದ ಕವಿ ಎಸ್. ಕೃಷ್ಣ ಅಮಾಸೆಬೈಲು ಚಡಪಡಿಸಿದ.

"ಹೌದಪ್ಪ ಅವರು ಇಬ್ರೂ ಅರವತ್ತರ ದಶಕದಿಂದ ಕೂಡಿ ಬೆಳೆದ ಗೆಣೆಕಾರ್ರಂತೆ. ಕಂಬಾರರನ್ನ ಈ ದೋಸ್ತ ಹೀಂಗ 'ಹಿಂಭಾರ... ಮುಂಭಾರ...' ಅಂತ ವ್ಯಂಗ್ಯ ಆಡಿದ್ದು ನನಗೂ ಛಲೋ ಅನ್ನಸ್ಲಿಲ್ಲ. ಆದ್ರ ವಿಚಿತ್ರ ಏನಪ್ಪ ಅಂದ್ರ, ಅರಳುಮರಳ ಆ ನಾಡೋಜ 'ಪಾಪು'ನ್ನ ಚಂಪಾ ಧಾರವಾಡದ ನೆಲಕ್ಕೆ ಹೋಗಿ ತೀಡಿ ಬಂದ್ರಲ್ಲ, ಅದು ಖರೇ ಖುಷಿ ಆಯ್ತು ನೋಡಪ್ಪ ಮತ್ತ' ಅಂದೆ. 'ಹೌದುರೀ ಅದನ್ನೂ ಗಮನಿಸಿದ್ದೀನಿ. ಆದರೆ...ಚಂಪಾರ ಚಾಷ್ಟಿ ಈ ಸಂದರ್ಭ ಅನಗತ್ಯವಾಗಿತ್ತು' ಅಂದ.

ಒಂದು ಕಾಲದಲ್ಲಿ ವೈಚಾರಿಕವಾಗಿ ಪ್ರಬುದ್ಧನಾಗಿ, ಕ್ರಾಂತಿ ಬಗ್ಗೆ, ಮಾರ್ಕ್ಸ್‌ವಾದದ ಬಗ್ಗೆ ಮಾತಾಡುತ್ತಿದ್ದ ಈ ಹುಡುಗನ 'ನನ್ನ ಹೃದಯ ಮಂದಿರ'(೧೯೯೩) ಕವನ ಸಂಕಲನಕ್ಕೆ ಬರಗೂರು ಮುನ್ನುಡಿ ಬರೆದಿದ್ದರು. ನಾನೇ ಮುದ್ರಿಸಿದ್ದ ಆ ಸಂಕಲನದ ಅರ್ಧದಷ್ಟು ಪ್ರತಿಗಳು ನನ್ನಲ್ಲೇ ಉಳಿದಿದ್ದವು. ಕೆಲವರ್ಷ ಎಲ್ಲೋ ಮಾಯವಾಗಿದ್ದ. ಏನಾಯಿತೋ ಒಂದು ದಿನ ಇದ್ದಕ್ಕಿದ್ದಂತೆ 'ಈಶ್ವರೀ ವಿದ್ಯಾಲಯ' ಸೇರಿದ್ದ! ಆತ್ಮ-ಪರಮಾತ್ಮ ಅಂತಾ ಕನವರಿಸತೊಡಗಿದ. ಮೌಂಟ್‌ಅಬುಗೂ ಹೋಗಿಬಂದ. ಹೀಗಿದ್ದರೂ ಈ ಹುಡುಗ ಶ್ರಮಜೀವಿ. ಎರಡು ಚಕ್ರಗಳ ಗಾಡಿ ಮೇಲೆ 'ಮನೆ ಕ್ಲೀನ್ ಮಾಡೋ ಕೆಮಿಕಲ್ಸ್' ಹೊತ್ತು ಅಂಗಡಿ ಅಂಗಡಿಗೆ ತಲುಪಿಸುತ್ತಾನೆ. ಈ ಕಾಯಕದಲ್ಲಿ ಅವನಿಗೆ ತೃಪ್ತಿ ಇದ್ದಂತೆ ಕಾಣುತ್ತೆ. ಕಂಬಾರರ ಬಗ್ಗೆ ಚಂಪಾ ಹಿಂಗ ಲೇವಡಿ ಮಾಡಿದ್ರಲ್ಲ, ಅದಕ್ಕಾ ಅವ್ನು ಹುಡುಕಿಕೊಂಡು ಬಂದು ಬ್ಯಾಸರ ವ್ಯಕ್ತಪಡಿಸಿದ್ದ. ಇರಲಿ ಅವರವರ ಭಾವ ಅವರವರ ಭಕುತಿ!

ಲೇಖನ ಮುಗಿಸುವ ಮೊದಲು ಕವಿ, ನಾಟಕಕಾರ ಗೆಳೆಯ ಎಲ್.ಎನ್. ಮುಕುಂದರಾಜ ಫೋನ್‌ನಲ್ಲಿ ಹೇಳಿದ್ದು: 'ಎರಡು ದಿನಗಳಿಂದ ಬ್ರಾಹ್ಮಣರ ಪಾಳಯದಲ್ಲಿ ಸೂತಕ ಆವರಿಸಿದೆ!' ನಾನು ಪ್ರತಿಕ್ರಿಯಿಸಿದೆ 'ಬಹುಶಃ ನೀನು ಹೇಳೋದು ಎಸ್.ಎಲ್. ಭೈರಪ್ಪ ಹಾಗೂ ಪಟಾಲಂ ಭಕ್ತರಿಗೆ ಮಾತ್ರ ಸೂತಕ ಇರಬಹುದು; ಕಾರ್ನಾಡ, ಅನಂತಮೂರ್ತಿ ಅಂತಹ ಲೇಖಕರು ಯಾವೊತ್ತೋ ಸೂತಕದಿಂದ ಹೊರಗಿದ್ದಾರಲ್ಲ? ಜೊತೆಗೆ ಅನಂತಮೂರ್ತಿಗಳೇ ಭೈರಪ್ಪ ಒಳ್ಳೆ ಕಾದಂಬರಿಕಾರ ಅಲ್ಲ ಅವರು ಪ್ರತಿಗಾಮಿ ಬರಹಗಾರ....ಅಂತ ಹಿಂದೆಯೇ ಹಲವು ಬಾರಿ ಮಾತಾಡಿದ್ದಾರಲ್ಲ' ಅಂದೆ. ಅವನು ಹ್ಞೂಂ ಹ್ಞೂಂ ಗುಟ್ಟುತ್ತಿದ್ದ. ಫೋನು ಡಿಸ್‌ಕನೆಕ್ಟ್ ಆಯಿತು.

ದಿನಾಂಕ : ೩೦. ೯. ೨೦೧೧

(ಆರ್.ಜಿ. ಹಳ್ಳಿ ನಾಗರಾಜ್)
ಸಂಪಾದಕ





## ಕಂಬಾರರು

ಜಾನಪದ ಗಣಿಯೊಳಗಿಂದ ಹೆಕ್ಕಿ ತಂದ
ರತ್ನ ಹವಳಗಳನ್ನು ಕೆಚ್ಚಿ ಆವಿಷ್ಕರಿಸಿ
ನೈಪುಣ್ಯತೆಯ ಶಿಷ್ಟದಾರಕ್ಕೆ ಪೋಣಿಸಿ
ಸೌಂದರ್ಯ ವೃದ್ಧಿಸುವ ಕುಶಲಕರ್ಮಿ.

ಸಣ್ಣಾಟ ದೊಡ್ಡಾಟ ಬಯಲಾಟಗಳಿಗಲ್ಲದೆ
ಪಾರಿಜಾತಕ್ಕೂ ಪರಿಮಳವ ಪೂಸಿಸಿ
ದಟ್ಟಿ ದಾವಣಿ ತೊಡಿಸಿ ಶಿಸ್ತಿನಿಂದಾಡಿಸಿ
ರಸದೂಟ ಮಾಡಿಸುವ ಶಾಸ್ತ್ರಪ್ರವೀಣ

ಕಾವ್ಯ ಕನ್ನಿಕೆಯನ್ನು ನಾಟಕ ಪಾಠಕನನ್ನು
ಒಲಿಸಿಕೊಂಡವರು ಚಲನಚಿತ್ರಳನ್ನೂ
ಆಳ ವಿಸ್ತಾರದಲ್ಲಿ ಸ್ವಂತ ಶೈಲಿಯಲ್ಲಿ
ದರ್ಶನ ಮಾಡಿಸುವರೆ ಹೊಸ ಲೋಕವನ್ನೇ.

ಆ ಪೀಠ ಈ ಪೀಠಗಳ ಈಟೂ ಬಲವಿಲ್ಲದೆ
ಗುಂಪು ಗುಮಾನಿಗಳ ಸನಿಹವೂ ಸುಳಿಯದೆ
ಸಾಹಿತ್ಯ ಕಾಳಿಕೆಯ ತಪಸ್ವಿ ಕಂಬಾರರು
ಸೃಜನಶೀಲತೆಯನ್ನೆಲ್ಲ ಹಿಡಿಸಿಕೊಂಡವರು.

–ಮನು ಬಳಿಗಾರ್

# ಜ್ಞಾನಪೀಠ ಸಂಭ್ರಮ ಹೆಚ್ಚಿಸಿದವರು

**ಕ**ನ್ನಡಕ್ಕೆ ಎಂಟನೆಯ ಜ್ಞಾನಪೀಠ ಪ್ರಶಸ್ತಿ ದೊರೆತಿರುವ ಸಂದರ್ಭದಲ್ಲಿ ಚಂದ್ರಶೇಖರ ಕಂಬಾರರನ್ನು ಅಭಿನಂದಿಸುವಾಗಲೇ ಈ ಸಂತೋಷದ ಸಂಭ್ರಮಕ್ಕೆ ಕಾರಣವಾದ ಇನ್ನೆರಡು ಹೆಸರುಗಳನ್ನೂ ನಾವು ಸ್ಮರಿಸಿಕೊಳ್ಳಬೇಕು.

ಮೊದಲನೆಯದು ಬಿ.ವಿ. ಕಾರಂತರದು. ಅವರು ನನ್ನ 'ತುಘಲಕ್' ನಾಟಕವನ್ನು ಭಾಷಾಂತರಿಸಿ ಉರ್ದುವಿಗೆ ಒಯ್ದಿದ್ದರ ಪರಿಣಾಮವಾಗಿ ದಿಲ್ಲಿಯ ರಾಷ್ಟ್ರೀಯ ನಾಟಕ ಶಾಲೆ ಅದನ್ನು ರಂಗಭೂಮಿಗೆ ತಂದಿತು. ಆ ಪ್ರಯೋಗದ ಫಲವಾಗಿ ಕರ್ನಾಟಕದ ಹೊರಗಿದ್ದವರಿಗೂ – ಆ ಯುಗದಲ್ಲಿ ಅತಿ ದೂರದಲ್ಲಿದ್ದ ವಿಶ್ವ ಅದು – ನನ್ನ ನಾಟಕಗಳ ಪರಿಚಯವಾಯಿತು. 1971ರವರೆಗೆ ಕನ್ನಡ ಸಾಹಿತ್ಯದ ಕೆಲವು ಪರಿಮಿತ ಗುಂಪುಗಳಲ್ಲಿ ಮಾತ್ರ ಕವಿಗಳೆಂದು ಪರಿಚಿತರಾಗಿದ್ದ ಕಂಬಾರರು ಬಯಲು ರಂಗಭೂಮಿಯಲ್ಲಿ ಕಾರಂತರು ನಿರ್ದೇಶಿಸಿದ 'ಜೋಕುಮಾರ ಸ್ವಾಮಿ'ಯಿಂದಾಗಿ ಧಿಡೀರನೆ ಕಣ್ಣು ಉಕ್ಕಿಸುವ ಪ್ರತಿಭೆಯ ನಾಟಕಕಾರರೆಂದು ಮನ್ನಣೆ ಪಡೆದರು (ಆ ಪ್ರಯೋಗದಲ್ಲಿ ಗೌಡನ ಪಾತ್ರ ಮಾಡುವ ಸೌಭಾಗ್ಯ ನನ್ನ ಪಾಲಿಗೆ ಒದಗಿ ಬಂದಿತ್ತು). ಮುಂದೆ ಆ ನಾಟಕ ಹಿಂದಿಯಲ್ಲಿ ಮುಂಬೈ, ದಿಲ್ಲಿಗಳಲ್ಲೂ ಪ್ರಯೋಗ ಕಂಡಿತು. ಕಾರಂತರಿಲ್ಲದಿದ್ದರೆ ನಾವಿಬ್ಬರೂ ಯಾವ ಮೂಲೆಯಲ್ಲಿ ಕುಳಿತಿರುತ್ತಿದ್ದೆವೋ ಗೊತ್ತಿಲ್ಲ.

ಎರಡನೆಯ ಹೆಸರು ಧಾರವಾಡದ ಮನೋಹರ ಗ್ರಂಥ ಮಾಲಾ ಪ್ರಕಾಶನ ಸಂಸ್ಥೆಯದು. ಹಸ್ತಪ್ರತಿಯಲ್ಲೇ ನನ್ನ 'ಯಯಾತಿ' ನಾಟಕವನ್ನೋದಿ ಮೆಚ್ಚಿ ಹುರಿದುಂಬಿಸಿದವರು ಗ್ರಂಥಮಾಲೆಯ ಸಲಹೆಗಾರರಾದ ಕೀರ್ತಿನಾಥ ಕುರ್ತಕೋಟಿಯವರು. ಅವರು ಕಂಬಾರರ 'ಋಷ್ಯಶೃಂಗ' ನಾಟಕವನ್ನು ಓದಿದಾಗಲಂತೂ ಯಾವ ತರಹ ಹುಚ್ಚೆದ್ದು ಕುಣಿದಿದ್ದರೆಂಬುದನ್ನು ಕಣ್ಣಾರೆ ಕಂಡಿದ್ದೇನೆ. ನಾಟಕಗಳನ್ನು ಪ್ರಕಟಿಸುವುದು ಮೂರ್ಖತನ ಎಂಬ ನಂಬಿಗೆಯಿದ್ದ ಆ ಕಾಲದಲ್ಲಿ ಈ ಎರಡೂ ನಾಟಕಗಳನ್ನು ಪ್ರಕಟಿಸಿ ನನಗೆ ಹಾಗೂ ಕಂಬಾರರಿಗೆ ವಾಚಕವರ್ಗವನ್ನು ಸೃಷ್ಟಿಸಿ ಕೊಟ್ಟವರು ಗ್ರಂಥಮಾಲೆಯ ಪ್ರಕಾಶಕರಾದ ಜಿ.ಬಿ. ಜೋಷಿ ಅವರು.

(ಈ ಗ್ರಂಥ ಮಾಲೆಯಲ್ಲೇ ಆರನೆಯ ಪ್ರಶಸ್ತಿ ತಂದ ಯು.ಆರ್. ಅನಂತಮೂರ್ತಿಯವರ 'ಸಂಸ್ಕಾರ' ಮೊದಲು ಬೆಳಕು ಕಂಡಿತ್ತಲ್ಲದೆ, ಎಂಟು ಜ್ಞಾನಪೀಠ ಪುರಸ್ಕೃತರಲ್ಲಿ ಆರು ಮಂದಿಯ ಕೃತಿಗಳು ಗ್ರಂಥಮಾಲೆಯಲ್ಲಿ ಪ್ರಕಟವಾಗಿದ್ದವು ಎಂಬುದನ್ನು ನೆನೆದರೆ ಕೀರ್ತಿ–ಜಿ.ಬಿ.ಯವರ ವಿಮರ್ಶಕ ಪ್ರತಿಭೆಗೆ, ಸಹೃದಯತೆಗೆ ಆಶ್ಚರ್ಯವಾಗುತ್ತದೆ)

ಈ ಎರಡಲ್ಲದೆ, ಇನ್ನು ಹಲವಾರು ಸಂಬಂಧಗಳಿಂದಾಗಿ ಕಂಬಾರರ ಬೆಳವಣಿಗೆಯೊಡನೆ ನನ್ನದೂ ಹೆಣೆದುಕೊಂಡಿದೆಯೆಂದು ಒಪ್ಪಿಕೊಳ್ಳಲು ನನಗೆ ಹೆಮ್ಮೆ ಎನಿಸುತ್ತದೆ. ಆದ್ದರಿಂದಲೇ ನಿನ್ನೆ (ಸೋಮವಾರ 19–09–2011) ಈ ಪುರಸ್ಕಾರದ ಸುದ್ದಿ ಬಂದೊಡನೆ, ಕಂಬಾರರಿಗೆ ಕಳಿಸಿದ ಅಭಿನಂದನೆಯ ಇ–ಮೇಲ್‌ಗೆ ನಾನು ಸಹಿ ಮಾಡಿದ್ದು 'ಗಿರೀಶ ಗೌಡ' ಎಂದು!

–ಗಿರೀಶ್ ಕಾರ್ನಾಡ್



ಕನ್ನಡಕ್ಕೆ ಎಂಟನೇ ಜ್ಞಾನಪೀಠ

# ಗೋಡಗೇರಿಯಿಂದ ಬೆಂಗಳೂರಿಗೆ ಬಂದ ದೇಸಿ ಕವಿ

**–ಡಾ. ಬಸವರಾಜ ಮಲಶೆಟ್ಟಿ**

ಬೆಳಗಾವಿ ಜಿಲ್ಲೆಯ ಹುಕ್ಕೇರಿ ತಾಲೂಕಿನ ಘೋಡಗೇರಿ ಒಂದು ಥೇಟ್ ಉತ್ತರ ಕರ್ನಾಟಕದ ಹಳ್ಳಿ. ಪ್ರೀತಿ, ದ್ವೇಷ, ಕೊಲೆ, ಬಡತನ, ಉದಾರತೆ – ಇವನ್ನೆಲ್ಲ ಒಡಲೊಳಗಿಟ್ಟುಕೊಂಡು ಸದಾ ಜೀವಂತಿಕೆ ಉಕ್ಕಿಸುವ ಹಳ್ಳಿ. ಇಂಥ ಘೋಡಗೇರಿಯಲ್ಲಿ ಚಂದ್ರಶೇಖರ ಕಂಬಾರರು ೧೯೩೭ರಲ್ಲಿ ಜನಿಸಿದರು. ಅಲ್ಲಿಯೇ ತಮ್ಮ ಪ್ರಾಥಮಿಕ ಶಿಕ್ಷಣ ಪೂರೈಸಿದರು. ಅಂದಿನ ಗೋಡಗೇರಿ ಜೀವನಾನುಭವಗಳು ಕಂಬಾರರ ವ್ಯಕ್ತಿತ್ವದ ಅಡಿಪಾಯವಾಗಿರುವುದು ಗಮನಾರ್ಹ ಅಂಶ. ಆ ಊರಲ್ಲಿ ೧೯೦೭ರ ಹೊತ್ತಿಗೆ ಪ್ರಾಥಮಿಕ ಶಾಲೆ ಆರಂಭವಾಗಿದ್ದರೂ ಅಕ್ಷರವಿದ್ಯೆಯು ಕಡೆಗೆ ಗಮನ ನೀಡದ ಅನಕ್ಷರಸ್ಥರ ಸಂಖ್ಯಾಬಾಹುಳ್ಯ. ಆಡಳಿತಾತ್ಮಕವಾಗಿ ಹುಕ್ಕೇರಿ ತಾಲೂಕಿಗೆ ಸೇರಿದ್ದರೂ ವ್ಯವಹಾರವೆಲ್ಲ ಸಮೀಪದ ಗೋಕಾಕದೊಂದಿಗೆ. ೧೯೪೨ರಲ್ಲಿ ಈ ಊರಿನ ಕೆಲವರು ಚಳವಳಿಯಲ್ಲಿ ಸಕ್ರಿಯವಾಗಿ ಪಾಲ್ಗೊಂಡಿದ್ದರಿಂದ ರಾಷ್ಟ್ರೀಯ ಪ್ರಜ್ಞೆ ಅಷ್ಟಿಷ್ಟಾದರೂ ಉದಯಿಸಿತ್ತು. ಇಬ್ಬರು ಲಿಂಗಾಯಿತರು, ಒಬ್ಬ ಮುಸ್ಲಿಂ, ಒಬ್ಬ ಹರಿಜನ, ಒಬ್ಬ ಕಂಬಾರ (ಚಂದ್ರಶೇಖರ ಕಂಬಾರರ ತಂದೆ ಬಸವಣ್ಣೆಪ್ಪ) ಈ ಐದು ಜನರ ಪಂಚಾಯಿತಿ ಊರಿನ ಕೋರ್ಟ್. ಅಪ್ರಜ್ಞಾಪೂರ್ವಕವಾಗಿ ಎಲ್ಲ ಜಾತಿಯವರೂ ಹೊಂದಿಕೊಂಡು ಬಾಳುವ ಸೌಹಾರ್ದತೆಯ ಸೂತ್ರ ಅಲ್ಲಿತ್ತು. ಲಾವಣಿ ಗೀಗೀ ಮೇಳಗಳು ವರ್ಷಪೂರ್ತಿ ಭೆಟ್ಟಿ ನೀಡುತ್ತಿದ್ದವು. ಪಾರಿಜಾತ ಕಂಪನಿಗಳು ಬರುತ್ತಿದ್ದವು. ಪಾರಿಜಾತದ ಧ್ರುವತಾರೆ ಕೌಜಲಗಿ ನಿಂಗಮ್ಮನ ತಂಡ ಪ್ರತಿ ವರ್ಷ ಒಂದು ಪ್ರದರ್ಶನ ನೀಡುತ್ತಿತ್ತು. ಘೋಡಗೇರಿಯ ಜನಕ್ಕೆ ನಿಂಗಮ್ಮ ಒಂದು ದಂತಕತೆಯಾಗಿದ್ದಳು. ಯಾವುದೇ ಮೇಳ ಈ ಊರಲ್ಲಿ 'ಫೇಸ್' ಒಪ್ಪಿಕೊಳ್ಳಲು ಅಪೇಕ್ಷಿಸುತ್ತಿತ್ತು. ಘೋಡಗೇರಿಯ ರಸಿಕರ ಮೆಚ್ಚುಗೆಯೇ ಒಂದು ಅಪೂರ್ವ ಸರ್ಟಿಫಿಕೇಟ್ ಆಗಿದ್ದ ಕಾಲವದು.

'ಸಂಗ್ಯಾಬಾಳ್ಯ' ಆ ಊರಿನವರಿಗೆ ಮನೆಮಾತಾಗಿತ್ತು. ಗದುಗಿನ ಮಲ್ಲಿಕಾರ್ಜುನ ಸ್ವಾಮಿಗಳು ಘೋಡಗೇರಿಗೆ ಅಧ್ಯಾತ್ಮದ ಹುಚ್ಚು ಹಿಡಿಸಿದ್ದರು. ಪ್ರತಿ ವರ್ಷ ಶ್ರಾವಣದಲ್ಲಿ ಅವರು ಪ್ರಭುಲಿಂಗಲೀಲೆ ಮೊದಲಾದ ಪುರಾಣಗಳನ್ನು ಹೇಳುತ್ತಿದ್ದರು. ಬೆಳಗ್ಗೆ ಹಿರಿಯರಿಗಷ್ಟೆ ನಿಜಗುಣರ ಶಾಸ್ತ್ರ ಪ್ರವಚನವಿರುತ್ತಿತ್ತು.

ಕಂಬಾರಿಕೆ ವೃತ್ತಿಯ ಬಡ ರೈತರ ಕುಟುಂಬದಲ್ಲಿ ಚಂದ್ರಶೇಖರ ಕಂಬಾರರು ಹುಟ್ಟಿದರು. ತಂದೆ ಬಸವಣ್ಣೆಪ್ಪ ವಿದ್ಯಾವಂತ. ಬಯಲಾಟ ಮತ್ತು ಹಾಡುಗಾರಿಕೆಯ ಬಗ್ಗೆ ಅಪಾರ ತಿಳಿವಳಿಕೆ ಹೊಂದಿದ್ದ ರಸಿಕ. ಬಸವಣ್ಣೆಪ್ಪ ಮುಂದೆ ಬಂದು ಕುಳಿತುಕೊಳ್ಳುವವರೆಗೆ ಕೌಜಲಗಿ ನಿಂಗಮ್ಮ ತನ್ನ 'ಪಾರಿಜಾತ' ಪ್ರದರ್ಶನ ಪ್ರಾರಂಭಮಾಡುತ್ತಿರಲಿಲ್ಲ. ತಾಯಿ ಚೆನ್ನಮ್ಮ ಹಾಡು ಕತೆಗಳ ಕಣಜವೇ ಆಗಿದ್ದ ಮಮತಾಮಯಿ. ಸೋದರಮಾವ ರಾಮಪ್ಪ ಸ್ವಲ್ಪ ವಿಚಿತ್ರ ವ್ಯಕ್ತಿ. ಮಕ್ಕಳಿಲ್ಲದ ರಾಮಪ್ಪ ಬಾಲಕ ಚಂದ್ರಶೇಖರನನ್ನು ಮುದ್ದಿನಿಂದ ಬೆಳೆಸಿದರು. ಸುಲಧಾಳದಲ್ಲಿ ಚಂದ್ರಶೇಖರನ ದೊಡ್ಡವ್ವ ಇರುತ್ತಿದ್ದರು. ಅವರು ಅದ್ಭುತ ಕತೆಗಾರ್ತಿಯಾಗಿದ್ದರು. ವರ್ಷದಲ್ಲಿ ಮೂರು ತಿಂಗಳ ಸುಲಧಾಳ ವಾಸ್ತವ್ಯ ಚಂದ್ರಶೇಖರನಿಗೆ ಹೆಚ್ಚು ಪ್ರಿಯವಾಗಿರುತ್ತಿತ್ತು. ಕಲ್ಪನೆ ಮತ್ತು ನಂಬಿಕೆಗಳಲ್ಲಿ ಭಿನ್ನತೆಯಿಲ್ಲದ ಆ ಲೋಕಮಿಥ್‌ಗಳ ಸಮೃದ್ಧ ಸೃಷ್ಟಿಗೆ ದಾರಿ ತೋರಿಸಿತು.

ಮುಲ್ಕಿ ಪರೀಕ್ಷೆ ಪಾಸಾದ ಮೇಲೆ ಚಂದ್ರಶೇಖರ ಗೋಕಾಕದ ಮುನ್ಸಿಪಲ್ ಹೈಸ್ಕೂಲ್ ಸೇರಿದ. ಅಲ್ಲಿ ಕೃಷ್ಣಮೂರ್ತಿ ಪುರಾಣಿಕರು ಗುರುಗಳು. ಅವರು ಪ್ರತಿ ರವಿವಾರ ಆಸಕ್ತ ವಿದ್ಯಾರ್ಥಿಗಳನ್ನು ಕೂಡಿಸಿ ಸಾಹಿತ್ಯದ ಚರ್ಚೆ ನಡೆಸುತ್ತಿದ್ದರು. ಸ್ವಂತ ಖರ್ಚಿನಲ್ಲಿ ವಾಸ್ತವ್ಯ ದೊರಕಿಸಿಕೊಳ್ಳುವ ಚೈತನ್ಯವಿರಲಿಲ್ಲ. ನಿರ್ವಾಹವಿಲ್ಲದೆ ವಿದ್ಯಾಭ್ಯಾಸ ಕೈಬಿಟ್ಟು ಹಳ್ಳಿ ಸೇರಿದರು. ಪುರಾಣಿಕರು ಸುಮ್ಮನಿರಲಿಲ್ಲ. ಅವರು ಚಂದ್ರಶೇಖರನಲ್ಲಿ ಅಡಗಿರುವ ಅಗಾಧ ಪ್ರತಿಭೆಯನ್ನು ಗುರುತಿಸಿದ್ದರು. ಹುಡುಗನನ್ನು ಕರೆಸಿಕೊಂಡರು. ಹೈಸ್ಕೂಲ್‌ನಲ್ಲಿ ಫೀ ಮಾಫಿ ಮಾಡಿಸಿದರು. ತಮ್ಮ ಗೆಳೆಯರಾಗಿದ್ದ ಮುಂಡಾಸದ ಮಾಸ್ತರರಿಗೆ ವಸತಿ ವ್ಯವಸ್ಥೆ ಒತ್ತಾಯಿಸಿದರು.

ಸಿದ್ಧರಾಮ ಸ್ವಾಮಿಗಳ ಬಗ್ಗೆ ಮಾತಾಡುವಾಗಲೆಲ್ಲ ಕಂಬಾರರು ಭಾವುಕರಾಗುತ್ತಾರೆ. ತಮ್ಮ ಕಾವ್ಯ ನಾಟಕಗಳಲ್ಲಿ ಅವರನ್ನು ಭಕ್ತಿಯಿಂದ ಸ್ಮರಿಸಿರುವುದನ್ನು ನೋಡಿದರೆ ಸ್ವಾಮಿಗಳು ಎಂಥ ಪ್ರಭಾವ ಬೀರಿದ್ದಾರೆಂಬುದು ಗೊತ್ತಾಗುತ್ತದೆ. ಸಿದ್ಧರಾಮ ಸ್ವಾಮಿಗಳು ತಾಯಿಯಂತಿದ್ದರು. ಕುವೆಂಪು ಮತ್ತು ಮಧುರಚೆನ್ನರು ಕಂಬಾರರ ಮೆಚ್ಚಿನ ಕವಿಗಳಾಗಿದ್ದರು. ಅವರಿಬ್ಬರ ಕಾವ್ಯಶೈಲಿ ಆ ಕಾಲಕ್ಕೆ ಕಂಬಾರರ ಕವಿತೆಗಳ ಮೇಲೆ ಗಾಢ ಪ್ರಭಾವ ಉಂಟುಮಾಡಿದ್ದು ಸ್ಪಷ್ಟವಾಗಿದೆ.

ಕಂಬಾರರು ಎಸ್ಸೆಸ್ಸೆಲ್ಸಿ ಪಾಸಾದರು. ಮುಂದೇನು ಎಂಬ ಪ್ರಶ್ನೆ ಎದುರಾಯಿತು. ಮುಂದಿನ ವಿದ್ಯಾಭ್ಯಾಸಕ್ಕೆ ಬಡತನ ಅಡ್ಡಬಂದಿತು. ದಿಕ್ಕು ತೋಚದ ಸ್ಥಿತಿಯಲ್ಲಿ ಸಾವಳಗಿ ಸಿದ್ಧರಾಮ ಸ್ವಾಮಿಗಳ ಹತ್ತಿರ ಹೋಗಿ, ಕಾಲೇಜ್ ಕಲಿಯುವ ತಮ್ಮ ಆಸೆಯನ್ನು ವ್ಯಕ್ತಪಡಿಸಿದರು. ಸ್ವಾಮಿಗಳು ಕೆಲ ಹೊತ್ತು ಧ್ಯಾನ ನಿರತರಾಗಿ ಕುಳಿತರು. ನಂತರ ಮಠದ ಘಂಟೆ ಢಣ್ ಎಂದಿತು. ಸ್ವಾಮಿಗಳು ಧ್ಯಾನದಿಂದ ಹೊರಗೆ ಬಂದು, "ಹ್ಞೂಂ. ನಿನಗ ಆಶೀರ್ವಾದ ಆಗೇದ" ಅಂದರು. ಕೂಡಲೇ ಮೂರುನೂರು ರೂಪಾಯಿ ನೀಡಿ ಶುಭಾಶೀರ್ವಾದ ಮಾಡಿ ಕಳಿಸಿಕೊಟ್ಟರು. ಕಂಬಾರರು ಹಿಗ್ಗಿನಿಂದ ಮನೆಗೆ ಬಂದು ಸ್ವಾಮಿಗಳವರ ಆಶೀರ್ವಾದದ ಪರಿಯನ್ನು ವಿವರಿಸಿದರು. ಕಂಬಾರರ ತಂದೆ ಬಸವಣ್ಣೆಪ್ಪನವರಿಗೆ ಮಗ ಇಂಜಿನಿಯರ್ ಆಗಬೇಕೆಂಬ ಆಸೆ. ಆದ್ದರಿಂದ ಸೈನ್ಸ್ ಓದಲು

ಹೇಳಿ ಬೆಳಗಾವಿಗೆ ಕಳಿಸಿಕೊಟ್ಟರು. ಆದರೆ ಅವರ ಆಸೆ ನೆರವೇರಲಿಲ್ಲ. ಚಂದ್ರಶೇಖರನಿಗೆ ಆರ್ಟ್ಸ್ ಇಷ್ಟವಾಗಿತ್ತು. ಆದ್ದರಿಂದ ಲಿಂಗರಾಜ ಕಾಲೇಜ್ ಸೇರಿಸಿದರು. ವಾಸ್ತವ್ಯ ನಾಗನೂರು ಶಿವಬಸವ ಸ್ವಾಮಿಗಳ ಬೋರ್ಡಿಂಗಿನಲ್ಲಿ.

೧೯೬೨ರಿಂದ ೧೯೬೪ರವರೆಗೆ ಲಿಂಗರಾಜ ಕಾಲೇಜಿನಲ್ಲಿ ಅಧ್ಯಾಪಕರಾಗಿದ್ದರು. ಭೂಸನೂರುಮಠರ ಒಡನಾಟ ಅಲ್ಲಿ ಗಾಢವಾಯಿತು. ಜಾನಪದದಲ್ಲಿ ಆಸಕ್ತಿ ಇದ್ದ ಕವಿ ಎ.ಕೆ. ರಾಮಾನುಜನ್ ಅವರೊಂದಿಗೆ ಆತ್ಮೀಯ ಸಲಿಗೆ ಬೆಳೆಯಿತು. ಅವರಿಗಾಗಿ ಕಂಬಾರರು ಸಾವಿರಾರು ಜನಪದ ಕತೆಗಳನ್ನು ಸಂಗ್ರಹಿಸಿಕೊಟ್ಟರು. ಈ ಸಂಗ್ರಹ ಕಾರ್ಯದ ಪ್ರತಿಫಲವೇನೆಂದರೆ ಕಂಬಾರರಿಗೆ ಲಭಿಸಿದ ಜನಪದ ಭಾಷೆಯ ಬಳಕೆಯ ಸಿದ್ಧಿ. ೧೯೬೪ರಿಂದ ೧೯೬೭ರವರೆಗೆ ಕಂಬಾರರು ಸಾಗರದ ಕಾಲೇಜಿನಲ್ಲಿ ಅಧ್ಯಾಪಕರಾಗಿದ್ದರು. ಕವಿ ಗೋಪಾಲಕೃಷ್ಣ ಅಡಿಗರು ಅಲ್ಲಿ ಪ್ರಿನ್ಸಿಪಾಲರು. ಅಡಿಗರ ಒಡನಾಟದಿಂದಾಗಿ ಕಂಬಾರರಿಗೆ ನವ್ಯದ ಸಂಪರ್ಕ ಹೆಚ್ಚು ಗಾಢವಾಯಿತು. ಜನಪದ ಕಾವ್ಯಶೈಲಿಗೆ ಬದ್ಧರಾಗಲು ಅವರು ಹಠತೊಟ್ಟಿದ್ದರೂ. ಅವರಲ್ಲಿ ನವ್ಯದ ಪ್ರವೇಶ ಅರಿವಿಲ್ಲದಂತೆ ನಡೆದುಹೋಯಿತು.

ಸಾಗರದಲ್ಲಿದ್ದಾಗ ಕೆ.ವಿ. ಸುಬ್ಬಣ್ಣನವರ ಮತ್ತು ಶಾಂತವೇರಿ ಗೋಪಾಲಗೌಡರ ಪರಿಚಯ ಸ್ನೇಹ ಲಭಿಸಿತು. ಕಾವ್ಯಪ್ರೇಮಿ ಗೋಪಾಲಗೌಡರು ಕಂಬಾರರ ಕವಿತೆಗಳ ಗೇಯಗುಣಕ್ಕೆ ಮನಸೋತಿದ್ದರು. ಸಭೆಗಳಲ್ಲಿ ಕಂಬಾರರು ಕವಿತೆಗಳನ್ನು ಕೋಟ್ ಮಾಡುತ್ತಿದ್ದರು. ಒಮ್ಮೆ ಲೋಹಿಯಾ ಅವರನ್ನು ಕಂಬಾರರ ಮನೆಗೆ ಕರೆದುಕೊಂಡು ಬಂದು, ಅವರ ಮುಂದೆ ಕಂಬಾರರಿಂದ ಕವಿತೆಗಳನ್ನು ಹಾಡಿಸಿದ್ದರು.

೧೯೬೮ರಲ್ಲಿ ಉಡುಪಿಯಲ್ಲಿ ಒಂದು ವರ್ಷ ಅಧ್ಯಾಪಕರಾಗಿದ್ದ ಮೇಲೆ ಕಂಬಾರರನ್ನು ರಾಮಾನುಜನ್ ಶಿಕಾಗೋ ವಿಶ್ವವಿದ್ಯಾಲಯಕ್ಕೆ ಕರೆಸಿಕೊಂಡರು. ೧೯೬೮ರಿಂದ ೭೦ರವರೆಗಿನ ಶಿಕಾಗೋ ವಾಸ ಕಂಬಾರರ ವ್ಯಕ್ತಿತ್ವಕ್ಕೆ ಹೊಸ ಬಣ್ಣ ನೀಡಿತು. ಕನ್ನಡ ಕಲಿಸಲು ಹೋಗಿದ್ದ ಅವರು ಅಲ್ಲಿಂದ ಬಹಳಷ್ಟನ್ನು ಕಲಿತುಕೊಂಡು ಬಂದರು.

ವಿಶೇಷವಾಗಿ ರಂಗಭೂಮಿಯ ಬಗ್ಗೆ ಅವರ ತಿಳಿವಳಿಕೆ ಹೆಚ್ಚಿತು. ಆಗ ಅಮೆರಿಕಾದಲ್ಲಿ ಪ್ರಚಾರದಲ್ಲಿದ್ದುದು 'ಲಿವಿಂಗ್ ಥಿಯೇಟರ್'. ನಟರು ಮತ್ತು ಪ್ರೇಕ್ಷಕರು ಕೂಡಿಯೇ ನಾಟಕವನ್ನು ಕಟ್ಟಿ ಪ್ರಯೋಗಿಸುವ ಈ ಕ್ರಮ ಕಂಬಾರರಿಗೆ ಹೊಸ ದಿಕ್ಕು ತೋರಿಸಿತು.

೧೯೭೦ರಲ್ಲಿ ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ವಿಭಾಗಕ್ಕೆ ಸೇರಿಕೊಂಡ ಕಂಬಾರರು ಅಂದಿನಿಂದ ಬೆಂಗಳೂರು ನಿವಾಸಿಯಾದರು. ಬಿ.ವಿ. ಕಾರಂತ ನಿರ್ದೇಶನದಲ್ಲಿ 'ಜೋಕುಮಾರಸ್ವಾಮಿ' ಪ್ರಯೋಗದ ಯಶಸ್ಸು ಕೀರ್ತಿ ತಂದುಕೊಟ್ಟಿತು. ಅಷ್ಟೇ ಅಲ್ಲ ಕನ್ನಡದಲ್ಲಿ ಹೊಸ ಟ್ರೆಂಡ್ ಹುಟ್ಟಿಕೊಳ್ಳಲು ಕಾರಣವಾಯಿತು. ಜೋಕುಮಾರಸ್ವಾಮಿಯ ಪ್ರಭಾವ-ಪ್ರೇರಣೆಯಿಂದ ಹಾಡು, ಕುಣಿತ ಸೂತ್ರಧಾರ ಇರುವಂತೆ ಅನೇಕ ನಾಟಕಗಳ ರಚನೆಗೊಂಡವು. ಇಂಥ ನಾಟಕಗಳಿಂದಾಗಿ ಒಂದೂವರೆ ದಶಕದಷ್ಟು ಅವಧಿಯ ಹವ್ಯಾ ರಂಗಭೂಮಿ ತುಂಬಾ ಲವಲವಿಕೆಯಿಂದಿದ್ದಿತು.

ಕಾಲು ಶತಮಾನದ ಅವಧಿಯಲ್ಲಿ ಕಂಬಾರರು ಸೃಷ್ಟಿಸಿರುವ ಸಾಹಿತ್ಯ ಗುಣ ಮತ್ತ ಪ್ರಮಾಣದಲ್ಲಿ ಗಮನಾರ್ಹವಾಗಿದೆ. ಅವರನ್ನು ಜಾನಪದ ನಾಟಕಕಾರ, ಜಾನಪದ ಕ ಎಂದು ಕರೆಯುವುದು ಬಹಳ ಸರಳವಾದ ಮೇಲ್ಪದರಿನ ಹೇಳಿಕೆಯಾಗುತ್ತದೆ. ಕಂಬಾರ ಸೃಜನಶಕ್ತಿಯ ಬೇರಿರುವುದು ಜಾನಪದದಲ್ಲಿ ಎಂಬುದು ತೀರಾ ಸ್ಪಷ್ಟವಾಗಿದೆ. ಆದ ಅವರನ್ನು ಬರೀ ಜಾನಪದಕ್ಕೆ ಸೀಮಿತಗೊಳಿಸುವುದು ತಪ್ಪಾಗುತ್ತದೆ.



ಕನ್ನಡಕ್ಕೆ ಎಂಟನೇ ಜ್ಞಾನಪೀಠ

# ಜ್ಞಾನಪರಂಪರೆಗಳ ಕ್ರಿಯಾಶೀಲ ಶೋಧಕ

–ಡಾ. ಹಿ.ಚಿ. ಬೋರಲಿಂಗಯ್ಯ

ಭಾರತದ ಪ್ರತಿಷ್ಠಿತ ಜ್ಞಾನಪೀಠ ಪ್ರಶಸ್ತಿಗೆ ಭಾಜನರಾಗಿರುವ ಡಾ. ಚಂದ್ರಶೇಖರ ಕಂಬಾರ ಅವರು ಕನ್ನಡ ಸಾಹಿತ್ಯದ ಎಲ್ಲ ಪ್ರಕಾರಗಳನ್ನು ಸಮೃದ್ಧಗೊಳಿಸಿದ ಒಬ್ಬ ಪ್ರತಿಭಾವಂತ. ಕಂಬಾರರ ಸಾಹಿತ್ಯವೆಂದರೆ ಅದು ಕೇವಲ ಸಾಹಿತ್ಯವಲ್ಲ. ಜ್ಞಾನಪರಂಪರೆಗಳ ಕ್ರಿಯಾಶೀಲ ಶೋಧನೆ. ಕಂಬಾರರು ಆಕಾಶ ಭೂಮಿಗಿಂತ ಅದರ ಮೂಲಧಾತುವಾದ ಬೇರಿಗೆ ಬೆಲೆ ಕೊಟ್ಟವರು. ಆ ತಾಯಿ ಬೇರಿನ ಮೂಲಕವೇ ಫಲಪುಷ್ಪಗಳನ್ನು ನೋಡಬಯಸಿದವರು. ಆದ್ದರಿಂದಲೇ ಅವರ ಸಾಹಿತ್ಯವೆಂದರೆ ತಾನು ಹುಟ್ಟಿದ ನೆಲದ ಫಲವಂತಿಕೆಯ ಸಂಕೇತ. ಸುಗಂಧಭರಿತ ಆಸ್ವಾದ. ಕಂಬಾರರು ತಮ್ಮೆಲ್ಲ ಸೃಜನಶೀಲ ಕೃಷಿಗೆ ಬೆಳುವಲದ ನೆಲದಲ್ಲಿ ಚೆಲ್ಲಿದ ಜಾನಪದದ ಗಟ್ಟಿಕಾಳುಗಳನ್ನು ಆಯ್ದುಕೊಂಡರು. ತಮ್ಮ ಚಿಂತನಶೀಲ ಕಮ್ಮಾರಿಕೆಯ ಕಲಾತ್ಮಕತೆಯಲ್ಲಿ ಕಾಳುಗಳನ್ನು ಮೊಳಕೆಯೊಡಸಿ ಸಮೃದ್ಧ ಫಸಲು ಪಡೆದ 'ಲೇಖನಿಯೋಗಿ' ಅವರು.

ಉತ್ತರ ಕರ್ನಾಟಕದ ಊಳಿಗಮಾನ್ಯ ವ್ಯವಸ್ಥೆಯಲ್ಲಿ ಹುಟ್ಟಿಕೊಂಡ ವೈಭವೀಕೃತ ದೇಸಿ ನಾಟಕಗಳಿಗೆ ವೈಚಾರಿಕತೆಯ ಸ್ಪರ್ಶ ನೀಡಿ ಸಮಾಜವಾದದ ಬೆಳಕು ನೀಡಿದ ಕಂಬಾರರು ಆ ಬಯಲಾಟದ ದೇಸಿ ಪರಂಪರೆಯನ್ನು ಉಳಿಸಿಕೊಂಡೇ ಸಮಕಾಲೀನ ಮೌಲ್ಯಕ್ಕೆ ಸ್ಪಂದಿಸಿದ ಮಹತ್ವದ ನಾಟಕಕಾರ. ಜೋಕುಮಾರಸ್ವಾಮಿ, ಸಂಗ್ಯಾಬಾಳ್ಯ, ಜೈಸಿದ ನಾಯಕ, ಋಷ್ಯಶೃಂಗ, ಹುಲಿಯ ನೆರಳು ಮುಂತಾದ ಅವರ ನಾಟಕಗಳು ಆಧುನಿಕ ರಂಗಭೂಮಿಗೆ ಅವರು ಕೊಟ್ಟ ಅನನ್ಯ ಕಾಣಿಕೆಗಳು.

ಕಂಬಾರರು ತಮ್ಮ ಕವಿತೆಗಳನ್ನು ಬರೆಯಲು ಆರಂಭಿಸಿದ್ದು ನವ್ಯಪಂಥ ಉಚ್ಛ್ರಾಯ ಸ್ಥಿತಿಯಲ್ಲಿದ್ದ ಕಾಲದಲ್ಲಿ. ನವ್ಯಕಾವ್ಯ ಎಷ್ಟು ಬಿರುಸಿನಿಂದ ಬಂದಿತೋ ಅಷ್ಟೇ ಬಿರುಸಿನಿಂದ ಜನರಿಂದ ದೂರವೂ ಆಯಿತು. ಆದರೆ

ಜಾನಪದ ಸೊಗಡು ಮತ್ತು ಮನಸ್ಸು ಎರಡನ್ನೂ ಅರ್ಥೈಸಿಕೊಂಡು ಮಣ್ಣಿನ ವಾಸನೆಯಲ್ಲಿ ಪ್ರಫುಲ್ಲವಾಗಿ ಅರಳಿದ ಕಂಬಾರರ ಕಾವ್ಯ ಇವತ್ತಿಗೂ ಜನಪರವಾಗಿ ಜನಾಕರ್ಷಕವಾಗಿ ಮತ್ತು ಅರ್ಥಪೂರ್ಣವಾಗಿ ಉಳಿದು ಬಂದಿದೆ. ಅವರ ಅಕ್ಕಕ್ಕು ಹಾಡುಗಳೇ, ಬೆಳ್ಳಿಮೀನು, ಸಾವಿರದ ನೆರಳು, ತಕರಾರಿನವರು, ಹೇಳತೇನ ಕೇಳ ಮುಂತಾದ ಕವನ ಸಂಕಲನಗಳು ಕನ್ನಡದ ಶ್ರೇಷ್ಠ ಕಾವ್ಯಕ್ಕೆ ನೀಡಿದ ಕಾಣಿಕೆಗಳಾಗಿ ಸಾರ್ವಕಾಲಿಕ ಚಿಂತನೆಗಳಾಗಿ ಉಳಿದು ಬಂದಿವೆ.

ಕಂಬಾರರು ಕನ್ನಡ ಜಾನಪದ ಸಾಹಿತ್ಯಕ್ಕೆ ಕೊಟ್ಟ ಕೊಡುಗೆ ಅನನ್ಯವಾದದ್ದು. ಅವರ ಜನಪದ ಸಾಹಿತ್ಯವೆಂದರೆ ಕೇವಲ ಹಾಡುಗಳ ಸಂಗ್ರಹವಾಗಿ ಉಳಿಯಲಿಲ್ಲ. ಬದಲಾಗಿ ಕನ್ನಡದ ಜೀವಸತ್ವವನ್ನು ಆದಿಯಿಂದ ಕಾಪಾಡಿಕೊಂಡು ಬಂದಿದ್ದ ಜಾನಪದ ಎಂಬ ಜೊಕ್ಕಸವನ್ನು ಅರ್ಥಪೂರ್ಣವಾಗಿ ತಡವಿ, ಶೋಧಿಸಿ ಅದರ ಮೌಲ್ಯವನ್ನು ತಮ್ಮ ಚಿಂತನೆಗಳ ಮೂಲಕ ಪ್ರಚುರಪಡಿಸಿದ ಕೀರ್ತಿ ಅವರದು. ಹಾಗೆಯೇ ಮರೆಯಾಗಿ ಹೋಗಬಹುದಾಗಿದ್ದ ಉತ್ತರ ಕರ್ನಾಟಕದ ಅನನ್ಯ ಧಾಟಿ, ಧ್ವನಿಗಳನ್ನು ತಮ್ಮ ಸೃಷ್ಟಿಶೀಲ ಕಾವ್ಯಕ್ಕೆ ವರ್ಗಾಯಿಸಿಕೊಂಡು ಅರ್ಥದ ಜೊತೆಗೆ ನಾದವೂ ನಲಿಯುವಂತೆ ಮಾಡಿದ ಮಾಟಗಾರ ಅವರು. ಉತ್ತರ ಕರ್ನಾಟಕದ ಜಾನಪದ ರಂಗಭೂಮಿ, ಬಯಲಾಟಗಳು, ಮಾತಾಡು ಲಿಂಗವೇ, ನಮ್ಮ ಜನಪದ, ಲಕ್ಷಾಪತಿ ರಾಜನ ಕಥೆ, ಬೇಡರ ಹುಡುಗ, ಗಿಳಿ ಮತ್ತು ಬೃಹದ್ದೇಶೀಯ ಚಿಂತನ ಮುಂತಾದವು ಕಂಬಾರರ ಜಾನಪದ ಚಿಂತನೆಯ ಬಹು ಮುಖ್ಯ ಕೃತಿಗಳು.

ಕಂಬಾರರು ಐದು ಕಾದಂಬರಿಗಳನ್ನು ಬರೆದಿದ್ದಾರೆ. ಕಾದಂಬರಿಗಳೆಂದರೆ ಅವು ಕಾದಂಬರಿಗಳಲ್ಲ. ಒಂದು ರೀತಿಯಲ್ಲಿ ಮುಂದೆ ಅವರು ಬರೆದ ಚಕೋರಿ ಮಹಾಕಾವ್ಯಕ್ಕೆ ಪ್ರೇರಕವಾಗಿ ನಿಂತ ಸಮೃದ್ಧ ಗದ್ಯ ಕಥನಗಳವು. ಉತ್ತರ ಕರ್ನಾಟಕದ ವೈವಿಧ್ಯಮಯ ಜನಜೀವನವನ್ನು ತಿರುಳುಗನ್ನಡದ ಭಾಷೆಯಲ್ಲಿ ಮನಮುಟ್ಟುವಂತೆ ಕಟ್ಟಿದ ಮೋಹಕ ಕಥನ ಶೈಲಿ ಕಂಬಾರರ ವೈಶಿಷ್ಟ್ಯ. ಅವರ ಸಿಂಗಾರವ್ವ ಮತ್ತು ಅರಮನೆ, ಶಿಖರ ಸೂರ್ಯ ಜೆ.ಕೆ. ಮಾಸ್ತರರ ಪ್ರಣಯ ಪ್ರಸಂಗ ಮತ್ತು ಕರಿಮಾಯಿ ಮುಂತಾದ ಕಾದಂಬರಿಗಳು ಕನ್ನಡದ ಶ್ರೇಷ್ಠ ಕಾದಂಬರಿಗಳಲ್ಲಿ ಎಂದಿಗೂ ಸ್ಥಾನ ಪಡೆಯಬಲ್ಲ ಅಮೋಘ ಕೃತಿಗಳು.

ಡಾ. ಚಂದ್ರಶೇಖರ ಕಂಬಾರ ಅವರು ಇಷ್ಟೆಲ್ಲಾ ವೈವಿಧ್ಯಮಯ ಸಾಹಿತ್ಯ ರಚನೆಯ ಜೊತೆಗೆ ಒಬ್ಬ ಶ್ರೇಷ್ಠ ಚಿಂತಕರಾಗಿ, ದೇಸಿ ಪರಂಪರೆಯ ಸಮರ್ಥಕರಾಗಿ, ಶಿಕ್ಷಣ ತಜ್ಞರಾಗಿ ಮಾನವೀಯ ಮೌಲ್ಯಗಳನ್ನು ಸಾರುವ ಒಬ್ಬ ಉದಾತ್ತ ವ್ಯಕ್ತಿಯಾಗಿ ಕನ್ನಡದ ಮತ್ತು ಭಾರತದ ಜನಮಾನಸದಲ್ಲಿ ಚಿರಸ್ಥಾಯಿಯಾಗಿ ಉಳಿಯುವ ಕೆಲಸ ಮಾಡಿದವರು. ಮೇಲಿನ ಅವರ ಕೃತಿಗಳಂತೆಯೇ ಕನ್ನಡ ನಾಡಿಗೆ ಅವರು ನೀಡಿದ ಮತ್ತೊಂದು ಶ್ರೇಷ್ಠ ಕೊಡುಗೆ ಎಂದರೆ ಹಂಪಿಯ ಕನ್ನಡ ವಿಶ್ವವಿದ್ಯಾಲಯ. ವರಕವಿ ಬೇಂದ್ರೆಯವರ ಕಾಲದಿಂದ ಕನಸಾಗಿಯೇ ಉಳಿದಿದ್ದ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾಕಾರ ರೂಪ ಕೊಟ್ಟ ಒಬ್ಬ ಸಮರ್ಥ ಶಿಲ್ಪಿ ಅವರು. ಕನ್ನಡ ನಾಡಿನ ಗತವೈಭವವನ್ನು ಪುನರ್‌ಸ್ಥಾಪಿಸುವಂತೆ ಹಂಪಿಯ ವಿದ್ಯಾರಣ್ಯ ಆವರಣದ ಅವರು ನಿರ್ಮಿಸಿದ ಕಟ್ಟಡಗಳು ಅವರ ಸೌಂದರ್ಯ ಪ್ರಜ್ಞೆಗೆ ಸಾಕ್ಷಿಯಾಗಿ ನಮ್ಮನ್ನು ಕೈಬೀ... ಕರೆಯುತ್ತವೆ. ಉರಿಬಿಸಿಲಿನ ಆ ಬಟಾಬಯಲಿನಲ್ಲಿ ಅವರು ನೆಟ್ಟ ಮರಗಿಡಗಳು ಇಂ... ಹೂ, ಹಣ್ಣು, ಚಿಗುರುಗಳು ನಳನಳಿಸುವ ವನಾಂತರಗಳಾಗಿ ಪರಿವರ್ತಿತವಾಗಿರುವುದ... ಹಕ್ಕಿ, ಪಕ್ಷಿ, ಪ್ರಾಣಿ ಮುಂತಾದ ನೂರಾರು ಬಗೆಯ ಜೀವರಾಶಿಗಳಿಗೆ ಆಶ್ರಯತಾಣವಾ...

ಮಲೆನಾಡನ್ನು ನೆನಪಿಸುತ್ತವೆ. ಕನ್ನಡ ವಿ.ವಿ. ಆವರಣದಲ್ಲಿ ಕಂಬಾರರು ಕೇವಲ ಕಟ್ಟಡ ಕಟ್ಟಿಲ್ಲಿಲ್ಲ. ಅವುಗಳಿಗೆ ಜೀವ ತುಂಬಿದರು. ಆದರ್ಶ ಶೈಕ್ಷಣಿಕತೆಯ ಲೇಪ ಹಚ್ಚಿದರು. ಇದು ಕನ್ನಡ ವಿಶ್ವವಿದ್ಯಾಲಯವೆಂದು ಸಾರಿದರು. ಆ ಮೂಲಕ ಬಯಲು ಮತ್ತು ಆಲಯದ ಕಲ್ಪನೆಯನ್ನು ವಚನಕಾರರ ಯುಗಕ್ಕೆ ಕೊಂಡೊಯ್ದು ವಿಶ್ವವಿದ್ಯಾಲಯವನ್ನು ಆಧುನಿಕ ಅನುಭವ ಮಂಟಪವನ್ನಾಗಿ ಪರಿವರ್ತಿಸಿದ ಕೀರ್ತಿ ಅವರದು.

ಕನ್ನಡ ಸಾಕ್ಷಿ ಪ್ರಜ್ಞೆಯ ಪ್ರತೀಕವಾಗಿರುವ, ಜಾನಪದವೆಂಬ ಅಧ್ಯಾತ್ಮಿಕ ಪರಂಪರೆಯ ಪ್ರತಿನಿಧಿಯಾಗಿರುವ ಡಾ. ಚಂದ್ರಶೇಖರ ಕಂಬಾರರ ಸಮಗ್ರ ಸಾಹಿತ್ಯವನ್ನು ಭಾರತದ ಶ್ರೇಷ್ಠ ಸಾಹಿತ್ಯವೆಂದು ಪರಿಗಣಿಸಿ 'ಜ್ಞಾನಪೀಠ' ಪುರಸ್ಕಾರವನ್ನು ನೀಡುವ ಮೂಲಕ ಕನ್ನಡ ನಾಡಿನ ಪ್ರತಿಷ್ಠೆಯನ್ನು ಮತ್ತಷ್ಟು ಔನ್ನತ್ಯಕ್ಕೆ ಕೊಂಡೊಯ್ಯಲಾಗಿದೆ. ಕನ್ನಡದ ಈ ಹೆಮ್ಮೆಗೆ ಕಾರಣೀಭೂತರಾದ ನಾಡಿನ ಗುರು ನಾಡೋಜ ಡಾ. ಚಂದ್ರಶೇಖರ ಕಂಬಾರರನ್ನು ಕನ್ನಡಿಗರೆಲ್ಲ ಮನದುಂಬಿ ಹಾರೈಸುತ್ತಾರೆ.

*

## ಚಕೋರಿ

ಸಮಕಾಲೀನ ಪ್ರಸ್ತುತತೆಯ ಸೋಗು ಅಥವಾ ಸ್ಲೋಗನ್ನುಗಳನ್ನು ಹಾಕದೆ ಚಕೋರಿ ಒಂದು ದೊಡ್ಡ ಸಮಕಾಲೀನ ಅಗತ್ಯ ಪೂರೈಸುತ್ತದೆ.

ಕಂಬಾರರ ಮಿಥಿಕ್ ದೃಷ್ಟಿ ನೈಜೀರಿಯಾದ ವೊಲೆ ಷೋಯಿಂಕಾನ ಮಿಥಿಕ ದೃಷ್ಟಿಯನ್ನು ಹಲವು ರೀತಿಯಲ್ಲಿ ಹೋಲುವಂಥದು. ಷೋಯಿಂಕಾ ತನ್ನ ಯರೂಬಾ ಬಣದ ಸ್ಮೃತಿಗಳನ್ನು ಆಧರಿಸಿ ಇವತ್ತಿನ ಜಾಗತಿಕ ಅನುಭವದ ಸ್ಥಿರಬಿಂದುಗಳನ್ನು ತನ್ನ ಕೃತಿಯ ಮುಖೇನ ಯುರೋಪಿನ ಮೇಲು ಸಂಸ್ಕೃತಿಗಳ ಕಥನಕ್ಕೆ ಪ್ರತಿಯಾಗಿ ಕಟ್ಟಿದ್ದಾನೆ. ಕಂಬಾರರ ಮಿಥಿಕ್‌ದೃಷ್ಟಿ ಯುರೋಪಿನ ಮೇಲು ಸಂಸ್ಕೃತಿಗಳಿಗಿಂತ ಭಿನ್ನವಾಗಿ ಇರುವುದು ಅಲ್ಲದೆ ಭಾರತದ ಅಫಿಷಿಯಲ್ ಸಂಸ್ಕೃತಿ (ರಾಮಾಯಣ, ಮಹಾ ಭಾರತ ಇತ್ಯಾದಿ)ಗಳ ಅಂಚಿನ ದ್ರವ್ಯಗಳಿಂದ ನಿರ್ಮಾಣವಾದುದು. ಹೀಗೆ




ಮೇಲು ಪರಂಪರೆಯ ಹಿಡಿತದಿಂದ ಪೂರ್ತಿ ಬಿಡಿಸಿಕೊಂಡ ಕವಿಗಳು ಈ ಶತಮಾನದಲ್ಲಿ ಇನ್ಯಾರೂ ನೆನಪಾಗುತ್ತಿಲ್ಲ.

–ಎಚ್.ಎಸ್. ಶಿವಪ್ರಕಾಶ್





# ಮರೆತೇನಂದರ ಮರೆಯಲಿ ಹ್ಯಾಂಗ...

– ಡಾ. ಸರಜೂ ಕಾಟ್ಕರ್

ಚಂದ್ರಶೇಖರ ಕಂಬಾರ ಪಕ್ಕಾ ಹಳ್ಳಿ ಪ್ರತಿಭೆ. ಬೆಳಗಾವಿ ಜಿಲ್ಲೆಯ ಹುಕ್ಕೇರಿ ತಾಲೂಕಿನ ಶಿವಾಪುರ – ಘೋಡಗೇರಿ ಹಳ್ಳಿಯ ಕಮ್ಮಾರಿಕೆ ಮನೆತನದ ಈ ಹುಡುಗ ಬೆಳೆದದ್ದು ಹಳ್ಳಿ ವಾತಾವರಣ ಹಾಗೂ ನಿಸರ್ಗದ ಜೊತೆಗೆ.

ಶಿವಾಪುರ – ಘೋಡಗೇರಿ ಬಗ್ಗೆ ಕಂಬಾರರಿಗೆ ಎಷ್ಟು ವ್ಯಾಮೋಹವಿದೆ ಎಂದರೆ ಅವರ ಎಲ್ಲ ಕೃತಿಗಳಲ್ಲೂ ಶಿವಾಪುರ ಬರಲೇಬೇಕು. ಶಿವಪಾರ್ವತಿಯರು ಈ ಊರಿಗೆ ಬಂದು ಊರ ಮುಂದೆ ಹರಿಯುವ ನದಿಯಲ್ಲಿ ಸ್ನಾನ ಮಾಡುತ್ತಾರೆ ಎಂದು ಕಂಬಾರ ಹೇಳುತ್ತಾರೆ. ರಾಮನ ಸೀತಾನ್ವೇಷಣೆಯಲ್ಲಿದ್ದಾಗ ಶಿವಾಪುರಕ್ಕೆ ಬಂದು ಅಲ್ಲಿದ್ದ ಲಿಂಗಕ್ಕೆ ಪೂಜೆ ಸಲ್ಲಿಸಿ ಸೀತೆಯನ್ನು ಹುಡುಕಿಕೊಡುವಂತೆ ಹರಕೆ ಹೊರುತ್ತಾನೆ. ಶಿವಪುರದಲ್ಲಿ ಇಡೀ ಬ್ರಹ್ಮಾಂಡವೇ ಇದೆ. ಇಲ್ಲಿ ಇಲ್ಲದ್ದು ಜಗತ್ತಿನಲ್ಲಿ ಎಲ್ಲೂ ಇಲ್ಲ. ಇಲ್ಲಿ ಭಾರತ ಇದೆ. ಅಮೇರಿಕ ಇದೆ. ಮಾವ್ರೋತ್ಸೆ ತುಂಗನಿಗೂ ಶಿವಪುರ ಎಂದರೆ ಪೀಕಿಂಗ್ ಇದ್ದಂತೆ.

ಆರಂಭದಲ್ಲಿ ಕಂಬಾರ ಸವೆಸಿದ ಹಾದಿ ಸುಗಮವಾಗಿರಲಿಲ್ಲ. ಕಂಬಾರ ಯುವಕರಾಗಿದ್ದಾಗ ಧಾರವಾಡದ ಕವಿ ಸಮ್ಮೇಳನದಲ್ಲಿ ಕವಿತೆ ಓದಿದ್ದರಂತೆ. ಖ್ಯಾತ ಕವಿಗಳೊಬ್ಬರು (ಮುಂದೆ ಅವರೂ ಜ್ಞಾನಪೀಠಿ ಆದರು) ಅಧ್ಯಕ್ಷತೆ ವಹಿಸಿದ್ದರು. ಕಂಬಾರರ ಕವಿತೆ ಅಲ್ಲಿ ಓದಿದ ಎಲ್ಲ ಕವಿಗಳಿಗಿಂತ ಭಿನ್ನವಾಗಿದ್ದದ್ದು ಎಲ್ಲರ ಗಮನಕ್ಕೆ ಬಂದಿದ್ದರೂ. ಅಧ್ಯಕ್ಷರು ಕಂಬಾರರ ಬಗ್ಗೆ ಕುಹಕದ ಮಾತು ಹೇಳಿದ್ದರು.

ಕಬ್ಬಿಣ ಕಾಯಿಸುವವರೂ ಈಗ ಕಾವ್ಯ ಬರೆಯುತ್ತಿದ್ದಾರೆ ಎಂಬ ಅಧ್ಯಕ್ಷರ ವ್ಯಂಗ್ಯದ ಮಾತು ಕಂಬಾರರ ಸ್ವಾಭಿಮಾನವನ್ನು

ಬಡಿದೆಬ್ಬಿಸಿತು. ಅಂದೇ ಕಂಬಾರ ಕಾವ್ಯವನ್ನು ಪಳಗಿಸಿಕೊಳ್ಳಲು ನಿರ್ಧರಿಸಿದರು. ಅವರ ಪ್ರತಿಭೆಗೆ, ಶ್ರಮಕ್ಕೆ, ಆಸಕ್ತಿಗೆ ಮತ್ತು ಶ್ರದ್ಧೆಗೆ ಸರಸ್ವತಿ ಒಲಿದು ಅವರ ಕೈಹಿಡಿದು ನಡೆಸಿದಳು.

ಕಂಬಾರರು ಕಾವ್ಯ, ಕಾದಂಬರಿ, ನಾಟಕ, ಜಾನಪದ ಕ್ಷೇತ್ರಗಳಲ್ಲಿ ತಮ್ಮದೇ ಆದ ಛಾಪು ಮೂಡಿಸಿದ್ದಾರೆ. ಭಾಷೆಯನ್ನು ಹೇಗೆ ಬೇಕೋ ಹಾಗೆ ಉಪಯೋಗಿಸುವ ಮತ್ತು ಮಣಿಸುವ ತಾಕತ್ತು ಅವರಿಗಿದೆ. ಸಾಮಾಜಿಕ ಸಮಸ್ಯೆಗಳನ್ನು ಚರ್ಚಿಸುತ್ತಲೇ ಜಾಗತಿಕ ಮಟ್ಟಕ್ಕೆ ಏರುವ ಸಾಮರ್ಥ್ಯವನ್ನು ಅವರ ನಾಟಕಗಳು ಪಡೆದಿವೆ. ಕಾದಂಬರಿಯಲ್ಲಿ ಹೊಸ ಹೊಸ ಪ್ರತಿಮೆಗಳನ್ನು, ರೂಪಕಗಳನ್ನು ಕಟ್ಟುತ್ತಲೇ ಕಂಬಾರ ಆ ಕಾದಂಬರಿಯ ಚೌಕಟ್ಟನ್ನು ಮೀರುತ್ತಾರೆ.

ಕೆಲವರ್ಷಗಳ ಹಿಂದೆ ಹೊರಬಂದ ಅವರ 'ಶಿಖರಸೂರ್ಯ' ಕಾದಂಬರಿ ಕನ್ನಡದ ಶ್ರೇಷ್ಠ ಕಾದಂಬರಿ. ಆದರೆ ಆಗ ಎದ್ದ 'ಆವರಣ'ದ ಮಾನ್ಯತೆ, ಗಲಾಟೆಯಲ್ಲಿ ಈ ಕಾದಂಬರಿಗೆ ಸಿಗಬೇಕಾದ ಪ್ರಸಿದ್ಧಿ ಸಿಗಲಿಲ್ಲ. 'ಶಿಖರಸೂರ್ಯ' ಒಂದೇ ಕಾದಂಬರಿಯಲ್ಲಿ ಕನಿಷ್ಠ ಐದು ಕಾದಂಬರಿಗಳಾಗುವಷ್ಟು ವಸ್ತು ಅಡಕವಾಗಿವೆ. ಇತ್ತೀಚಿಗೆ ಬಂದ ನಾಟಕ 'ಶಿವರಾತ್ರಿ'ಯು ಶಿವಾಪುರ ಸ್ತರದಲ್ಲಿ ಅಮೇರಿಕೆಯ ಆಕ್ರಮಣವನ್ನು ಬಯಲಿಗೆಳೆಯುತ್ತದೆ. ವಸ್ತು ವಚನ ಸಾಹಿತ್ಯದ್ದೇ ಆದರೂ ಸಮಕಾಲೀನತೆ ಅಲ್ಲಿದೆ.

ಕಂಬಾರ ಬೆಳಗಾವಿಯಲ್ಲಿ ಕೆಲಕಾಲ ಕನ್ನಡ ಪ್ರಾಧ್ಯಾಪಕರಾಗಿದ್ದರು. ಹೈಸ್ಕೂಲ್ ಶಿಕ್ಷಣ ಪಡೆಯುವಾಗ ಬೆಳಗಾವಿ ನಾಗನೂರು ಮಠದ ಬೋರ್ಡಿಂಗ್‌ನಲ್ಲಿದ್ದರು. ಆ ನೆನಪುಗಳನ್ನು ಅವರು ಮರೆತಿಲ್ಲ.

ಹಂಪಿಯ ಕನ್ನಡ ವಿಶ್ವವಿದ್ಯಾಲಯ ಕಂಬಾರರ ಕನಸಿನ ಕೂಸು. ಅದರ ಮೊಟ್ಟಮೊದಲ ಕುಲಪತಿಗಳಾಗಿದ್ದ ಕಂಬಾರ ಅದನ್ನು ಶಾಂತಿನಿಕೇತನ ಮಾದರಿಯಲ್ಲಿ ಕಟ್ಟಬೇಕೆಂದು ಕನಸು ಕಂಡಿದ್ದರು. ಅದಕ್ಕಾಗಿ ಅವರು ಪಟ್ಟ ಶ್ರಮ ಅಪಾರ. ಕರ್ನಾಟಕ ಮತ್ತು ಭಾರತದ ಉದ್ದಗಲ ಅಡ್ಡಾಡಿ ವಿಶ್ವವಿದ್ಯಾಲಯದ ಬಗ್ಗೆ ಒಂದು ನಿರ್ದಿಷ್ಟವಾದ ರೂಪ ತಯಾರಿಸಿದರು. ಕನ್ನಡ ವಿಶ್ವವಿದ್ಯಾಲಯದಲ್ಲಿ ಇಂದು ಕಲ್ಲಿನ ಬಂಡೆಗಳು ಸಜೀವವಾಗಿ ಮಾತನಾಡುತ್ತವೆಂದರೆ ಅದು ಕಂಬಾರರ ಯತ್ನದ ಫಲವೆಂದೇ ಹೇಳಬೇಕು.

ಕಂಬಾರರು ಡೌನ್ ಟು ದಿ ಅರ್ಥ್ ಮನುಷ್ಯ. ಧೋತಿ, ಜುಬ್ಬಾ ಹಾಕಿಕೊಂಡು ತಲೆಗೆ ಒಂದು ಪಟಗಾ ಸುತ್ತಿ ಆರಾಮಾಗಿ ಕಾರ್ಯಕ್ರಮಕ್ಕೆ ಬರ್ತಾರೆ. ಸಣ್ಣವರು, ದೊಡ್ಡವರೆನ್ನದೇ ಎಲ್ಲರ ಜೊತೆಗೆ ಪ್ರೀತಿಯಿಂದ ಮಾತನಾಡುತ್ತಾರೆ. ಮುಗ್ಧವಾಗಿ ದೊಡ್ಡದಾಗಿ ನಗುತ್ತಾರೆ. ಇದು ಕಂಬಾರತನ.

●

---

● ಕಾರಂತರ ನಂತರ ಎಲ್ಲ ಕ್ಷೇತ್ರಗಳಲ್ಲಿ ಸಾಧನೆ ಮಾಡಿದ ಕಂಬಾರರಿಗೆ ಈ ಪ್ರಶಸ್ತಿ ಬಂದಿರುವುದು ಉತ್ತರ ಕರ್ನಾಟಕ ಹಾಗೂ ಕರ್ನಾಟಕಕ್ಕೆ ಹೆಮ್ಮೆ ತಂದಿದೆ. ಅಲ್ಲದೇ, ಉಳಿದ ಭಾಷೆಗಳಿಗಿಂತ ಕನ್ನಡ ಸಾಹಿತ್ಯ ಮುಂದುವರಿದಿದೆ ಎಂಬುದು ಈ ಮೂಲಕ ಸ್ಪಷ್ಟವಾಗಿದೆ. ಕಂಬಾರರಿಗೆ ಅಭಿನಂದನೆ ಸಲ್ಲಿಸುತ್ತೇನೆ.

**–ಡಾ. ಸಿದ್ದಲಿಂಗ ಪಟ್ಟಣಶೆಟ್ಟಿ**



ಕನ್ನಡಕ್ಕೆ ಎಂಟನೇ ಜ್ಞಾನಪೀಠ

# ಕಂಬಾರರ ಪೌರಾಣಿಕ ಪ್ರಜ್ಞೆಯ ನಾಟಕಗಳಲ್ಲಿ ದೇಹ – ಮನಸ್ಸು

–ಡಾ. ಎಚ್.ಎಲ್. ಪುಷ್ಪ

ಆಧುನಿಕ ಕನ್ನಡ ಸಾಹಿತ್ಯದಲ್ಲಿ ಪೌರಾಣಿಕ ಪ್ರಜ್ಞೆ ೧೯೬೦ರ ನಂತರದ ನಾಟಕಗಳಲ್ಲಿ ಒಂದು ತಂತ್ರವೆನ್ನುವಂತೆ ಬಳಕೆಯಾಯಿತು. ಪಠ್ಯಕ್ರಮದಲ್ಲಿ ಪುರಾಣವಿರುತ್ತದೆ. ಆದರೆ ಆ ಪುರಾಣ ಅಥವಾ ಪುರಾಣ ಪ್ರಜ್ಞೆಯನ್ನಷ್ಟೇ ಪುನರ್ನಿರ್ಮಿಸುವುದು ನಾಟಕಕಾರರ ಉದ್ದೇಶವಾಗಿರುವುದಿಲ್ಲ. ಪುರಾಣದ ಪರಿಸರವನ್ನು ಪುನರ್ನಿರ್ಮಿಸುತ್ತಲೇ, ಆ ಪೌರಾಣಿಕ ಪಾತ್ರಗಳಲ್ಲಿ ಸಮಕಾಲೀನ ಮಾನವನ ಸಮಸ್ಯೆಯನ್ನೋ, ಮುಖಾಮುಖಿಯನ್ನೋ ಚಿತ್ರಿಸುವುದು ನಾಟಕಕಾರನ ಉದ್ದೇಶವಾಗಿರುತ್ತದೆ. ಗಿರೀಶ ಕಾರ್ನಾಡರ ಬಹುತೇಕ ನಾಟಕಗಳಲ್ಲಿ ಪುರಾಣವನ್ನು ಆವರಣವನ್ನಾಗಿ ಬಳಸಿಕೊಂಡು, ಈ ಆವರಣದೊಳಗೆ ಛಿದ್ರವಾದ ವ್ಯಕ್ತಿಗಳ ವ್ಯಕ್ತಿತ್ವದ ಗಟ್ಟಿತನವನ್ನು ಪರೀಕ್ಷಿಸಲಾಗುತ್ತದೆ. ಉದಾ: ಯಯಾತಿಯ ಪುರು, ಹಿಟ್ಟಿನಹುಂಜದ ರಾಣಿ, ಅಗ್ನಿ ಮತ್ತು ಮಳೆಯ ಅರಾವಸು, ಹಯವದನದ ಪದ್ಮಿನಿ, ನಾಗಮಂಡಲದ ನಾಗಪ್ಪ ಮತ್ತಿತರ ಪಾತ್ರಗಳು ಇಂತಹ ಛಿದ್ರ ವ್ಯಕ್ತಿತ್ವಗಳಾಗಿದ್ದು ನಮ್ಮ ಸನಾತನಪ್ರಜ್ಞೆ, ಯಜ್ಞ-ಯಾಗಗಳ ಅರ್ಥಹೀನತೆ, ಹಳೆಯದನ್ನು ತಿರಸ್ಕರಿಸಲಾರದ, ಹೊಸದನ್ನು ಒಪ್ಪಿಕೊಳ್ಳಲಾಗದ ಸಂಘರ್ಷಗಳಲ್ಲಿ ಸಿಕ್ಕಿಹಾಕಿಕೊಂಡವರು. ಇವರಲ್ಲಿ ಕೆಲವರಿಗೆ ಮೋಕ್ಷವಿದೆ. ಕೆಲವರಿಗೆ ಮೋಕ್ಷವಿಲ್ಲ.

ಲಂಕೇಶರ ನಾಟಕಗಳು ಸಂಪೂರ್ಣವಾಗಿ ಆಧುನಿಕವಾದ ಆದರೆ ಛಿದ್ರಗೊಂಡ ಮಾನವನ ತಲ್ಲಣಗಳನ್ನು ಚಿತ್ರಿಸುತ್ತವೆ. ಸಾಮಾಜಿಕ ಹಾಗೂ ಚಾರಿತ್ರಿಕ ಪ್ರಜ್ಞೆಯಲ್ಲಿ ಆಧುನಿಕ ಮಾನವನ ಅಂತಸ್ಸತ್ವ, ಘರ್ಷಣೆ ಅರಿಯಲು ಹೋಗುವುದರಿಂದ ಪುರಾಣ

ಅವರ ಆಸಕ್ತಿಯ ಕ್ಷೇತ್ರವಾಗಿಲ್ಲ. ಇವರಿಬ್ಬರಿಗಿಂತಲೂ ಭಿನ್ನವಾಗಿ ಚಂದ್ರಶೇಖರ ಕಂಬಾರರು ಜಾನಪದ ಹಾಗೂ ಸಾಮಾಜಿಕ ಪ್ರಜ್ಞೆಯಲ್ಲಿ ಆಧುನಿಕ ಮಾನವನ ಸಂಘರ್ಷವನ್ನು ಹುಡುಕ ಹೊರಟವರು. ಸಂಪೂರ್ಣವಾಗಿ ದೇಸೀ ನೆಲೆಯಲ್ಲಿ, ದೇಸೀಯ ಪ್ರಜ್ಞೆಯಲ್ಲಿ ಬಹುಪಾಲು ನಾಟಕಗಳು ರಚಿತವಾಗಿರುವುದರಿಂದ ಪುರಾಣ, ಚರಿತ್ರೆಯನ್ನು ಒತ್ತಟ್ಟಿಗಿಟ್ಟು ಗ್ರಾಮೀಣ ಸಮಾಜದ ಆಳುವ, ಆಳಿಸಿಕೊಳ್ಳುವವರ ಸಂಘರ್ಷದೊಳಗಿನಿಂದ ನಾಯಕ, ಪ್ರತಿನಾಯಕರ ಕಲ್ಪನೆಗಳು ಮೂಡುತ್ತವೆ.

ಹೀಗಾಗಿ ಕಂಬಾರರಲ್ಲಿ ಪುರಾಣಪ್ರಜ್ಞೆ ಹಾಗೂ ಪುರಾಣವೆನ್ನುವುದು ಜಾನಪದ ನಾಟಕಗಳಲ್ಲಿ ಕಥೆಗೆ ಚೌಕಟ್ಟನ್ನು ಕೊಡುವ ಒಂದು ತಂತ್ರವಾಗಿದೆಯೇ ವಿನಃ ಅದೇ ಮುಖ್ಯವಾಗುವುದಿಲ್ಲ. ಜಾನಪದ ನಾಟಕಗಳಲ್ಲಿ ಪುರಾಣ ಒಂದು ಭಾಗವೇ ವಿನಃ ಅದೇ ಮುಖ್ಯವಲ್ಲ. 'ಋಷ್ಯಶೃಂಗ' ಹಾಗೂ 'ಹುಲಿಯ ನೆರಳು' ನಾಟಕಗಳಲ್ಲಿ ಗ್ರಾಮೀಣ ದೇವತೆಯ ಕಲ್ಪನೆಯಾದ ಪಾರಂಬಿ ಕರೆವ್ವ ರಾಕ್ಷಸಗೌಡನ ದೌರ್ಜನ್ಯದಿಂದಾಗಿ ಬರಡಾದ ಹಳ್ಳಿಗೆ ಬಾಳಗೊಂಡನ ಆಗಮನದಿಂದ ಮಳೆಯಾಗುತ್ತದೆ ಎಂದು ಅಪ್ಪಣೆ ಕೊಡಿಸುತ್ತಾಳೆ. ಈ ದೇವತೆ ಜನರ ನಿರಾಶದಾಯಕ ಬದುಕಿನಲ್ಲಿ ತನ್ನನ್ನು ನಂಬಿದ ಊರ ಜನಕ್ಕೆ ಆಶಾದಾಯಕ ನಂಬಿಕೆ ಮೂಡಿಸುವ ಕೆಲಸ ಮಾಡುತ್ತಾಳೆ. ತನ್ನ ಆಗಮನದಿಂದಲೇ ಮಳೆಯಾಗುತ್ತದೆ ಎಂಬ ನಂಬಿಕೆ ಹುಸಿಯಾದಾಗ ಬಾಳಗೊಂಡನಿಗೆ ಎದುರಾದ ಯಕ್ಷಿಣಿ "ನಿಮ್ಮಣ್ಣ ನಿನಗೊಂದು ಒಸಗೆಯನ್ನು ಇತ್ತಾನು. ಸೆರಗೊಡ್ಡು ಕಂದಾ, ಮಾಣಿಕ್ಯವಿದು, ಉತ್ತಮಾಂಗದಲ್ಲಿ ಇದ ಧರಿಸಿ ಹಾಲಗಡಿಗೆಯ ಮುಗ್ಧೆಯ, ಇಲ್ಲ ಬೆಳ್ಳಿ ಬಂಗಾರದ ತೊಡೆಯವಳನ್ನು ಹಾಸಿಗೆ ಮಾಡಿ ಸಹವಾಸ ಮಾಡೆ, ಅಂತ್ಯದ ತಿಳಿಜೆವರು ಮಳೆಯಾಗಿ ಸುರಿಯುವುದು" ಎಂದು ತನ್ನ ಆಶೀರ್ವಾದ ನೀಡುತ್ತಾಳೆ. ಆದರೆ ಬಾಳಗೊಂಡನ ದುರಂತ ಅವನ ಹುಟ್ಟಿನೊಂದಿಗೇ ಬಂದಿರುವುದರಿಂದ ರಾಕ್ಷಸಗೌಡನೇ ಮಾಣಿಕ್ಯನನ್ನು ಅಪಹರಿಸಿ ಹಾಲಗಡಿಗೆಯ ಮುಗ್ಧೆಯಾದ ಕಮಲಿಯನ್ನು ಕೂಡುತ್ತಾನೆ, ಪಾಪದ ಸಂಯೋಗದಿಂದಾಗಿ ಮಳೆಬರುವುದಿಲ್ಲ. ಕಮಲಿಯೆಂದು ಭ್ರಮಿಸಿ ತನ್ನ ತಾಯಿಯನ್ನು ಅಂದರೆ ಯಕ್ಷಿಣಿ ಹೇಳಿದಂತೆ ಬಂಗಾರದ ತೊಡೆಯವಳಾದ ಗೌಡ್ತಿಯನ್ನು ಕೂಡುತ್ತಾನೆ. ಭ್ರಮೆ ಹರಿದು ಬೆಳಕು ಮೂಡಿದಾಗ ಬಾಳಗೊಂಡ ತನ್ನ ತಾಯಿಯನ್ನು ತಾನು ಕೂಡಿದ ವಿಷಯ ಅರಿತು ವಿಷಾದಕ್ಕೆ ಒಳಗಾಗಿ ಈಡಿಪಸ್‌ನ ಹಾಗೆ ಅಸಹಾಯಕನಾಗುತ್ತಾನೆ.

ಈ ಎರಡೂ ಸಂಯೋಗಗಳೂ ಅಸಹಜವೇ ಆಗಿದ್ದರಿಂದ ಯಕ್ಷಿಣಿ ಹೇಳಿದಂತೆ ಮಳೆಯಾಗುವುದಿಲ್ಲ. ಬದಲಾಗಿ ಗ್ರಾಮವನ್ನು ಬಿಟ್ಟು ಹೋಗಿದ್ದ ರಾಮಗೊಂಡನ ಆಗಮನದೊಂದಿಗೆ ಮಳೆಯಾದ ಸೂಚನೆ ನಾಟಕದ ಅಂತ್ಯದಲ್ಲಿ ಸಿಗುತ್ತದೆ. ಮಲಿನತೆ-ಪಾವಿತ್ರ್ಯತೆಯ ನಡುವಣ ಸಂಘರ್ಷದಲ್ಲಿ ಪಾವಿತ್ರ್ಯತೆಯ ಸಂಕೇತವಾಗಿದ್ದ ರಾಯಗೊಂಡನ ಮಗ ರಾಮಗೊಂಡನ ಆಗಮನದೊಂದಿಗೆ ಮಳೆಯಾಯಿತೆಂಬ ಸೂಚನೆ ಸತ್ಯಕ್ಕೇ ಗೆಲುವು ಎಂಬ ಮೌಲ್ಯ ಪ್ರತಿಪಾದಿಸುತ್ತದೆ. ಪಾರಂಬಿ ಕರೆವ್ವನಾಗಲೀ, ಯಕ್ಷಿಣಿಯಾಗಲೀ ಇಲ್ಲಿ ಮುಖ್ಯವಾಗುವುದಿಲ್ಲ ಎಂಬುದು ಇಲ್ಲಿ ಅರಿವಿಗೆ ಬರುತ್ತದೆ.

'ಹುಲಿಯ ನೆರಳು', 'ಹೇಳತೀನ ಕೇಳ' ಲಾವಣಿಯಲ್ಲಿ ಪ್ರತಿಪಾದಿಸಿದ ಪುರಾಣಕತೆಯ ರೂಪವಾಗಿದೆ. ಊರಿನ ಗೌಡನಾದ ರಾಯಗೊಂಡ ಜನರನ್ನು ಕಾಡುತ್ತಿರುವ ಪಿಳುಪಟ್ಟೆಯ ಹುಲಿಯನ್ನು ಸಂಹರಿಸಲೆಂದು ಕಾಡಿಗೆ ಹೋದವನು ರಾಕ್ಷಸನ ಕೈಯಲ್ಲಿ ಹತನಾಗುತ್ತಾನೆ.

ರಾಕ್ಷಸ. ಗೌಡನ ರೂಪದಲ್ಲಿ ಹಳ್ಳಿಯ ಪ್ರವೇಶ ಮಾಡುತ್ತಾನೆ. ಹುಲಿ ಬೇಟೆಯಿಂದ ಹಿಂದಿರುಗಿ ಬಂದ ಗೌಡ ಪಾರಂಬಿ ಕರೆವ್ವನನ್ನು ತಿರಸ್ಕರಿಸುವುದು ಕರಿಯಜ್ಜನಿಗೆ ಬಿಡಿಸಲಾರದ ಒಗಟಾಗಿದೆ. ರಾಕ್ಷಸಗೌಡನೊಂದಿಗಿನ ದಾಂಪತ್ಯದಿಂದಾಗಿ ಗೌಡ್ತಿ ಗರ್ಭಿಣಿಯಾಗುತ್ತಾಳೆ. ರಾಮಗೊಂಡ ತನ್ನ ತಾಯಿಯ ಗರ್ಭ ಅಸಹಜವೆಂದು ಗೊತ್ತಿದ್ದರೂ ಅದನ್ನು ಪ್ರೋತ್ಸಾಹಿಸಬೇಕಾಗುತ್ತದೆ. ಊರ ಜನರ ಸಂಶಯ, ರಾಮಗೊಂಡನ ಸಂಶಯದೊಂದಿಗೇ ರಾಕ್ಷಸಗೌಡನ ದೌರ್ಜನ್ಯ ಹೆಚ್ಚಾಗಿ ಬಾಳಗೊಂಡ ಕಾಡನ್ನು ಸೇರಬೇಕಾಗುತ್ತದೆ.

'ಹುಲಿಯ ನೆರಳು'ವಿನಲ್ಲಿ ರಾಮಗೊಂಡ ರಾಕ್ಷಸ ಶಕ್ತಿಯೊಂದಿಗೆ ಹೋರಾಡಲಾರದೆ, ತಂದೆಯೆಂದು ಒಪ್ಪಿಕೊಳ್ಳಲೂ ಆಗದೆ ಸಂಘರ್ಷಕ್ಕೀಡಾಗುತ್ತಾನೆ. 'ಋಷ್ಯಶೃಂಗ'ದಲ್ಲಿ ಬಾಳಗೊಂಡ ತಂದೆಯ ರೂಪದಲ್ಲಿರುವ ರಾಕ್ಷಸಗೌಡನೊಂದಿಗಿನ ಸಂಘರ್ಷದಲ್ಲೇ ತನ್ನ ವ್ಯಕ್ತಿತ್ವದ ಬಿರುಕನ್ನು ಕಂಡುಕೊಳ್ಳುತ್ತಾನೆ. ರಾಕ್ಷಸಗೌಡನ ಪಾಪದ ಸಂತಾನ ತಾನು ಎಂದು ಅರಿತಿದ್ದರಿಂದಲೇ, ತನ್ನ ಹುಟ್ಟಿನಲ್ಲೇ ಮಲಿನತೆ ಇದೆ ಎಂಬ ಅರಿವಿನಿಂದಲೇ ಬಾಳಗೊಂಡ ಅಸಫಲನಾಗುತ್ತಾನೆ. ಕೊನೆಗೆ ತಂದೆಯನ್ನು ಸಂಹರಿಸಿದರೂ ವಿಧಿಯ ಅವಕೃಪೆಗೆ ಒಳಗಾಗಿ ತಾಯಿಯನ್ನು ಕೂಡುವ ಪಾಪಕಾರ್ಯ ಮಾಡಬೇಕಾಗುತ್ತದೆ. ದುಷ್ಟಶಕ್ತಿಯನ್ನು ಕೊಂದರೂ ಈಡಿಪಸ್‌ನಂತೆ ಪಾಪಲೇಪಿತನಾಗಿದ್ದಾನೆ. ಬಾಳಗೊಂಡನಾಗಲೀ, ರಾಮಗೊಂಡನಾಗಲೀ ತಮ್ಮ ಅಂತರಂಗದೊಳಗಿನ ಬಿರುಕನ್ನು ಸರಿಪಡಿಸಲೆಂದು ಹೊರಟರೂ ಅದನ್ನು ಸರಿಪಡಿಸದಲಾಗದೆ ಸೋತು ಕೈ ಚೆಲ್ಲಿದ್ದಾರೆ. ದುಷ್ಟಶಕ್ತಿಯ ಮೇಲುಗೈ ಹಾಗೂ ದೇಹ ಮತ್ತು ಮನಸ್ಸಿನ ನಡುವೆ ಏರ್ಪಟ್ಟಿರುವ ಆಗಾಧ ಕಂದರವೇ ಇದಕ್ಕೆ ಕಾರಣವಾಗಿದೆ.

'ಜೋಕುಮಾರಸ್ವಾಮಿ' ಕಂಬಾರರ ಪ್ರಖ್ಯಾತ ನಾಟಕವಾಗಿದ್ದು, ಜಾನಪದರ ಸಾಂಸ್ಕೃತಿಕ ದೇವತೆಯೆಂದು ಪರಿಗಣಿಸಲ್ಪಟ್ಟ ಜೋಕುಮಾರನ ಬಗ್ಗೆ ಇರುವ ನಂಬಿಕೆಗಳ ಸುತ್ತ ಹೆಣೆದ ನಾಟಕವಾಗಿದೆ. ಜಾನಪದರ ನಂಬಿಕೆಯ ಪ್ರಕಾರ ಜೋಕುಮಾರಸ್ವಾಮಿ ಫಲವಂತಿಕೆಯನ್ನು ನೀಡುವ ದೇವತೆಯಾಗಿದ್ದು, ತನ್ನ ಸ್ವಚ್ಛಂದ ಪ್ರಣಯಗಳಿಂದಾಗಿ ಮತ್ತೆ ಮತ್ತೆ ಮರಣವನ್ನು ಅಪ್ಪುವ ದೇವತೆ. ತನ್ನ ಜೀವಪರ ಚಟುವಟಿಕೆಗಳ ಮೂಲಕ, ಪ್ರಣಯೋತ್ಸಾಹದ ಮೂಲಕ, ಸಮಾಜ ಬೆಳೆಸಿಕೊಂಡು ಬಂದಿರುವ ನೈತಿಕತೆಯನ್ನು ಧಿಕ್ಕರಿಸುವುದರ ಮೂಲಕ ಮತ್ತೆ ಮತ್ತೆ ಶಿಕ್ಷೆಗೆ ಗುರಿಯಾಗುವ ದೇವತೆ. ದೇಹಕ್ಕಿಂತಲೂ ಶಿಶ್ನದ ಗಾತ್ರ ದೊಡ್ಡದಿರುವ ಜೋಕುಮಾರಸ್ವಾಮಿ ಆರ್ಯೇತರ ದೇವತೆ ಎಂದು ಗುರುತಿಸಲ್ಪಟ್ಟಿದ್ದು ಕುಂಬಾರರು ತಯಾರಿಸಿದ ಈ ದೇವತೆಯನ್ನು ಅಂಬಿಗರ ಹೆಂಗಸರು ಸಗಣಿಯಲ್ಲಿ ಸಾರಿಸಿದ ಬುಟ್ಟಿಯಲ್ಲಿ ಮಡಿಕೆ ಡಬ್ಬು ಹಾಕಿ ಅದರ ಮೇಲೆ ಪ್ರತಿಷ್ಠಾಪಿಸುತ್ತಾರೆ.

ಕೆಲವು ಪ್ರದೇಶಗಳಲ್ಲಿ ಕಾಯಿಪಲ್ಲೆಯಲ್ಲಿ ಮುಖ್ಯವಾಗಿ ಸರ್ಪದ ಆಕಾರವಿರುವ ಪಡುವಲಕಾಯಿಯನ್ನೇ ಜೋಕುಮಾರನ ಮೂಲರೂಪಕ್ಕೆ ಸಮೀಕರಿಸಲಾಗಿದೆ. ಗಣೇಶನ ಖಾಸಾ ತಮ್ಮನಾದ ಜೋಕುಮಾರಸ್ವಾಮಿಗೆ ಉತ್ತರ ಕರ್ನಾಟಕದಲ್ಲಿ ವಿಶೇಷ ಮಹತ್ವವಿದೆ. ಜೋಕುಮಾರಸ್ವಾಮಿ ಶಿವನ ಮಗನಾಗಿದ್ದು ಕಿರಿಕಿರಿ ಸ್ವಭಾವದವನು. ಒಮ್ಮೆ ನದಿಗೆ ಹೋದಾಗ ಅಗಸರ ಹೆಣ್ಣಿನ ಕಣ್ಣಿಗೆ ಬಿದ್ದು ಅವಳ ಜೊತೆ ಸಂಗ ಬೆಳೆಸುತ್ತಾನೆ. ಇದನ್ನು ತಿಳಿದ ಅವಳ ಗಂಡ ಜೋಕುಮಾರನ ತಲೆಯನ್ನು ಚಚ್ಚಿ ಕೊಲ್ಲುತ್ತಾನೆ. ಮುಂದೆ ಅವನೇ ಅಗಸರ ಕುಲದೈವವಾದ ವಿಷಯ ಸಂಸ್ಕೃತ ಕೋಶದಲ್ಲಿ ದೊರೆಯುತ್ತದೆ ಎಂಬ ಅಂಶವನ್ನು ಚಂದ್ರಕಾಂತ ಪೋಕಳೆಯವರು ಗುರ್ತಿಸುತ್ತಾರೆ. ಮುಂದೆ

ಪೋಕಳೆಯವರೇ ಗುರ್ತಿಸುವಂತೆ "ಜೋಕುಮಾರಸ್ವಾಮಿ ಮಳೆ, ಹಾಲು-ಹೈನು, ಗಿಡ-ಮರ ವಿಪುಲವಾಗುವಂತೆ ನೋಡಿಕೊಳ್ಳುವ ದೇವತೆಯಾಗಿದ್ದು ಮನ್ಮಥನಷ್ಟೇ ಸ್ಪುರದ್ರೂಪಿ. ಜೋಗತಿಯ ಸೆರಗು ಹಿಡಿದೆಳೆದದ್ದರಿಂದ ಹೊಲಗೇರಿಯ ಜನರಿಂದ ಕೊಲ್ಲಲ್ಪಟ್ಟನೆಂಬ ಸಂಗತಿ ಮರಾಠಿ ಲೋಕಗೀತೆಯಲ್ಲಿದೆಯೆಂದು. ಪ್ರಾಚ್ಯ ಇಲಾಖೆಯ ಪ್ರಕಾರ ಇದು ಆರ್ಯ - ಅನಾರ್ಯರ ಸಂಘರ್ಷದ ಕತೆಯಾಗಿದೆ." (ಜೋಕುಮಾರಸ್ವಾಮಿಯ ಚಿದಂಬರ ರಹಸ್ಯ, ಪ್ರಜಾವಾಣಿ ದಿನಾಂಕ ೩-೧೦-೧೯೯೯)

ಈ ಮೇಲಿನ ಜಾನಪದ ನಂಬಿಕೆ ಹಾಗೂ ಪೌರಾಣಿಕ ಕಲ್ಪನೆಗಳಲ್ಲಿ ದೇವತೆಯಾಗಿದ್ದ ಜೋಕುಮಾರಸ್ವಾಮಿಯನ್ನು ಕಂಬಾರರು ಸಾರ್ವಕಾಲಿಕವೂ, ಸಮಕಾಲೀನವೂ ಆದ ವಸ್ತುವಿನೊಡನೆ ಸಮೀಕರಿಸಿದ್ದಾರೆ. "ಉಳುವವನೇ ನೆಲದೊಡೆಯ, ಪೌರುಷವಂತನಾದವನು ಮಾತ್ರ ಹೆಣ್ಣನ್ನು ಒಲಿಸಿಕೊಂಡು ಆಳುವ ಸಹಜ ಅಧಿಕಾರ ಪಡೆಯಬಲ್ಲ." ಎಂಬಂತಹ ವಿಚಾರಗಳಿಗೆ ಅನ್ವಯಿಸಿ ನಾಟಕ ರಚಿಸಿದ್ದಾರೆ. ಊಳಿಗಮಾನ್ಯ ವ್ಯವಸ್ಥೆಯು ಕುಸಿಯುತ್ತಿರುವ ಸಂದರ್ಭದಲ್ಲಿ, ಅದನ್ನು ಎತ್ತಿ ಹಿಡಿಯುವ ಪ್ರಯತ್ನವಾಗಿ ಗೌಡನ ಬಾಹ್ಯಾಡಂಬರ ಭೋಗವಿಲಾಸಗಳು ವಿಜೃಂಭಿಸುತ್ತವೆ. ಸಂತಾನವಿಲ್ಲದ ಗೌಡ್ತಿ ಸಂತಾನಕ್ಕಾಗಿ ಹಂಬಲಿಸುತ್ತಾ ಜೋಕುಮಾರಸ್ವಾಮಿಯನ್ನು ಪೂಜಿಸಿ, ಅದರ ಪಲ್ಲೆಯನ್ನು ತಿಂದರೆ ಮಕ್ಕಳಾಗುತ್ತವೆ ಎಂಬ ನಂಬಿಕೆಯಿಂದ ಪೂಜೆ ಮಾಡುತ್ತಾಳೆ. ಆದರೆ ಪಲ್ಲೆಯನ್ನು ತಿನ್ನುವ ಭಾಗ್ಯ ದೊರೆಯುವುದು ಗೌಡನ ಕಂಬಳಿ ಹೊದ್ದ ಬಸಣ್ಣನಿಗೆ. ಬಸಣ್ಣ ಈ ನಾಟಕದಲ್ಲಿ ಜೋಕುಮಾರಸ್ವಾಮಿಯ ಗುಣಗಳನ್ನು ಹೊಂದಿದ ವ್ಯಕ್ತಿ. ಹಲವು ಹೆಣ್ಣುಗಳೊಂದಿಗೆ ಪ್ರಣಯದಲ್ಲಿ ಸಿಕ್ಕಿಕೊಂಡ ಅವನ ಹುಟ್ಟು ಮತ್ತು ಸಾವು ಜೋಕುಮಾರಸ್ವಾಮಿಯಂತೆಯೇ ಅನಿವಾರ್ಯ. ಗೌಡ್ತಿಗೆ ಮಾತನಾಡುವ ಗಿಳಿ ಅರ್ಥಾತ್ ಸಂತಾನ ಭಾಗ್ಯ ಕೊಟ್ಟ ಬಸಣ್ಣ ಗೌಡನ ಕಡೆಯವರಿಂದ ಕೊಲೆಗೀಡಾಗುತ್ತಾನೆ. ಆದರೆ ಅವನು ಮರುಹುಟ್ಟನ್ನು ಪಡೆಯುತ್ತಾನೆ! ಅವನು ಮಾತನಾಡುವ ಗಿಳಿಯಾಗಿ ಗೌಡ್ತಿಯ ಗರ್ಭದಲ್ಲಿ ಸುರಕ್ಷಿತವಾಗಿದ್ದು ಜನ್ಮ ಪಡೆಯುತ್ತಾನೆ ಎಂಬ ಸೂಚನೆಯೊಂದಿಗೆ ನಾಟಕ ಮುಗಿಯುತ್ತದೆ.

ಜೋಕುಮಾರನ ಮಿಥ್‌ಅನ್ನು ಸಾರ್ವಕಾಲಿಕ ಹಾಗೂ ಸಮಕಾಲೀನ ವಸ್ತುವಿನೊಂದಿಗೆ ಅತ್ಯಂತ ಸಹಜವೆನ್ನುವಂತೆ ಜೋಡಿಸಿರುವುದು ನಾಟಕದ ಯಶಸ್ಸಿಗೆ ಕಾರಣವಾಗಿದೆ. ಅಸ್ತಿತ್ವಕ್ಕಾಗಿ ಹುಡುಕುವ, ದೇಹ ಮನಸ್ಸುಗಳ ದ್ವಂದ್ವ ಜಿಂಜಿಸುವ, ಗಂಡು ಹೆಣ್ಣಿನ ಸಂಬಂಧಗಳು ಸಾಂಸ್ಕೃತಿಕ ಸಮಸ್ಯೆಗಳಾಗಿ ಮೈದಾಳುವ ಕಂಬಾರರ ನಾಟಕಗಳಲ್ಲಿ ಜೋಕುಮಾರಸ್ವಾಮಿ ವಿಶಿಷ್ಟವಾದದ್ದು, ಈ ಎಲ್ಲಾ ಸಮಸ್ಯೆಗಳನ್ನು ಮೀರಿ ಗಂಡು ಹೆಣ್ಣಿನ ಸಂಬಂಧವನ್ನು ಅದರ ಸಹಜ ವ್ಯಾಪಾರಗಳೊಂದಿಗೆ ಶೋಧಿಸಲಾಗಿದೆ. ಯಾವ ಪಾತ್ರಗಳಿಗೂ ಮೈ ಮತ್ತು ಮನಸ್ಸುಗಳ ನಡುವೆ ಸಂಘರ್ಷವೇರ್ಪಡುವುದಿಲ್ಲ. ಬೌದ್ಧಿಕ ವಿಚಾರಗಳ ಪ್ರಖರತೆಗಿಂತ ಸಾಮಾನ್ಯ ಮನುಷ್ಯರ ಸಹಜ ಪ್ರವೃತ್ತಿಗಳು ಅವುಗಳ ಅಸಹಜತೆಯಿಂದ ಚಿತ್ರಿಸಲ್ಪಟ್ಟಿವೆ.

ಚಂದ್ರಶೇಖರ ಕಂಬಾರರ 'ಚಕೋರಿ' ಕಂಬಾರರ ಮಹಾಕಾವ್ಯ ಪರಂಪರೆಯಲ್ಲಿ ಬರೆದ ಕೃತಿಯಾಗಿದೆ. ಕಾವ್ಯ ರೂಪವನ್ನೇ ಹೆಸರಾಂತ ನಿರ್ದೇಶಕರಾಗಿದ್ದ ಪ್ರೊ. ಸಿ.ಜಿ. ಕೃಷ್ಣಸ್ವಾಮಿಯವರು ನಾಟಕವನ್ನಾಗಿ ನಿರ್ದೇಶಿಸಿ, ಅದು ಸಾಕಷ್ಟು ಯಶಸ್ವಿ ರಂಗಪ್ರಯೋಗವಾಗಲು ಕಾರಣವಾಗಿದೆ. ಜನಪದ ಹಾಗೂ ಶಿಷ್ಟ ಮಹಾಕಾವ್ಯಗಳ ಸತ್ವವನ್ನು ಅಡಗಿಸಿಕೊಂಡ, ಸಿದ್ಧ ಮಾದರಿಗಳನ್ನು ಕೈಬಿಟ್ಟ ಕಂಬಾರರ ಕಾವ್ಯಶಕ್ತಿಯನ್ನು ಮುಡಿಸಿಕೊಂಡ

ಕೃತಿ ಇದು. 'ಚಕೋರಿ' ಕಂಬಾರರ ನಾಟಕಗಳಲ್ಲಿ ವಿಶೇಷವಾದ ನಾಟಕ ಕಾವ್ಯವೆಂದು ಗುರ್ತಿಸಲ್ಪಟ್ಟಿದೆ. ಶಿವದೇವರ ಹಣೆಯ ಬೆವರಹನಿ ಭೂಮಿಗೆ ಬಿದ್ದು ಒಬ್ಬ ನರಮಾನವ ಹುಟ್ಟಿಕೊಂಡ. ಶಿವದೇವರ ಅಪ್ಪಣೆಯಂತೆ ಆ ನರಮಾನವ ಅಧೋಲೋಕದಲ್ಲಿದ್ದ ಮಾಯಕಾರ್ತಿಯನ್ನು ವರಿಸಿ ಮೇಲೆ ಬರುವಾಗ ಸರ್ಪಸೈತಾನ ಅವನ ಒಂದು ಕಾಲನ್ನು ಹಿಡಿದೆಳೆದ. ಇನ್ನೊಂದು ಕಾಲನ್ನು ಮಾಯಕಾರ್ತಿ ಎಳೆದದ್ದರಿಂದ ಆ ನರಮಾನವ ಇಬ್ಭಾಗವಾದ. ಶಿವದೇವರ ಕರುಣೆಯಿಂದ ಸೂರ್ಯನ ಬೆಳಕಿನಿಂದ ಅವನ ಬಲಭಾಗ, ಚಂದ್ರನ ಬೆಳಕಿನಿಂದ ಎಡಭಾಗ ಪೂರ್ಣಗೊಂಡಿತು. ನರಮಾನವನಿಂದ ಹುಟ್ಟಿದ ಎರಡು ಭಾಗಗಳಾದ ಈ ಅಣ್ಣ ತಮ್ಮರು ಶಿವದೇವರ ಕರುಣೆಯಿಂದ ಸಂಸಾರವನ್ನು ಆರಂಭಿಸಿದರು. ಸೂರ್ಯನು ಬೆಡಗಿನ ಅಣ್ಣ, ಚಂದ್ರನು ಬೆಡಗಿನ ತಮ್ಮರಾಗಿ, ಇವರ ಕುಲವೇ ಗೊಲ್ಲಕುಲವಾಗಿ ಶಿವಾಪುರವೆಂಬ ಊರು ಹುಟ್ಟಿತು.

ಈ ಬ್ರಹ್ಮಾಂಡ ಶಿವಪುರದಲ್ಲಿ ಸೇಡುಮಾರಿಯರೂ, ಯಕ್ಷಿಯರೂ ಇದ್ದಾರೆ. ಹರಿಣಿ ಎಂಬ ಯಕ್ಷಿಯೊಬ್ಬಳು ಮಾನವ-ದೇವಲೋಕದ ನಡುವೆ ರಸ್ತೆಯೊಂದನ್ನು ರಚಿಸಿ ಒಂದಾಗಿಸುವ ಪ್ರಯತ್ನ ಮಾಡಿ ನಂತರ ಚಂದ್ರನಲ್ಲಿ ಐಕ್ಯವಾದಳು. ಚಂದ್ರನಲ್ಲಿ ಇಂದಿಗೂ ಕಾಣುವ ಜಿಂಕೆಯೇ ಆ ಹರಿಣಿ ಎಂದು ಕಂಬಾರರು ಜ್ಞಾಪಿಸಿಕೊಳ್ಳುತ್ತಾರೆ. ಹಸಿರು ಕಣ್ಣಿನ, ಕೆಂಪುಬಾಯಿಯ ಸುಂದರವಾದ ದೇವತೆಗಳಾದ ಇವರು ಬಿಳಿರೆಕ್ಕೆಗಳನ್ನು ಬೀಸುತ್ತಾ, ಆಗಸದಲ್ಲಿ ಸಂಚರಿಸುತ್ತಾ, ಸ್ವಯಂಪ್ರಕಾಶಿಸುತ್ತಾ ಕವಿ-ಕಲಾವಿದ-ಲಾವಣಿಕಾರನಿಗೆ ಸ್ಫೂರ್ತಿ ನೀಡಬಲ್ಲವರಾಗಿದ್ದಾರೆ. ಮಾನವ ದೇವತೆಯರ ನಡುವೆ ಪ್ರೀತಿ ಅಸಾಧ್ಯ. ಸಾಧ್ಯವಾದರೂ ಅದೂ ದುರಂತದಲ್ಲಿ ಕೊನೆಗೊಳ್ಳುತ್ತದೆ ಎಂಬುದಕ್ಕೆ ನಮ್ಮ ಜಾನಪದ ಸಾಹಿತ್ಯದಲ್ಲಿ ಹಲವಾರು ಕತೆಗಳು ಸಿಗುತ್ತವೆ.

'ಚಕೋರಿ' - 'ಮಲೆಮಹದೇಶ್ವರ', 'ಮಂಟೇಸ್ವಾಮಿ' ಮಾದರಿಯ ಜಾನಪದೀಯ ಮಹಾಕಾವ್ಯವೆಂದು ಕರೆಯಲ್ಪಟ್ಟರೂ ನಾಯಕನಿಗಿರಬೇಕಾದ ಉದಾತ್ತತೆ, ಅಸಮಾನತೆಯ ಪರಾಕ್ರಮ, ದೈವದೆದುರು ಸೆಣಸಾಟ, ಬಂಡುಕೋರ ಪ್ರವೃತ್ತಿ ಇದ್ಯಾವುದೂ ಇಲ್ಲದ ದೇವ ಮಾನವರ ಪ್ರೇಮ ಸಂಬಂಧವನ್ನು ಸಂಗೀತದ ಹಾದಿಯಲ್ಲಿ ಹಿಡಿಯ ಹೊರಟ ಸುಂದರ ಕಾವ್ಯವೆಂದು ಹೇಳಬಹುದು. 'ಮಿಥ್'ಗಳ ಸಂಗ್ರಹವೆಂದೇ ಕರೆಯಲ್ಪಟ್ಟ ಚಕೋರಿ ಕಾವ್ಯದಲ್ಲಿ ಹೇರಳವಾದ ಮಿಥ್‌ಗಳಿಂದಾಗಿ ಅಲ್ಲಲ್ಲಿ ಸಂವಹನಕ್ಕೆ ಅಡ್ಡಿ ಮಾಡುವುದೂ ಉಂಟು. ಕಲೆ ಮತ್ತು ಕಲೆಯ ಭಾವನಾತ್ಮಕ ಪ್ರಪಂಚದೊಳಗಿನ ಸಂಬಂಧ ಲೋಕದ ರೀತಿ-ನೀತಿಗಳನ್ನು ಮೀರಿದ್ದಾಗಿದೆ. ಜಾನಪದ ಪುರಾಣಗಳ ಈ ಕಾವ್ಯದಲ್ಲಿ ಸಂಭಾವ್ಯ - ಅಸಂಭಾವ್ಯಗಳ ಪ್ರಶ್ನೆಗಿಂತ ಎಚ್.ಎಸ್. ಶಿವಪ್ರಕಾಶ್ ಗುರುತಿಸುವಂತೆ "ಇಹಲೋಕಪರವಾದ ಶುದ್ಧ ಹಾಗೂ ಮುಗ್ಧ ಆರಾಧನಾ ಭಾವವನ್ನು" ಒಪ್ಪಿಕೊಳ್ಳಬೇಕಾಗುತ್ತದೆ. ಅಲ್ಲಲ್ಲಿ, 'ರಾಧಾನಾಟ'ದ ವಿಶಿಷ್ಟ ರೂಪವನ್ನು ಸಹ ಇದು ನೆನಪಿಗೆ ತರುವುದನ್ನು ಮರೆಯುವಂತಿಲ್ಲ. ಪ್ರೇಮ ಮತ್ತು ಕಲೆಯಲ್ಲಿ ಸಾತತ್ಯ ಪಡೆಯಹೊರಟ ಚಂದಮುತ್ತನ ಪ್ರಣಯಗಾಥೆಯಲ್ಲಿ ಎಲ್ಲ ಅತೀತಗಳು ಲೌಕಿಕವಾಗುತ್ತ ಸುಂದರ ಕನಸಿನ ಲೋಕ ಕಣ್ಣ ಮುಂದೆ ಬಿಚ್ಚಿಕೊಳ್ಳುತ್ತದೆ. ಕಾವ್ಯದ ಕೊನೆಯಲ್ಲಿ ವಿಷಾದ ಉಳಿಯುವುದಿಲ್ಲ. ಒಂದು ರೀತಿಯ ಧನ್ಯತೆಯ ಶಾಂತರಸ ಮೂಡುತ್ತದೆ.

'ಮಹಾಮಾಯಿ' ಕಂಬಾರರ ನಾಟಕಗಳಲ್ಲಿ ಇನ್ನೊಂದು ವಿಶಿಷ್ಟ ಕೃತಿ. ಅವರ ಇತರೆ

ನಾಟಕಗಳಲ್ಲಿರುವಂತೆ ಜಮೀನುದಾರಿಕೆಯ ಆಳ್ವಿಕೆಯಾಗಲೀ, ತನ್ನ ಸಮೃದ್ಧ ಜಾನಪದ ವಿವರಗಳೊಂದಿಗೆ ವಿಜೃಂಭಿಸುವ ಕಾಮವಾಗಲೀ ಇಲ್ಲಿ ಮುಖ್ಯವಾಗದೆ ದೇವರ ನಿಯತಿಯ ವಿರುದ್ಧ ಹೋರಾಡಿ ತನ್ನತನ ಸ್ಥಾಪಿಸಲೆತ್ನಿಸುವ ಮನುಷ್ಯನೊಬ್ಬನ ಹೋರಾಟದ ಕತೆಯಾಗಿದೆ. ಈ ಹೋರಾಟವಾದರೂ ಎಂತಹುದು. ಸಾವಿನ ಅಧಿದೇವತೆಯಾದ ಶೆಟವಿಯ ಸಾಕು ಮಗ ಸಂಜೀವಶಿವ ಅವಳ ಪ್ರೀತಿಯನ್ನು ಉಳಿಸಿಕೊಳ್ಳುತ್ತಲೇ ಅವಳ ಸರ್ವಾಧಿಕಾರದ ವಿರುದ್ಧ ದಂಗೆಯೇಳುವ ಕತೆಯಿದಾಗಿದೆ. ಆದರೆ ಎಲ್ಲಾ ನಾಟಕಗಳು ದುರಂತದಲ್ಲಿ ಕೊನೆಗೊಳ್ಳುವಂತೆ ಈ ನಾಟಕ ಅಂತ್ಯವಾಗದೆ ದೇವತೆಗಳು ಕರುಣೆ ಕಳೆದುಕೊಂಡರೂ ಅವರ ನಿಯತಿಯ ವಿರುದ್ಧ ಹೋರಾಡಿ ಗೆದ್ದು ನಿಲ್ಲುವ ಕತೆಯಿದು.

ಸಾವಿನ ದೇವತೆ ಶೆಟವಿಯ ಸಾಕು ಮಗ ಸಂಜೀವಶಿವ. ತಾಯಿಯ ಆಶೀರ್ವಾದ ಬಲದಿಂದಾಗಿ ಆ ಸುತ್ತಮುತ್ತಲೆಲ್ಲ ಪ್ರಸಿದ್ಧನಾದ ವೈದ್ಯ. ಇಪ್ಪತ್ತು ವರ್ಷಗಳ ಕಾಲ ಶೆಟವಿ ದೇವತೆಯ ಕರುಣೆಯ ಶಿಶುವಾದ ಸಂಜೀವ ಶಿವ ಪ್ರಸಿದ್ಧನಾಗಿರುವುದು ಅವನ ಚಿಕಿತ್ಸಾ ವಿಧಾನದಲ್ಲಿ. ಸಂಜೀವಶಿವ ರೋಗಿಯ ನಾಡಿಮಿಡಿತ ನೋಡುವಾಗ ರೋಗಿಯ ಎಡಕ್ಕೆ ಇಲ್ಲವೇ ಬಲಕ್ಕೆ ದೇವಿ ಪ್ರತ್ಯಕ್ಷವಾಗುತ್ತಾಳೆ. ಬಲಕ್ಕೆ ಪ್ರತ್ಯಕ್ಷವಾದರೆ ರೋಗಿ ಉಳಿಯುತ್ತಾನೆ, ಎಡಕ್ಕೆ ಪ್ರತ್ಯಕ್ಷವಾದರೆ ರೋಗಿ ಸಾಯುತ್ತಾನೆ. ದೇವಿಯ ಈ ಸೂಚನೆಯನ್ನರಿತೇ ಅವನ ವೈದ್ಯ ಆರಂಭವಾಗುತ್ತದೆ. ದೇವಿ ಎಡಕ್ಕೆ ನಿಂತರೆ ಆ ರೋಗಿಗಳನ್ನು ಸಂಜೀವ ನಿರಾಕರಿಸುತ್ತಾನೆ. ಶೆಟವಿ ದೇವಿಯ ಭದ್ರವಾದ ಕರುಣೆಯ ಹಿಡಿತ ಸಂಜೀವಶಿವನ ಮೇಲಿದೆ.

ಆದರೆ ಸಂಜೀವಶಿವನಿಗೆ ಸಮಸ್ಯೆ ಆರಂಭವಾಗುವುದು ಅರಮನೆಯಲ್ಲಿನ ರಾಜಕುಮಾರಿಗೆ ಚಿಕಿತ್ಸೆಗೆ ಮೀರಿದ ಖಾಯಿಲೆಯೊಂದು ಕಾಡಲಾರಂಭಿಸಿದಾಗ. ಚಿಕಿತ್ಸೆಗೆಂದು ಅರಮನೆಯಿಂದ ಕರೆ ಬಂದಾಗಲೆಲ್ಲಾ ಅವನು ಹೋಗದಂತೆ ದೇವಿ ತಡೆಯೊಡ್ಡುತ್ತಾಳೆ. ರಾಜಕುಮಾರಿಯ ಆಯುಷ್ಯ ತೀರುತ್ತಾ ಬಂದಂತೆ ಆ ವೇದನೆ ತಡೆಯಲಾರದ ಅವಳು ಮಾಯಿಯ ಬೆಟ್ಟಕ್ಕೆ ಬಂದು ಸಾವಿನ ಗುಹೆಯಂತಿದ್ದ ಅದನ್ನು ಪ್ರವೇಶಿಸುವ ಪ್ರಯತ್ನ ಮಾಡುತ್ತಾಳೆ. ಅಲ್ಲಿಗೆ ಬಂದ ಸಂಜೀವಶಿವ ಅವಳ ಸಾವಿನ ಪ್ರಯತ್ನವನ್ನು ತಡೆಯುತ್ತಾನೆ. ಇಬ್ಬರಲ್ಲೂ ಪ್ರೇಮಾಂಕುರವಾಗಿ ಸಾವನ್ನು ತಡೆಯಲು ಅವಳ ಕೊರಳಿಗೆ ಮದ್ದಿನ ಬಳ್ಳಿಯನ್ನು ಹಾಕುತ್ತಾನೆ. ಚೈತನ್ಯದಿಂದ ನಳನಳಿಸುವ ಅವಳ ಕೊರಳಿನಿಂದ ಮದ್ದಿನ ಬಳ್ಳಿ ತೆಗೆಯುವ ಆದೇಶ ಕೊಡುತ್ತಾಳೆ ಶೆಟವಿ ತಾಯಿ. ತನ್ನ ಸೂಚನೆಯನ್ನು ತಿರಸ್ಕರಿಸಿದ ಸಂಜೀವಶಿವ ಅವಳಲ್ಲಿ ಸಿಟ್ಟಿಗೇಳಿಸುತ್ತಾನೆ. ರಾಜಕುಮಾರಿಯ ಕೊರಳಿಗೆ ಹಾಕಿದ ಬಳ್ಳಿ ಕೇವಲ ಸಾವನ್ನು ತಡೆಯುವಂತದ್ದಲ್ಲ, ಅದು ಅವನು ತೊಡಿಸಿ ತಾಳಿಯಂತೆಯೇ ಪರಿಣಮಿಸುತ್ತದೆ. ಇಬ್ಬರೂ ಪರಸ್ಪರ ಪ್ರೀತಿಗೆ ಒಳಗಾಗಿದ್ದಾರೆ. ತನ್ನ ಆಣತಿಯನ್ನು ಮೀರಿದ ಸಂಜೀವಶಿವನಿಗೆ ತಾಯಿ

> ಸಾವು ಜಗತ್ತಿನ ಸಾಮಾನ್ಯ ನಿಯಮ
> ಮನುಷ್ಯನೇ ಸಾಯುವುದುಂಟಂತೆ, ಇನ್ನು ನಿನ್ನ ಪ್ರೀತಿಯದೇನು
> ದೇಹ ಬೆಳೆದಂತೆ ಅದೂ ಹುಟ್ಟಿ ಸಾಯುತ್ತದೆ.

ಹೀಗೆ ಬುದ್ಧಿವಾದ ಹೇಳುತ್ತಾ ಕಾಮುವೆಂಬುದು ಜೆಂಕಿ, ಬೆಳಕಲ್ಲ ಎಂಬ ಎಚ್ಚರಿಕೆ ಕೊಡುತ್ತಾಳೆ.

ಜನಸಾಮಾನ್ಯರ ಬದುಕಿಗೆ ಹತ್ತಿರವಾದ ಶೆಟವಿ ತಾಯಿ ಜಾನಪದ ದೇವತೆಯಾಗಿದ್ದು

ಸಾವಿನ ಹಲವು ವಿಷಯಗಳು ಚರ್ಚಿಸಲ್ಪಟ್ಟಿವೆ. ಕೆಟವಿ ತಾಯಿ ಇಲ್ಲಿ ರಂಗಭೂಮಿ ಪ್ರೇಕ್ಷಕರ ಬಗ್ಗೆ, ಮನುಷ್ಯತ್ವ-ಅಮರತ್ವದ ಬಗ್ಗೆ, ಸಾವು-ಜೀವಗಳ ಬಗ್ಗೆ ತಾನೇ ನೇರವಾಗಿ ಮಾತನಾಡುತ್ತಾಳೆ. ಸಾವನ್ನು ಗೆಲ್ಲ ಹೊರಟ ಸಂಜೀವಶಿವನಿಗೆ ಇರುವ ಮತ್ತೊಂದು ಸಮಾನಾಂತರ ಪಾತ್ರವೆಂದರೆ ಮದನತಿಲಕನದು. ಜೀವ ಚೈತನ್ಯ, ಉಲ್ಲಾಸವನ್ನು ಪ್ರತಿನಿಧಿಸುವ ಮದನತಿಲಕ ಕೆಟವಿಯನ್ನು ನಂಬಿಸಲು ಹಿಡಿದ ಮಾರ್ಗ 'ವೇಷಾಂತರ'ವಾಗಿತ್ತು. ಈ ನಾಟಕದಲ್ಲಿ ಉಳಿದ ನಾಟಕಗಳಂತೆ ಸಾಮಾಜಿಕ, ವೈಯಕ್ತಿಕ ಸಮಸ್ಯೆಗಳೊಂದಿಗೆ ನಾಯಕ ಘರ್ಷಿಸುವುದಿಲ್ಲ. ಅವನ ದೇಹ ಮತ್ತು ಮೈಗಳ ನಡುವೆ ಯಾವುದೇ ವೈಚಾರಿಕಾ ಸಂಘರ್ಷವಿಲ್ಲ. ಅವನ ಸಂಘರ್ಷವೇನಿದ್ದರೂ 'ತನ್ನನ್ನು ಹಾಗೂ ತನ್ನ ಮರಣವನ್ನು' ಹಿಡಿತದಲ್ಲಿಟ್ಟುಕೊಂಡ ತಾಯ್ತನದ ಆರ್ದ್ರಭಾವ ಹಾಗೂ ಸಾವಿನ ಕರಾಳ ಮುಖವನ್ನು ಹೊತ್ತ ಕೆಟವಿ ತಾಯಿಯೊಂದಿಗೆ. ಸಿಸಿಫಸ್‌ನ ಹಾಗೆ ಮಾನವರ ಪರವಾಗಿ ದೇವತೆಗಳನ್ನು ಎದುರು ಹಾಕಿಕೊಂಡ, ಪ್ರೀತಿಯ ಮಹತ್ವವನ್ನು ಅರಿತು ಗೆದ್ದ ಮಾನುಷ ವೀರನಾಗಿ ಸಂಜೀವಶಿವ ಇಲ್ಲಿ ಪ್ರತಿಷ್ಠಾಪಿಸಲ್ಪಟ್ಟಿದ್ದಾನೆ. "ಮಹಾಮಾಯಿ ಕಂಬಾರರ ಈ ಹಿಂದಿನ ಜಾನಪದ ಶೈಲಿಯ ನಾಟಕಗಳಿಗಿಂತ ಭಿನ್ನವಾಗಿ ತೋರುತ್ತದೆ. ಅತ್ಯಂತ ಬುದ್ಧಿಪೂರ್ವಕವಾಗಿ, ತಾಳ್ಮೆಯಿಂದ ಸೂಕ್ಷ್ಮವಾಗಿ ಗಾಢವಾಗಿ ಪಾತ್ರಗಳನ್ನು ನಿರ್ಮಿಸುತ್ತಾ ಗಂಭೀರ ನಾಟಕದ ಕ್ರಮದಲ್ಲಿ ಮನುಷ್ಯನ ಅನಂತ ಕಾಲದ ಸಾವು ಮತ್ತು ಬದುಕಿನ ಚೈತನ್ಯಗಳನ್ನು ಮಹಾಮಾಯಿ ಕೃತಿಯು ಬಿಂಬಿಸುತ್ತದೆ. ಮನುಷ್ಯರಿಗೆ ಅವರ ಹುಟ್ಟಿನ ಮೂಲ ಶಕ್ತಿ ದೊಡ್ಡದೋ ಅಥವಾ ತಾನು ಗ್ರಹಿಸಿದ ಅರಿವು ಮುಖ್ಯವೋ, ಈ ಸೃಷ್ಟಿಯ ಅನಂತ ನಿಗೂಢದ ಎದುರು ಸೋಲುವುದು ನ್ಯಾಯವೋ ಎಂಬ ಜಿಜ್ಞಾಸೆಗಳು ಈ ನಾಟಕದೊಳಗೆ ಹುಟ್ಟಿಕೊಳ್ಳುತ್ತವೆ. ಇದಕ್ಕಾಗಿ ಪರಂಪರೆಯ ಪುರಾಣದ ಮನಸ್ಸಿನ ಪ್ರತಿಮೆಗಳನ್ನು ಕಂಬಾರರು ಈ ನಾಟಕದಲ್ಲಿ ಬಹಳ ಸಮರ್ಥವಾಗಿ ಬಳಸಿಕೊಳ್ಳುತ್ತಾರೆ. ಕಾವ್ಯ, ನಾಟಕ, ಕಾದಂಬರಿ, ಕತೆ ಹಾಗೂ ಶುದ್ಧಾಂಗ ಪ್ರದರ್ಶನದಂತೆ ಬೆಳೆಯುವ ಈ ಬರಹ ಏಕಕಾಲಕ್ಕೆ ಓದುಗನ ಪ್ರಜ್ಞೆಯಲ್ಲಿ ಬಹುರೂಪಿ ಸಂವೇದನೆಯನ್ನು ಉಂಟುಮಾಡುತ್ತದೆ."
(ಮೊಗಳ್ಳಿ ಗಣೇಶ: ಸಾಹಿತ್ಯ ಸಂಚಯ, ವಿಜಯ ಕರ್ನಾಟಕ, ದಿನಾಂಕ ೧೬-೭-೨೦೦೦)

ಚಕೋರಿ ಮತ್ತು ಮಹಾಮಾಯಿ ಜಾನಪದ ಪರಂಪರೆಗೆ ಸೇರಿದ ನಾಟಕಗಳಾಗಿದ್ದು, ಪುರಾಣವೆನ್ನುವುದು ಅಸ್ಪಷ್ಟ ಕಲ್ಪನೆಯೆಂಬಂತೆ ನೆರಳಾಡುತ್ತದೆ. ಮಹಾಮಾಯಿಯ ಸಂಜೀವಶಿವನಿಗಾಗಲೀ, ಚಕೋರಿಯ ಚಂದಮುತ್ತನಿಗಾಗಲೀ ದ್ವಂದ್ವತೆಯ ಪ್ರಶ್ನೆಗಳೇ ಉದ್ಭವಿಸುವುದಿಲ್ಲ. ದೇವ ಹಾಗೂ ಮಾನವ ಸಂಬಂಧದಲ್ಲಿ ಮಾನವೀಯ ಸಂಬಂಧಗಳನ್ನು ಉಳಿಸಿಕೊಳ್ಳುವ ನಿರಂತರ ಪ್ರಯತ್ನ ನಡೆಸಲಾಗುತ್ತದೆ. ಸಂಜೀವ ಶಿವನಿಗೆ ದೇವತೆಗಿಂತ ರಾಜಕುಮಾರಿಯ ಲೌಕಿಕ ಪ್ರೇಮದ ಸೆಳೆತ ಮುಖ್ಯವೆನಿಸಿದರೆ, ಚಂದಮುತ್ತನಿಗೆ ಲೌಕಿಕ ಸೆಳೆತಗಳಿಗಿಂತ ಯಕ್ಷಿಯ ಪ್ರೇಮ ಪಡೆಯುವುದು ಸಾರ್ಥಕವೆನಿಸುತ್ತದೆ. ಕಂಬಾರರ ನಾಟಕಗಳಲ್ಲಿ ಜಾನಪದವಾಗಲಿ, ಪುರಾಣವಾಗಲೀ ವಸ್ತುವಿನಲ್ಲಿ ಅವಿನಾಭಾವವಾಗಿ ಸೇರಿಹೋಗಿರುವುದರಿಂದ, ಶುದ್ಧ ಜಾನಪದೀಯ ಕಾಲ್ಪನಿಕ ಪಾತ್ರಗಳ ಸುತ್ತ ಕತೆ ನಡೆಯುವುದರಿಂದ ಆಧುನಿಕ ಯುಗದ ಸಂಘರ್ಷಗಳು ಮುಖ್ಯ ಅಂಶವಾಗುವುದಿಲ್ಲ. ಆದಾಗ್ಯೂ ಕಂಬಾರರ ವಸ್ತು, ಶೈಲಿ, ನಿರೂಪಣೆ, ಕಾರ್ನಾಡ, ಲಂಕೇಶರ ನಾಟಕಗಳಿಗೆ ಭಿನ್ನ ಮಾದರಿ ಒದಗಿಸಿದೆ ಅನ್ನಲು (ಚಕೋರಿ, ಮಹಾಮಾಯಿ) ಪುರಾವೆಯಿದೆ.

# ಕಂಬಾರರಿಗೆ ಜ್ಞಾನಪೀಠ

ಕನ್ನಡಕ್ಕೆ ಮತ್ತೊಂದು ಶೃಂಗಸದೃಶ ಪುರಸ್ಕಾರದ ಪುಳಕ. ಅದನ್ನು ತಂದು ಕೊಟ್ಟವರು ಕವಿ ಚಂದ್ರಶೇಖರ ಕಂಬಾರ. ೨೦೧೦ರ ಜ್ಞಾನಪೀಠ ಪ್ರಶಸ್ತಿಯನ್ನು ಗಳಿಸುವ ಮೂಲಕ ಕಂಬಾರರು ಕನ್ನಡಿಗರ ಸಾಂಸ್ಕೃತಿಕ ಹಿರಿಮೆಗೆ ಕೋಡು ಮೂಡಿಸಿದ್ದಾರೆ. ಇದು ಕನ್ನಡಕ್ಕೆ ಸಂದ ಎಂಟನೆಯ ಜ್ಞಾನಪೀಠ. ಕನ್ನಡ ಸಾಹಿತ್ಯದ ಭವ್ಯ ಪರಂಪರೆ, ಹೊಸತನ ಮತ್ತು ಮೌಲಿಕ ಸತ್ವಗಳಿಗೆ ಮತ್ತೊಮ್ಮೆ ಸಂದಿರುವ ರಾಷ್ಟ್ರೀಯ ಮಟ್ಟದ ಪುರಸ್ಕಾರ. ಭಾರತೀಯ ಸಾಹಿತ್ಯದಲ್ಲಿ ಪ್ರತಿಷ್ಠಿತವಾಗಿರುವ ಈ ಪ್ರಶಸ್ತಿಯನ್ನು ದೇಶದಲ್ಲಿಯೇ ಅತ್ಯಂತ ಹೆಚ್ಚಿನ ಸಂಖ್ಯೆಯಲ್ಲಿ ಗಳಿಸಿದ ಹಿರಿಮೆ ಕನ್ನಡದ್ದಾಗಿದೆ. ಕನ್ನಡದಲ್ಲಿ ನವ್ಯ ಸಾಹಿತ್ಯದ ಪ್ರಯೋಗಗಳ ಕಾಲದಲ್ಲಿ ಸಾಹಿತ್ಯ ಕೃಷಿಯನ್ನು ಆರಂಭಿಸಿದ ಕಂಬಾರರದು ಹೊಸಕನ್ನಡ ಸಾಹಿತ್ಯದ ಎಲ್ಲ ಪ್ರಕಾರಗಳಲ್ಲಿಯೂ ಯಶಸ್ಸು ಕಂಡ ಸಮೃದ್ಧತೆ. ನವ್ಯ ಸಾಹಿತ್ಯದ ಪ್ರಚಾರ ಅಬ್ಬರದ ಕಾಲದಲ್ಲಿಯೂ ಹತ್ತರಲ್ಲಿ ಒಬ್ಬರಾಗದೆ, 'ಹೇಳತೇನ ಕೇಳ ಗೆಳೆಯ ನಿನ ಮುಂದ ಕತಿಯೊಂದ, ನನ ಮುಂದೆ ಕುಂತ್ರ ಹೀಂಗ ತೆರೆದ ಮನ' ಎಂದು ತಮ್ಮದೇ ಪ್ರತ್ಯೇಕ ಧ್ವನಿಯನ್ನೂ ಅದಕ್ಕೆ ಸ್ಪಂದಿಸುವ ಆಪ್ತವಾದ ಓದುಗ ವರ್ಗವನ್ನೂ ಸೃಷ್ಟಿಸಿಕೊಂಡವರು ಕಂಬಾರರು. ತಮ್ಮೆಲ್ಲ ಬರಹಗಳಲ್ಲಿ ಅವರದು ಮಿತ್ರಸಂಹಿತೆಯ ಅನುನಯ. ಅದು ಹತ್ತು ಕಾವ್ಯ ಸಂಕಲನ, ೨೫ ನಾಟಕ, ಐದು ಕಾದಂಬರಿ ಹಾಗೂ ಸಂಶೋಧನೆ, ಸಾಹಿತ್ಯ ಸಂಸ್ಕೃತಿಯ ಚಿಂತನೆ ಕುರಿತ ಹದಿಮೂರು ಮೌಲಿಕ ಕೃತಿಗಳ ಸಮೃದ್ಧ ಸಾಹಿತ್ಯ ಭಂಡಾರ. ಸಮೃದ್ಧಿಯ ಜೊತೆಗೆ ವೈವಿಧ್ಯ. ಈ ಪ್ರಮಾಣದ ಪ್ರಕಾರ ವೈವಿಧ್ಯ ಆಧುನಿಕ ಕನ್ನಡ ಸಾಹಿತ್ಯದಲ್ಲಿ ವಿರಳ. ಚಲನಶೀಲ ಸಮಾಜದ ಗತಿಸ್ಥಿತಿಯನ್ನು ನೆಲಮೂಲದ ಜಾನಪದ ಹಿನ್ನೆಲೆಯಲ್ಲಿ ರೂಪಕವಾಗಿ ಕಂಡರಿಸಿದ ಅಭಿಜಾತ ಪ್ರತಿಭೆ ಕಂಬಾರರ ಸಾಹಿತ್ಯ ಕೃತಿಗಳಲ್ಲಿ ಹರಳುಗಟ್ಟಿವೆ.

ಕನ್ನಡದಲ್ಲಿ ದೇಸಿ ಸತ್ವವನ್ನು ಕವಿ ದ.ರಾ. ಬೇಂದ್ರೆ ಅವರಿಗಿಂತಲೂ ವಿಭಿನ್ನವಾಗಿ ಮತ್ತು ಸಮರ್ಥವಾಗಿ ಸಾಹಿತ್ಯದಲ್ಲಿ ತಂದವರೆಂದು ವಿಮರ್ಶಕರು ಗುರುತಿಸಿದ್ದಾರೆ. ಈ ಪ್ರಶಸ್ತಿಯ ಮೂಲಕ ಕನ್ನಡದ ಜಾನಪದ ಸತ್ವಕ್ಕೆ ರಾಷ್ಟ್ರಮಟ್ಟದಲ್ಲಿ ಮನ್ನಣೆ ಸಿಕ್ಕಿದೆ. ಗ್ರಾಮೀಣ ಹಿನ್ನೆಲೆಯಿಂದ ಬಂದು ಪ್ರತಿಭಾ ವಿಶೇಷ ಮಾತ್ರದಿಂದಲೇ ಸಾಹಿತ್ಯದ ಮುಖ್ಯಧಾರೆಯಲ್ಲಿ ತಮ್ಮದೇ ಛಾಪು ಮೂಡಿಸಿದ ಕಂಬಾರರು ಈ ನಿಟ್ಟಿನಲ್ಲಿ ದಾರ್ಶನಿಕ ಕವಿ ಕುವೆಂಪು ಅವರನ್ನು ನೆನಪಿಗೆ ತರುತ್ತಾರೆ. ಸಾಹಿತ್ಯ, ರಂಗಭೂಮಿ, ಚಲನಚಿತ್ರ, ಮೊದಲಾಗಿ ಹಲವಾರು ಮಾಧ್ಯಮಗಳಲ್ಲಿ ತಮ್ಮ ಸೃಜನಶೀಲತೆಯನ್ನು ಮೆರೆದಿರುವ ಕಂಬಾರರು ಬಹುಮುಖಿ ಪ್ರತಿಭೆಯ ಧೀಮಂತ. ಕಂಬಾರರ ಈಚಿನ ಮಹತ್ವದ ಕಾದಂಬರಿ 'ಶಿಖರಸೂರ್ಯ'ವನ್ನು ಉತ್ಕೃಷ್ಟ ಕಾವ್ಯವೆಂದೇ ಪರಿಭಾವಿಸಿರುವ ವಿಮರ್ಶಕರು, ಅದು ಸಾಂಸ್ಕೃತಿಕ ಮತ್ತು ದಾರ್ಶನಿಕ ಸ್ವಾಯತ್ತತೆಯನ್ನು ಸಾಧಿಸುವ ಕೃತಿಯೆಂದು ಬಣ್ಣಿಸಿದ್ದಾರೆ. ಅವರ ಸಮಕಾಲೀನ ಬರಹಗಾರರೆಲ್ಲ ಸೃಜನಾತ್ಮಕ ಚಟುವಟಿಕೆಯಿಂದ ನಿರ್ಗಮಿಸಿ ಆತ್ಮಕತೆ, ಸಮಗ್ರ ಸಾಹಿತ್ಯ ಸಂಗ್ರಹಗಳಲ್ಲಿ ತೊಡಗಿರುವಾಗ ಸಮಕಾಲೀನ ವಸ್ತುಗಳನ್ನು ಆಧರಿಸಿ ಇನ್ನೂ ಹೊಸರೀತಿಯ ನಾಟಕ ಬರೆಯುವ ಉತ್ಸಾಹವನ್ನು ಕಂಬಾರರು ಪ್ರಕಟಿಸಿದ್ದಾರೆ. ಸಾಹಿತ್ಯ ವಿದ್ಯಾರ್ಥಿಗಳು ಮಾತ್ರವಲ್ಲದೆ, ನಾಡಿನ ಎಲ್ಲ ವರ್ಗದ ಜನತೆ ಕಂಬಾರರಿಗೆ ಜ್ಞಾನಪೀಠ ಪ್ರಶಸ್ತಿ ಲಭಿಸಿದ್ದಕ್ಕೆ ಸಂಭ್ರಮ ಪಟ್ಟಿದ್ದಾರೆ. ಶ್ರೀಸಾಮಾನ್ಯರ ಬದುಕಿನಿಂದಲೇ ಬರವಣಿಗೆಗೆ ಪ್ರೇರಣೆ ಪಡೆದು ಅದನ್ನು ಜಾನಪದ ಸತ್ವದಲ್ಲಿ ಪುನರ್‌ಸೃಷ್ಟಿಸುವ ಚೈತನ್ಯವನ್ನು ಕಂಬಾರರು ಈವರೆಗೆ ಪ್ರಕಟಿಸಿದ್ದಾರೆ. ಎಪ್ಪತ್ತರ ಎತ್ತರದಲ್ಲೂ ಕಂಬಾರರಲ್ಲಿ ಉಳಿದುಕೊಂಡಿರುವುದು ಕಾರಯಿತ್ರೀ ಪ್ರತಿಭೆ. ಅವರಿಂದ ಇನ್ನಷ್ಟು ಮಹತ್ವದ ಸಾಹಿತ್ಯ ಕೃಷಿಯನ್ನು ಕೈಗೆಟುಕುವ ಬೆಲೆಯಲ್ಲಿ ಓದುಗರಿಗೆ ಸಿಗುವಂತೆ ಮಾಡುವ ಸಾಹಿತ್ಯಕ ಹೊಣೆಗಾರಿಕೆಯನ್ನು ರಾಜ್ಯ ಸರ್ಕಾರ ನಿರ್ವಹಿಸಿರುವುದು ಅದರ ಸಾಂಸ್ಕೃತಿಕ ಜವಾಬ್ದಾರಿಯಾಗಿದೆ.

**ಪ್ರಜಾವಾಣಿ** – ಸಂಪಾದಕೀಯ. ೨೦. ಸೆಪ್ಟೆಂಬರ್ ೨೦೧೧



ಕನ್ನಡಕ್ಕೆ ಎಂಟನೇ ಜ್ಞಾನಪೀಠ

# ಕಂಬಾರ: ಅತ್ತ ಅಲ್ಲಮ ಇತ್ತ ಲೋರ್ಕಾ

– ಎಚ್.ಎಸ್. ಶಿವಪ್ರಕಾಶ

ಕಂಬಾರರ ಮೂಲಕ ಕನ್ನಡಕ್ಕೆ ಎಂಟನೆಯ ಜ್ಞಾನಪೀಠ ಪ್ರಶಸ್ತಿ ದೊರಕಿದೆ. ತಮ್ಮ ವಿಪುಲ ಹಾಗೂ ವೈವಿಧ್ಯಮಯ ಸಾಹಿತ್ಯ ಸೃಷ್ಟಿಗಾಗಿ ಈ ಹಿಂದೆ ಹಲವಾರು ರಾಜ್ಯ ಹಾಗೂ ರಾಷ್ಟ್ರಮಟ್ಟದ ಪ್ರಮುಖ ಪ್ರಶಸ್ತಿಗಳನ್ನು ಗಳಿಸಿಕೊಂಡಿರುವ ಕಂಬಾರರ ಸಾಹಿತ್ಯ ಜೀವನಕ್ಕೆ ಜ್ಞಾನಪೀಠ ಪ್ರಶಸ್ತಿ ಶಿಖರಪ್ರಾಯವಾಗಿದೆ. ಹಿಂದೆ ಕನ್ನಡಕ್ಕೆ ಏಳು ಜ್ಞಾನಪೀಠ ಪ್ರಶಸ್ತಿ ಪ್ರಶಸ್ತಿಗಳು ಸಿಕ್ಕಿರುವುದೂ, ಜ್ಞಾನಪೀಠ ಪ್ರಶಸ್ತಿಗಳ ದೃಷ್ಟಿಯಲ್ಲಿ ಕನ್ನಡವು ಇತರ ಎಲ್ಲ ಭಾರತೀಯ ಭಾಷೆಗಳನ್ನು ಹಿಂದೆ ಹಾಕಿರುವುದೂ ಕನ್ನಡಿಗರಾದ ನಮ್ಮೆಲ್ಲರಿಗೆ ಹೆಮ್ಮೆಯ ವಿಷಯ. ನಿಜ. ಇಷ್ಟಾದರೂ ಪು.ತಿ.ನ., ಅಡಿಗ, ಕೆ.ಎಸ್. ನರಸಿಂಹಸ್ವಾಮಿ, ತೇಜಸ್ವಿ, ಲಂಕೇಶ್ ಅವರಂತಹ ಅನರ್ಘ್ಯ ಬರಹಗಾರರಿಗೆ ಭಾರತದ ಸರ್ವೋಚ್ಚ ಸಾಹಿತ್ಯ ಪ್ರಶಸ್ತಿ ಸಿಗಲಿಲ್ಲವಲ್ಲ ಎಂಬ ಕೊರಗು ನಮಗೆ ಇದ್ದೇ ಇದೆ. ಕಂಬಾರರಿಗೆ ಹೀಗಾಗಲಿಲ್ಲವಲ್ಲ ಎಂಬುದು ನಮಗೆ ಸಂತಸದ, ಸಂಭ್ರಮದ ವಿಷಯ. ಜ್ಞಾನಪೀಠ ಸಮಿತಿಯವರು ಕಂಬಾರರಂತಹ ಪ್ರತಿಭಾವಂತರಿಗೆ ಈ ಬಾರಿ ಪ್ರಶಸ್ತಿ ಪ್ರದಾನ ಮಾಡಿ ತಮ್ಮ ಘನತೆಯನ್ನು ಹೆಚ್ಚಿಸಿಕೊಂಡಿದ್ದಾರೆ. ಯಾಕೆಂದರೆ ಲೇಖಕ ಪ್ರಶಸ್ತಿಗಿಂತ ದೊಡ್ಡವನು ಎಂಬುದು ಕಂಬಾರರ ವಿಷಯದಲ್ಲಿ ಸತ್ಯಸ್ಯಸತ್ಯ.

ಜ್ಞಾನಪೀಠ ಪ್ರಶಸ್ತಿ ಸಮಿತಿಯವರು ಇನ್ನೊಂದು ಪ್ರಮುಖ ಕಾರಣದಿಂದಲೂ ಅಭಿನಂದನಾರ್ಹರು. ಇಂದು ಅಂತರರಾಷ್ಟ್ರೀಯ ಮತ್ತು ರಾಷ್ಟ್ರೀಯ ಮಟ್ಟದಲ್ಲಿ ಭಾರತದ ಇಂಗ್ಲಿಷ್ ಬರಹಗಾರರಿಗೆ ಇಂಗ್ಲಿಷೇತರ ಬರಹಗಾರರಿಗಿಂತ ಬಹಳ ಹೆಚ್ಚಿನ ಪ್ರಚಾರ ದೊರಕುತ್ತಿದೆ. ಇಂಗ್ಲಿಷ್ ಬರಹಗಾರರಲ್ಲೂ ಪ್ರತಿಭಾವಂತರಿರುವುದು

ನಿಜ. ಆದರೆ, ಭಾರತೀಯ ಭಾಷಾ ಲೇಖಕರಿಗೆ ಹೋಲಿಸಿದಾಗ ಇಂಗ್ಲಿಷ್ ಬರಹಗಾರರ ಸಿದ್ಧಿಗಿಂತಲೂ ಪ್ರಸಿದ್ಧಿಯೇ ಹೆಚ್ಚು. ಉದಾಹರಣೆಗೆ ಗುಣ ಮತ್ತು ಗಾತ್ರದಲ್ಲಿ, ಅಭಿವ್ಯಕ್ತಿಯ ತೀವ್ರತೆ ಮತ್ತು ವೈವಿಧ್ಯಮಯತೆಯಲ್ಲಿ ಕಂಬಾರರಿಗೆ ಹೋಲಿಸಬಹುದಾದ ಭಾರತೀಯ ಇಂಗ್ಲಿಷ್ ಬರಹಗಾರ ಯಾರು? ಗೊತ್ತಿಲ್ಲ. ಈ ಸಂದರ್ಭದಲ್ಲಿ ಜ್ಞಾನಪೀಠದವರು ತಮ್ಮ ಪ್ರಶಸ್ತಿಗಳನ್ನು ಭಾರತೀಯ ಭಾಷಾ ಲೇಖಕರಿಗಾಗಿ ಮೀಸಲಿಟ್ಟಿರುವುದು ಶ್ಲಾಘನೀಯ.

ಕಂಬಾರರಿಗೆ ಮೊದಲೇ ಕನ್ನಡ ಸಾಹಿತ್ಯದಲ್ಲಿ ಕುವೆಂಪು, ಬೇಂದ್ರೆ, ಮಾಸ್ತಿ, ಪು.ತಿ.ನ., ಕಾರಂತ, ಮತ್ತಿತರ ಮಹಾನ್ ಪ್ರತಿಭೆಗಳಿದ್ದವು. ಅವರೆಲ್ಲರೂ ನವೋದಯದ ಆದರ್ಶಗಳ ಹಿನ್ನೆಲೆಯಲ್ಲಿ ತಮ್ಮ ವಿಶಿಷ್ಟ ಮಾರ್ಗಗಳನ್ನು ನಿರ್ಮಿಸಿಕೊಂಡಿದ್ದರು. ಕುವೆಂಪು ಅವರ ಭೂಮಪ್ರತಿಭೆ, ಬೇಂದ್ರೆಯವರ ಭಾಷಿಕ ಚಮತ್ಕಾರ, ಮಾಸ್ತಿಯವರ ಕಥನಕೌಶಲ, ಪುತಿನರವರ ತನ್ಮಯೀಭಾವ, ಕಾರಂತರ ಸಾಮಾಜಿಕ ದರ್ಶನಗಳು ಆ ಸಂದರ್ಭದಲ್ಲಿ ಹೊಯ್‌ಕಯ್ಯಾಗಿದ್ದವು. ಈ ಎಲ್ಲ ಅಂಶಗಳೂ ಮೈವೆತ್ತಂತಿದ್ದ ಅಡಿಗರು, ಅನಂತರ ಕೆ.ಎಸ್.ನ ಅವರು ಸ್ವಾತಂತ್ರ್ಯೋತ್ತರ ತಥ್ಯಗಳ ಹಿನ್ನೆಲೆಯಲ್ಲಿ ತಮ್ಮ ಅಭಿವ್ಯಕ್ತಿ ಕ್ರಮದಲ್ಲಿ ತಳಮಟ್ಟ ಮಾರ್ಪಾಡುಗಳನ್ನು ತಂದರು. ಕನ್ನಡದ ನವ್ಯತೆಯ ಮಾರ್ಗ ನಿರ್ಮಾಣವಾಯಿತು. ಅಡಿಗರ ಕಿರಿಯ ಸಮಕಾಲೀನರಾಗಿ ಬರೆಯಲಾರಂಭಿಸಿದ ಕಂಬಾರರು ಇವೆರಡು ಮಾರ್ಗಗಳಿಗಿಂತ ಭಿನ್ನವಾದ ತಮ್ಮ ಅಭಿವ್ಯಕ್ತಿ ಕ್ರಮವನ್ನು ರೂಪಿಸಿಕೊಂಡರು. ಅಂದರೆ ನವ್ಯದ ಉಚ್ಛ್ರಾಯ ಘಟ್ಟದಲ್ಲೇ ನವ್ಯೋತ್ತರವೆನ್ನಬಹುದಾದ ಮಾರ್ಗದ ಮೊದಲಿಗರಾದರು. 'ಇತ್ತುಗಳ ಧ್ವಜವ ಹಿಡಿದೆತ್ತಿ ನಿಲ್ಲಿಸುವ' ನವೋದಯದ ಆದರ್ಶ ಪ್ರಿಯತೆಯನ್ನು ಅಸಂದಿಗ್ಧ ದೃಷ್ಟಿಯನ್ನು ಅಡಿಗರ ನವ್ಯಕಾವ್ಯ ಅಗ್ನಿಪರೀಕ್ಷೆಗೆ ಒಡ್ಡಿತಾದರೂ ಮುಂದೆ ಅದೇ ಅಡಿಗರು ಪರಂಪರೆಯ ಮಹಾಪ್ರವಾಹಕ್ಕೆ ವಾಪಸಾದರು. ಅಡಿಗರಿಂದ ಪ್ರಭಾವಿತರಾದ ನವ್ಯರು – ಉದಾಹರಣೆಗೆ ಲಂಕೇಶ್, ತೇಜಸ್ವಿ, ರಾಮಾನುಜನ್ ಮುಂತಾದವರು–ಪರಂಪರೆಗೆ ಶರಣಾಗದೆ ಸದ್ಯದ ವ್ಯಂಗ್ಯಗಳನ್ನು ಶಕ್ತವಾಗಿ ಬಿಂಬಿಸುತ್ತ ತಮ್ಮ ತಮ್ಮ ವಿಶಿಷ್ಟ ವ್ಯಕ್ತಿಭಾಷೆಗಳನ್ನು ಕಟ್ಟಿಕೊಂಡರು.

ಕಂಬಾರರ ಸೃಷ್ಟಿಗೆ ಮೊದಲಾದ ಸಂದರ್ಭ ಈ ಎಲ್ಲರ ಸಂದರ್ಭಗಳಿಗಿಂತ ಭಿನ್ನವಾದ್ದರಿಂದ ಅವರು ತುಳಿದ ದಾರಿಯೂ ಭಿನ್ನವಾಯಿತು. ಅವರ ಮೊದಲ ಘಟ್ಟದ ಮುಖ್ಯ ಕೃತಿಯಾದ 'ಹೇಳತೇನ ಕೇಳ' ಎಂಬ ಹೆಸರೇ ಅವರ ಭಿನ್ನತೆಯನ್ನು ಸೂಚಿಸುತ್ತದೆ. ಇಪ್ಪತ್ತನೆ ಶತಮಾನದ ಹಿರಿಯ ಕವಿಗಳೆಲ್ಲರಿಗೂ – ಬೇಂದ್ರೆಯವರನ್ನು ಹೊರತು ಪಡಿಸಿ – ಪರಂಪರೆಯ ಕಲ್ಪನೆ ಲಿಖಿತಮೂಲ. ಆದರೆ, ಕಂಬಾರರ ಪರಂಪರೆ ಮೌಖಿಕ. ಇಲ್ಲಿ ಕವಿತೆ ಒಂದು ಚಿಂತನೆಯ, ಭಾವನೆಯ ಅಭಿವ್ಯಕ್ತಿಯಲ್ಲ. ಅದೊಂದು ನೇರ ಸಂವಹನ. ಒಂದು 'ಆಟ'. ಈ ಅರ್ಥದಲ್ಲಿ ಆಟದ ಭಾಷೆ ಕಂಬಾರರ ಕಾವ್ಯ ನಾಟಕಗಳೆರಡರ ವೈಶಿಷ್ಟ್ಯಕ್ಕೆ ಕಾರಣವಾಗಿದೆ. ಅವರು ಹಾಡು–ಕವಿತೆ ಬರೆಯಲಿ, ನಾಟಕ ಬರೆಯಲಿ, ಸಿನಿಮಾ ಮಾಡಲಿ ಅವೆಲ್ಲವುಗಳಿಗೂ ಸಾಮಾನ್ಯ ಅಂಶವೆಂದರೆ ಶ್ರವ್ಯ ಮತ್ತು ದೃಶ್ಯ ಕಾವ್ಯ ಪದ್ಧತಿಗಳ ಐಕ್ಯ. ಅಕ್ಷರ ಪ್ರಾಧಾನ್ಯ ವಿಜೃಂಭಿಸುತ್ತಿದ್ದ ಕಾಲದಲ್ಲಿ ಕಂಬಾರರು ವಾಕ್ ಪ್ರಧಾನ ಕಾವ್ಯರಚನೆಯ ಮೂಲಕ ತಮ್ಮತನದ ಛಾಪನ್ನು ಮೂಡಿಸಿದರು. ನವ್ಯಕಾವ್ಯವೂ ಆಡುಮಾತಿನ ಹತ್ತಿರ ಸುಳಿದಾಡತೊಡಗಿದ್ದು ನಿಜ. ಆದರೆ, ಕಂಬಾರರ ವಾಕ್ಕಿನ ಮಾದರಿ ನಾಗರಿಕ ಸಂಭಾಷಣೆಯ ಮಾದರಿಯದ್ದಲ್ಲ. ಅವರದ್ದು ಕೇವಲ ಆಡುಮಾತಲ್ಲ. ಅದು ಹಾಡು–ಮಾತು, ಕುಣಿತ–

ಮಾತು, ಕನಸು–ಮಾತು, ಸಿಡಿತ–ಮಾತು, ಕರಗು–ಮಾತು, ಮಾನವಾತೀತ ಶಕ್ತಿಗಳ ಜತೆಗಿನ ಮಾತಿನಾಚೆಗಿನ, ಮಾತಿನೊಳಗಿನ ಮಾತು–ವಚನಕಾರರ, ಸ್ವರವಚನಕಾರರ, ಜನಪದ–ಬುಡಕಟ್ಟು ಪರಂಪರೆಗಳ ಮಾತು. ನವೋದಯದವರಿಗೆ ಪರಂಪರೆಯೆಂದರೆ ಇತಿಹಾಸದ ಗತಕಾಲದ ಕಾವ್ಯ–ಶಾಸನಗಳ ಸಿಂಹಾಸನಗಳ ಮಾಲೆ. ಕಂಬಾರರದು ಸಾಕ್ಷರ ಭಾಷೆಯಲ್ಲ, ಸಾಕ್ಷಾತ್ಕಾರದ ಭಾಷೆ. ಬೇಂದ್ರೆಯವರಲ್ಲೂ ಈ ಅಂಶವಿದೆಯಾದರೂ ಅವರ ಲೋಕದೃಷ್ಟಿ ಲಿಖಿತ ಪರಂಪರೆಯ ಜತೆ ಸಮನ್ವಯಕ್ಕೆ ಹಾತೊರೆಯುತ್ತಿದೆ. ಅವರಲ್ಲಿರುವ ಶಿಶುನಾಳ ಷರೀಫರ ವಾಣಿ ಅತ್ತ ಅರವಿಂದರ ಕಡೆಗೂ ತುಡಿಯುತ್ತದೆ.

ಲಿಖಿತಪೂರ್ವ ಭಾಷಿಕ ಪರಂಪರೆ ಕಂಬಾರರಿಗೆ ಕೇವಲ ಶೈಲಿಯ ಆಯ್ಕೆಯಲ್ಲ. ಬದಲಿಗೆ ಅನುಭವದ ಅಧಿಕೃತತೆಯ ಜರೂರಿ. ಗತದ ಜತೆಗೆ, ಓರೇಕರ ಜತೆಗೆ, ಮಾನವಾತೀತ ನಿಗೂಢಗಳ ಜತೆಗೆ, ವ್ಯವಸ್ಥೆಯ ಮಡಿಪಂಚೆಯನ್ನು ಮತ್ತೆ ಮತ್ತೆ ಸೀಳಿ ಹೊರಬರುವ ಆದಿಮ ಲೈಂಗಿಕತೆ ಜತೆಗೆ, ಜಾಗರದಾಚೆಗಿನ ಮನೋಲೋಕಗಳ, ಗಾದೆ–ಒಗಟುಗಳ ಜತೆಗೆ ಅವಿನಾ ಸಂಬಂಧವಿಟ್ಟುಕೊಂಡ ಅವರ ಲೋಕದೃಷ್ಟಿ ಹಲವು ಬಾರಿ ಲೋರ್ಕಾನ ಆಂದುಲೇಷಿಯಾದ ಪ್ರದೇಶ ವಿಶಿಷ್ಟತೆಯನ್ನು ಹೋಲುತ್ತದಾದರೂ ಅದರ ಅನುಕರಣೆಯಲ್ಲ. ಇಲ್ಲಿ ಲೋರ್ಕಾನ ಹಿಂಸ್ರ ಜಗತ್ತಿನಲ್ಲಿಲ್ಲದ ಒಂದು ಅಂಶವಿದೆ: ಅದು ಅಲ್ಲಮಾದಿಗಳ ಬೆಡಗಿನ, ಬೆರಗಿನ ವಿಸ್ಮಯಲೋಕ. 'ಮಹಾಮಾಯಿ'ಯಲ್ಲಿ ಕಂಬಾರರು ಅದನ್ನು 'ಶಿವಲಿಂಗತತ್ವ'ವೆನ್ನುತ್ತಾರೆ. ಹೀಗೆ ಆಧುನಿಕಪೂರ್ವ, ಅಕ್ಷರಪೂರ್ವ, ಸಾವಯವ ಪ್ರಪಂಚವನ್ನು ಏಕಮುಖೀ ಪ್ರಗತಿಪರ ನಾಗರಿಕತೆ ಹೇಗೆ ಭಗ್ನಗೊಳಿಸುತ್ತದೆಂಬುದು ಕಂಬಾರರ ಮುಖ್ಯ ಕಾಳಜಿ. ಈ ಕಣ್ ನೋಟದಿಂದ ಹೊಸತನ್ನು ಪರಿಕಿಸುವ ಕಂಬಾರರ ಸಾಹಿತ್ಯ ದರ್ಶನಕ್ಕೆ ಕನ್ನಡದಲ್ಲಿ ಪೂರ್ವ ಮಾದರಿಗಳಿರಲಿಲ್ಲ. ಈ ಅರ್ಥದಲ್ಲಿ ಕಂಬಾರರು ನವ್ಯರೆನ್ನಬಹುದಾದರೂ ಅವರ ನವ್ಯತೆ ಚುರುಕು ಮಾತಿನ ನಾಗರಿಕ ನವ್ಯತೆಯಲ್ಲ. ಅದು ಲೋರ್ಕಾನ ರೀತಿಯ, ಯೇಟ್ಸ್‌ನ ರೀತಿಯ ಪ್ರಾದೇಶಿಕ ನವ್ಯತೆ. ಆಧುನಿಕ ನಾಗರಿಕತೆಯ ತಿರುಳಾಗಿರುವ ಎಲ್ಲ ರೀತಿಯ ಪ್ರಗತಿವಾದಿಗಳ, ವೈಜ್ಞಾನಿಕ ಭೌತವಾದಿಗಳ ಟೀಕೆ. 'ಹೇಳತೇನ ಕೇಳ', 'ಋಷ್ಯಶೃಂಗ'ಗಳಿಂದ ಹಿಡಿದು ಅವರ ಎಲ್ಲ ಕಾವ್ಯ, ನಾಟಕ, ಕತೆ, ಕಾದಂಬರಿ, ಸಿನಿಮಾಗಳ ಮೂಲ ಸೆಲೆ ಇದೇ. ಉದಾಹರಣೆಗೆ ಮಾವೋನ ಬಗೆಗಿನ ಅವರ ಪ್ರಸಿದ್ಧ ಕವಿತೆಯಲ್ಲಿ ಅವರು ಸಮಾಜವಾದವನ್ನು ಮೆಚ್ಚುತ್ತಲೇ ಅದನ್ನು ಟೀಕೆಗೊಳಪಡಿಸುವುದು ಬಂಡವಾಳಶಾಹಿ ಅಥವಾ ಇನ್ನಾವುದೇ ಆಧುನಿಕ ಸಿದ್ಧಾಂತಗಳ ನೆಲೆಗಟ್ಟಿನಿಂದಲ್ಲ. ತಮ್ಮ ಪ್ರದೇಶದಲ್ಲಿ ಶತಮಾನಗಳಿಂದ ಪರಿಪುಷ್ಟವಾದ ಮೂಲನಿವಾಸಿಗಳ ಮಾಗಿದ ಲೋಕದ ದೃಷ್ಟಿಯಿಂದ ಮಾವೋನ 'ಕಣ್ಣಾಕಾಮಾಲೆ'ಯನ್ನು ಅವರು ಗುರುತಿಸಿದ್ದಾರೆ. ಆ ಲೋಕದ ಧ್ವನಿ–ಪ್ರತಿಧ್ವನಿಗಳು ಅವರ ವೈವಿಧ್ಯಮಯ, ರಸಭರಿತ, ಕೃತಿಗಳ ಆಕೃತಿಗಳನ್ನು ನಿರ್ಮಿಸಿವೆ.

ಇನ್ನೊಂದು ವಿಷಯವನ್ನು ಮರೆಯುವಂತಿಲ್ಲ. ಕಂಬಾರರು ಕುವೆಂಪು ಅವರ ನಂತರದ ದೊಡ್ಡ ಶೂದ್ರ ಪ್ರತಿಭೆ. 'ಮಲೆಗಳಲ್ಲಿ ಮದುಮಗಳು' ಕಾದಂಬರಿಯ ಕುವೆಂಪು ಕಂಬಾರರಿಗೆ ತುಂಬಾ ಹತ್ತಿರ. ಆದರೆ, ಕುವೆಂಪು ಅವರು ಶೂದ್ರಲೋಕದ ದೃಷ್ಟಿಯಿಂದ ಮೇಲುಪರಂಪರೆಯ ರಾಮಾಯಣಾದಿ ಕಥನಗಳನ್ನು ತಮ್ಮದಾಗಿಸಿಕೊಳ್ಳಲು ಯತ್ನಿಸಿದರು. ಕಂಬಾರರು ಆ ತಂಟೆಗೆ ಹೋಗಲೇ ಇಲ್ಲ. ಅವರು ಎಂದೂ ಭಾರತೀಯ ಸಂಸ್ಕೃತಿಯ

ಸಂಕೇತಗಳಾಗಿರುವ ರಾಮಾಯಣ, ಮಹಾಭಾರತ, ವೇದಾಂತಗಳಿಂದ ದೂರ ಉಳಿದು, ಸಮಾಜವಾದಿ ಅಥವಾ ಉದಾರವಾದಿ ನೆಲೆಗಳೊಂದಿಗೆ ಸಮಜಾಯಿಷಿ ಮಾಡಿಕೊಳ್ಳದೆ ಬುಡಕಟ್ಟು-ಜನಪದ ಪರಂಪರೆಗಳ, ಧರ್ಮದ ಗೋಜಿಗೆ ಸಿಲುಕದ ವಚನಕಾರರ ಸ್ವಚ್ಛಂದತೆಗಳನ್ನು ದ್ರವ್ಯವಾಗಿ ಬಳಸಿ ಶೂದ್ರಪ್ರತಿಭೆ ಮತ್ತು ಸಂವೇದನೆಗಳಿಗೆ ಕುವೆಂಪು ಅವರಿಗಿಂತ ಭಿನ್ನವಾದ ರೀತಿಯಲ್ಲಿ ಹೊಸ ಶಕ್ತಿ ಮತ್ತು ಸಾಧ್ಯತೆಗಳನ್ನು ತಂದುಕೊಟ್ಟರು. ಕಂಬಾರರ ಶೂದ್ರತ್ವ ಒಂದು ಜಾತಿಕಲ್ಪನೆ ಮಾತ್ರವಾಗುಳಿಯದೆ ಒಂದು ಅನುಭವದ, ಅಭಿವ್ಯಕ್ತಿಯ ಪರಿಕರವಾಯಿತು. ಆದ್ದರಿಂದಲೇ ಕನ್ನಡ ಸಾಹಿತ್ಯ-ಸಂಸ್ಕೃತಿಯಲ್ಲಿ ದಲಿತ-ಸ್ತ್ರೀ ಪ್ರಜ್ಞೆಗಳು ತಂದ ಪಲ್ಲಟಗಳ ಪೂರ್ವದಲ್ಲಿಯೇ ಕಂಬಾರರು ನವ್ಯ, ನವೋದಯಕ್ಕಿಂತ ಬೇರೆಯೇ ಆದ ಮಹತ್ವದ ಮಾರ್ಪಾಟನ್ನು ತಂದರು.

ಕನ್ನಡದ, ಭಾರತದ ವಿಶಿಷ್ಟ ಪ್ರತಿಭೆಯಾದ ಕಂಬಾರರಿಗೆ ಸಿಕ್ಕ ಈ ಹಿರಿಯ ಪ್ರಶಸ್ತಿ ಅವರ ಅದ್ಭುತ ಪ್ರತಿಭೆಗೆ ಸಿಕ್ಕಿದ್ದು ಎಂಬುದರಷ್ಟೇ ಮುಖ್ಯವಾದುದು ಅವರು ವಹಿಸಿಕೊಳ್ಳುವ ಲೋಕದೃಷ್ಟಿಗಳಿಗೆ, ಜನಸಮುದಾಯಗಳಿಗೆ, ಪರಂಪರೆಗಳಿಗೆ ಸಿಕ್ಕಿದ ಗೌರವವೆಂಬುದು. **ಕಂಬಾರರ ಕೃತಿ ಸಮುಚ್ಚಯ ಶಕ್ತ ಅನುವಾದಗಳ ಮೂಲಕ ಅಂತರರಾಷ್ಟ್ರೀಯ ಓದುಗರನ್ನು ತಲುಪಲು ಸಾಧ್ಯವಾದರೆ ಅವರು ಜ್ಞಾನಪೀಠಕ್ಕಿಂತ ದೊಡ್ಡ ಪ್ರಶಸ್ತಿಗಳಿಗೆ ಅರ್ಹರೆಂದು ನಮ್ಮವರಿಗೆ ಗೊತ್ತಾಗದಿದ್ದರೂ ಜಗತ್ತಿಗೆ ಗೊತ್ತಾಗುವುದರಲ್ಲಿ ಸಂದೇಹವಿಲ್ಲ.**

---

ಕಂಬಾರರು ನಾಟಕ ಬರೆಯಲು ಪ್ರಾರಂಭಿಸಿದಾಗ ಕನ್ನಡ ಹವ್ಯಾಸಿ ರಂಗಭೂಮಿ ಚಲನಶೀಲತೆಯನ್ನು ಕಳೆದುಕೊಂಡಿತ್ತು. ಅತಿಯಾದ ವೈಚಾರಿಕತೆ ಮತ್ತು ವಾಚಾಳಿತನದಿಂದಾಗಿ ಶ್ರೀರಂಗರ ನಾಟಕಗಳು ಕೆಲವೇ ವಿದ್ಯಾವಂತ ಪ್ರೇಕ್ಷಕರಿಗೆ ಸೀಮಿತವಾಗಿದ್ದವು. ಶಾಲೆ ಕಾಲೇಜುಗಳ ಸಮಾರಂಭಗಳಲ್ಲಿ ಪ್ರದರ್ಶನಗೊಳ್ಳುತ್ತಿದ್ದ ಹಾಸ್ಯ ನಾಟಕಗಳು ಗಟ್ಟಿಯಾದ ಪರಂಪರೆಯನ್ನು ಸ್ಥಾಪಿಸಲು ಸಾಧ್ಯವಾಗಲಿಲ್ಲ. ಆಗ ಬುದ್ಧಿಜೀವಿ ಪ್ರೇಕ್ಷಕರನ್ನು, ಬರಹಗಾರರನ್ನು ಆಕರ್ಷಿಸಿದ್ದು ಯುರೋಪಿನಿಂದ ಬಂದ ಅಸಂಗತ ನಾಟಕಗಳು. ಕಂಬಾರರ ನಾರ್ಸಿಸಸ್, ಚಾಳೇಶ ಇವು ಅಸಂಗತ ಶೈಲಿಯ ನಾಟಕಗಳು. ಇವುಗಳ ಅನುಭವ ಕನ್ನಡ ಓದುಗರಿಗೆ, ನೋಡುಗರಿಗೆ ತೀರಾ ಹೊಸದಾಗಿ, ಅಚ್ಚರಿಯಾಗಿ ಕಂಡಿತು.




**–ಬಸವರಾಜ ಮಲಶೆಟ್ಟಿ**

[ನವಕರ್ನಾಟಕ ಪ್ರಕಾಶನದ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪುರಸ್ಕೃತ ಕನ್ನಡ ಲೇಖಕರು ಮಾಲಿಕೆಯ ಚಂದ್ರಶೇಖರ ಕಂಬಾರ ಕೃತಿಯಿಂದ.]



ಕನ್ನಡಕ್ಕೆ ಎಂಟನೇ ಜ್ಞಾನಪೀಠ

# ದೇಸಿ ಸತ್ವಕ್ಕೆ ದೊರೆತ ದೇಶಮಟ್ಟದ ಗೌರವ

–ಡಾ. ಜಯಶ್ರೀ ಸಿ. ಕಂಬಾರ

ನಾನು, ನನ್ನ ತಮ್ಮ ರಾಜಶೇಖರ, ತಂಗಿಯರು ಗೀತಾ ಮತ್ತು ಚೆನ್ನಮ್ಮ, ಅಪ್ಪನನ್ನು ಪ್ರೀತಿಯಿಂದ 'ದಾದಾ' ಎಂದೇ ಕರೆಯುತ್ತೇವೆ. ಅದು ಎಷ್ಟು ಜನಪ್ರಿಯವಾಯಿತೆಂದರೆ, ನಮ್ಮ ಗೆಳೆಯರು ಕೂಡಾ ಅವರನ್ನು ಹಾಗೆ ಕರೆಯಲಾರಂಭಿಸಿದ್ದಾರೆ! ಅವರ ಬಗ್ಗೆ ನಮಗೆ ಭಯ-ಗೌರವ ಇರುವುದಾದರೂ ಎಲ್ಲವನ್ನೂ ಹೇಳಿಕೊಳ್ಳಬಹುದಾದ ಮುಕ್ತತೆಯೂ ಇದೆ. ನಮ್ಮನ್ನು ಅರ್ಥ ಮಾಡಿಕೊಂಡು ಅವರು ಮುನ್ನಡೆಸುತ್ತಿದ್ದಾರೆ. ನಮ್ಮೆಲ್ಲ ಭಾವನೆಗಳಿಗೂ ಹೆಂಗರುಳಿನಿಂದ ಸ್ಪಂದಿಸುವ ವಿಶಾಲ ಮನಸ್ಸು ಅವರಲ್ಲಿದೆ. ಅದು, ಅವರಿಗೆ ಸಾಹಿತ್ಯ ಲೋಕದಲ್ಲಿಯೂ ಇಷ್ಟು ಎತ್ತರಕ್ಕೆ ಕೊಂಡೊಯ್ದಿದೆ.

ಅವರ ಹಳ್ಳಿ ಬದುಕಿನ ಶ್ರೀಮಂತ ಅನುಭವವನ್ನು ಕಂಡಾಗ, ನಮಗದು ಸಿಗಲಿಲ್ಲವಲ್ಲ ಎಂಬ ಭಾವನೆ ಬರುತ್ತದೆ. ಆದರೂ ಅದರ ಕಂಪನ್ನು ನಮ್ಮಲ್ಲಿ ತಕ್ಕಮಟ್ಟಿಗೆ ನೆಟ್ಟಿದ್ದಾರೆ. ಗೋಕಾಕ ತಾಲೂಕಿನ ಘೋಡಗೇರಿ ಎಂಬುದು ಘಟಪ್ರಭಾ ನದಿಯ ನೀರುಂಡು ಬೆಳೆದ ಹಳ್ಳಿ. ಹಳೆಗನ್ನಡದ ಕವಿ ರನ್ನನ ಊರಿಗೆ ಅಲ್ಲಿಂದ ಹೆಚ್ಚು ದೂರವಿಲ್ಲ. ನನ್ನ ಅಮ್ಮನ ಊರು ಕೂಡ ಅಲ್ಲಿಯೇ ಹತ್ತಿರವಿದೆ. ದಾದಾ ಮತ್ತು ಅಮ್ಮ ಮದುವೆಯಾಗುವ ಮೊದಲೇ ಸಂಬಂಧಿಕರು. ನನ್ನ ಅಜ್ಜನನ್ನು ನೋಡಿದ್ದು ನನಗೀಗಲೂ ಹಸಿರು ನೆನಪು. ಅವರು ದೀರ್ಘಕಾಯದ, ಸ್ಫುರದ್ರೂಪಿ ವ್ಯಕ್ತಿ. ಘೋಡಗೇರಿ ಎಂದ ಕೂಡಲೆ ಕಣ್ಣಿಗೆ ಕಟ್ಟುವ ಚಿತ್ರವೆಂದರೆ, ಕಾಯಿಲೆಯಿಂದ ಮಲಗಿದ ನನ್ನ ಅಜ್ಜಿಯದ್ದು. ಅವರನ್ನು ನನ್ನ ಅಮ್ಮ ಅತ್ತಿಂದಿತ್ತ ಎತ್ತಿ, ಆಧರಿಸಿ ಕರೆದೊಯ್ಯುತ್ತಿದ್ದರು. ದಾದಾನ ಸಾಹಿತ್ಯವನ್ನು ಓದಿದಾಗ, ಅಷ್ಟೊಂದು ವಿಪುಲ ಅನುಭವಗಳನ್ನು ಊಡಿದ ಅವರ ಹೆತ್ತವರ ನೆನಪು ಬಂದೇ ಬರುತ್ತದೆ.

ನಾನು ಹುಟ್ಟಿದ್ದು ದಾದಾ ಸಾಗರದಲ್ಲಿರುವಾಗ. ಮುಂದೆ ಅವರು ಸಾಗರದಿಂದ ಉಡುಪಿಗೆ, ಉಡುಪಿಯಿಂದ ಚಿಕಾಗೋಗೆ, ಅಲ್ಲಿಂದ ಮರಳಿ ಧಾರವಾಡಕ್ಕೆ, ಧಾರವಾಡದಿಂದ ಬೆಂಗಳೂರಿಗೆ, ಬಳಿಕ ಜ್ಞಾನಭಾರತಿಗೆ, ಅನಂತರ ಹಂಪಿ ವಿ.ವಿ.ಗೆ, ಮಧ್ಯೆ ಹತ್ತು ಹಲವು ಸಾಂಸ್ಕೃತಿಕ, ಸಾಹಿತ್ಯಕ ಜವಾಬ್ದಾರಿಗಳನ್ನು ವಹಿಸಿಕೊಂಡು ದೇಶದ ಹಾಗೂ ಜಗತ್ತಿನ ಹಲವು ಭಾಗಗಳಿಗೆ ಓಡಾಡಿರುವರು. ನಾವೂ ಹೆಚ್ಚಿನ ಕಡೆಗಳಲ್ಲಿ ಅವರ ಜೊತೆಗೆಯೇ ಇದ್ದೆವು. ಮೊದಲ ಬಾರಿಗೆ ಅಮೆರಿಕಕ್ಕೆ ಪ್ರಾಧ್ಯಾಪಕನಾಗಿ ಹೋದಾಗ ನಾನಿನ್ನೂ ಸಣ್ಣವಳು. ಆಗ ನಾವು ಹಳ್ಳಿಯಲ್ಲಿಯೇ ಇದ್ದೆವು. ಮುಂದೆ ಬೆಂಗಳೂರಿಗೆ ಹೋದ ಬಳಿಕ ನಾವು ಆಗಾಗ ಹಳ್ಳಿಗೆ ಬರುವುದಿತ್ತು. ಸಾವಳಗಿ ದೇವಸ್ಥಾನಕ್ಕೆ, ಅಪ್ಪನ ಮನೆಗೆ, ಅಮ್ಮನ ಮನೆಗೆ ಹೋಗುವಷ್ಟರಲ್ಲಿ ದಿನಗಳು ಮುಗಿದೇ ಹೋಗುತ್ತಿದ್ದವು. ಹಳ್ಳಿಯ ಸುಂದರ ಕ್ಷಣಗಳನ್ನು ಮನಸೋ ಇಚ್ಛೆ ಕಳೆಯೋಣ ಎಂಬಷ್ಟರಲ್ಲಿ ಶಾಲೆ ಕಾಲೇಜುಗಳು ಶುರುವಾಗಿ, ಬೆಂಗಳೂರಿಗೆ ಮರಳಬೇಕಾಗಿತ್ತು. ನಮ್ಮ ಅಪ್ಪನ ಸಂವೇದನೆಗಳನ್ನು, ಬರಹಗಳನ್ನು ಕಟ್ಟಿದ ಹಳ್ಳಿಯ ಬದುಕಿನ ಬಗ್ಗೆ ನಮಗೆ ಈಗಲೂ ಸೆಳೆತವಿದೆ.

ಮೊನ್ನೆ ಘೋಡಗೇರಿಯಿಂದ ನಮ್ಮ ಬಂಧುಗಳು ಬಂದಿದ್ದರು. ಅವರನ್ನು ನೋಡಿದಾಗ ನಾವಿರುವ ಬೆಂಗಳೂರು ಮರೆತೇ ಹೋಗಿ ಹಳ್ಳಿಗೆ ಮರಳಿದಷ್ಟೇ ಆನಂದವೆನಿಸುತ್ತಿತ್ತು. ನಮ್ಮ ಮನೆಯಲ್ಲಿಯೂ ಅಷ್ಟೆ, ರಾಜಧಾನಿಯ ನಡುವೆ ಇದ್ದರೂ ದಿನಚರಿ, ಆಚರಣೆ, ನಂಬಿಕೆ ಎಲ್ಲವೂ ಹಳ್ಳಿಯ ಹಾಗೆ. ಅದು ದಾದಾ, ಅಮ್ಮ ನಮಗೆಲ್ಲ ಕೊಟ್ಟ ಸಂಸ್ಕಾರ. ನಮ್ಮ ಮನೆಗೆ ಹಿರಿಯ ಸಾಹಿತಿಗಳೆಲ್ಲ ಬಂದು ಹೋಗುತ್ತಿದ್ದರು. ಎ.ಕೆ. ರಾಮಾನುಜನ್ ಅವರು, ಗೋಪಾಲಕೃಷ್ಣ ಅಡಿಗರು, ಯು.ಆರ್. ಅನಂತಮೂರ್ತಿಯವರು, ಬೆಳಗಾವಿಯ ಜಿ.ಸಿ. ದೇಸಾಯಿಯವರು, ಕೀರ್ತಿನಾಥ ಕುರ್ತಕೋಟಿಯವರು, ಕಿ.ರಂ. ನಾಗರಾಜ, ಡಿ.ಆರ್. ನಾಗರಾಜ ಇನ್ನೂ ಅನೇಕ ಸ್ಥಳೀಯ ಹಾಗೂ ವಿದೇಶೀ ಬರಹಗಾರರೊಂದಿಗೆ ಅವರು ಮಧ್ಯರಾತ್ರಿಯವರೆಗೂ ಮಾತಾಡುತ್ತ ಕುಳಿತಿರುವುದನ್ನು ನಾನು ಕಂಡಿದ್ದೇನೆ. ಈಗಲೂ ಕಾಣುತ್ತಿದ್ದೇನೆ. ಆಗ ಆ ಲಿಟರರಿ ಸೆಲೆಬ್ರಿಟಿಗಳನ್ನು ಕಂಡರೆ ಭಯ, ಅಳುಕು. ದೂರ ನಿಂತು ಅಥವಾ ಒಳಗಿನ ಕೊಠಡಿಯಿಂದ ಇಣುಕಿ ಅವರ ಮಾತುಗಳನ್ನು ಕೇಳಿಸಿಕೊಳ್ಳುತ್ತಿದ್ದೆವು.

ದಾದಾನ ಎಲ್ಲ ಕೃತಿಗಳು ನನಗೆ ಇಷ್ಟ. ಅವರ ಕೃತಿಗಳ ಮೊದಲ ಓದುಗರು ನನ್ನ ಅಮ್ಮ, ಮತ್ತೆ ನಾವು. ಒಳ್ಳೆಯ ಕೃತಿಗಳನ್ನು ಕಂಡರೆ ದಾದಾ ಅದನ್ನು ನಮಗೆ ತಂದುಕೊಡುತ್ತಾರೆ. 'ಎಲ್ಲಿದೆ ಶಿವಾಪುರ?' ಕವನ ಸಂಕಲನದ 'ನನ್ನ ಇಂದಿನ ಪ್ರೀತಿ' ಕವನ ನನಗೆ ತುಂಬಾನೇ ಇಷ್ಟ. ಭಾಷೆಯನ್ನು, ವ್ಯಾಕರಣವನ್ನು ಮೀರುತ್ತ ಅಂತಃಕರಣದ ಮೂಲಕ ಪ್ರೀತಿಯನ್ನು, ಭಕ್ತಿಯನ್ನು ಕಟ್ಟಿದ ದಾದಾನ ಕಾವ್ಯಕರ್ತೃತ್ವಕ್ಕೆ ನಾನು ಮನಸೋತಿದ್ದೇನೆ. ಅವರ 'ಶಿಖರ ಸೂರ್ಯ' ಕಾದಂಬರಿಯ ಬಗ್ಗೆಯೂ ನನಗೆ ವಿಶೇಷ ಒಲವು. ಅದನ್ನು ಬರೆಯುವುದಕ್ಕೆ ಅವರು ತುಂಬಾ ಸಮಯ ತೆಗೆದುಕೊಂಡಿದ್ದಾರೆ. ಆಗ ಯಾವಾಗಲೂ ಮೂಡಿಯಾಗಿ, ಕಾದಂಬರಿಯದ್ದೇ ಧ್ಯಾನದಲ್ಲಿರುತ್ತಿದ್ದ ಅವರನ್ನು ಕಂಡಾಗ, 'ಯಾಕಪ್ಪ ಇವರು ಈ ಕಾದಂಬರಿ ಬರೆಯೋದಕ್ಕೆ ಇಷ್ಟೊಂದು ಶ್ರಮ ತೆಗೆದುಕೊಳ್ಳುತ್ತಿದ್ದಾರೆ' ಅಂತೆನಿಸುತ್ತಿತ್ತು. ಆದರೆ, ಅವರ ನಿರೂಪಣೆಯ ಸಾಮರ್ಥ್ಯದ ಬಗ್ಗೆ ನನಗೆ ಅರಿವಾದದ್ದು ಆ ಕಾದಂಬರಿಯನ್ನು ಓದಿದಾಗ. ಇತಿಹಾಸ, ಪುರಾಣ, ಅರ್ಥಶಾಸ್ತ್ರ ಇತ್ಯಾದಿ ಎಲ್ಲವನ್ನೂ ಶಿಖರ ಸೂರ್ಯದಲ್ಲಿ ಬೆಸೆದ ಅವರ ಪ್ರತಿಭೆಗೆ ನಾನು ಬೆರಗುಪಟ್ಟಿದ್ದೇನೆ.

೧೯೬೦-೬೨ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯದಿಂದ ಕನ್ನಡ ಸಾರಸ್ವತ ಲೋಕದ ಮೇಲೆ ಅತ್ಯಂತ ಪ್ರಭಾವ ಬೀರುವ ಮಟ್ಟದಲ್ಲಿ ಕೆಲಸ ಮಾಡಿರುವ ಕಂಬಾರ, ಚಂದ್ರಶೇಖರ ಪಾಟೀಲ, ಸಿದ್ಧಲಿಂಗ ಪಟ್ಟಣಶೆಟ್ಟಿ, ಗಿರಡ್ಡಿ ಗೋವಿಂದರಾಜ ನನ್ನ ಜೊತೆಗಿದ್ದರು. ನಾನು ಮತ್ತು ಕಂಬಾರರು ಕನ್ನಡ ವಿಭಾಗದ ಸಹಪಾಠಿಗಳು. ಚಂಪಾ, ಗಿರಡ್ಡಿ ಹಾಗೂ ಪಟ್ಟಣಶೆಟ್ಟಿ ನಮಗಿಂತ ಒಂದು ವರ್ಷ ಚಿಕ್ಕವರು. ಇಂಥ ಬ್ಯಾಚ್ ಕರ್ನಾಟಕ ವಿಶ್ವವಿದ್ಯಾಲಯ ಇತಿಹಾಸದಲ್ಲಿ ಯಾವ ವರ್ಷವೂ ಬರಲಿಲ್ಲ. ವಿವಿಧ ಕ್ಷೇತ್ರಗಳಲ್ಲಿ ಎಲ್ಲರೂ ಸಾಧನೆ ಮಾಡಿದವರೇ ಆಗಿದ್ದೇವೆ.

'ನಾನು ಸಂಶೋಧನಾ ಕ್ಷೇತ್ರದಲ್ಲಿದ್ದರೆ, ಕಂಬಾರರು ನಾಟಕ, ಪಟ್ಟಣಶೆಟ್ಟಿ ಕಾವ್ಯ, ಗಿರಡ್ಡಿ ವಿಮರ್ಶೆ ಹಾಗೂ ಚಂಪಾ ಚಳವಳಿ ಮೂಲಕ ಗುರುತಿಸಿಕೊಂಡವರು. ನಾನು ಹಾಗೂ ಕಂಬಾರರು ಒಂದೇ ಕ್ಲಾಸ್‌ನಲ್ಲಿದ್ದರೂ ನಾವಿಬ್ಬರೂ ಅಷ್ಟಕ್ಕಷ್ಟೇ ಎಂಬಂತೆ ಇದ್ದೆವು. 'ಮುಗುಳು' ಎಂಬ ಕವನ ಸಂಕಲನ ಪ್ರಕಟ ಮಾಡಿದ್ದ ಅವರು, ಪದ್ಯ ಬರೆಯುವುದು, ಹಾಡುವುದರಿಂದ ಕ್ಲಾಸ್‌ನಲ್ಲಿ ಪಾಪ್ಯುಲರ್ ಆಗಿದ್ದರು.

'ಸ್ನಾತಕೋತ್ತರ ಕೋರ್ಸ್‌ನ ಕೊನೆಯ ವರ್ಷದ ಬೀಳ್ಕೊಡುಗೆ ಸಮಾರಂಭದಲ್ಲಿ ಕಂಬಾರರು ತಾವೇ ರಚಿಸಿ ಹಾಡಿದ ಹಾಡು ನನ್ನ ಮೇಲೆ ಪ್ರಭಾವ ಬೀರಿತು. ಇದರಿಂದ ಕಂಬಾರರ ಜೊತೆಗಿನ ನಂಟು ಹೆಚ್ಚಾಯಿತು.

'ಕಂಬಾರರು ಬೆಳಗಾವಿಯ ಲಿಂಗರಾಜ ಕಾಲೇಜಿಗೆ ಉಪನ್ಯಾಸಕರಾಗಿ ಸೇರಿದರೆ, ನಾನು ಕರ್ನಾಟಕ ಕಾಲೇಜಿಗೆ ಸೇರಿದೆ. ನಂತರ ಕಂಬಾರರು ಉಡುಪಿ, ಸಾಗರದಲ್ಲಿ ಸೇವೆ ಸಲ್ಲಿಸಿ, ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಹೋದರು. ಬೆಂಗಳೂರಿಗೆ ಹೋದ ನಂತರ ಅವರಿಗೆ ಶುಕ್ರದೆಸೆ ಬಂತು.

ಕಂಬಾರರು ಉತ್ತರ ಕರ್ನಾಟಕದ ಸಂಸ್ಕೃತಿ, ಗ್ರಾಮೀಣ ಮೂಲ ಸಂಸ್ಕೃತಿ, ಭಾಷೆ ಬಳಸಿಕೊಂಡು ಭಿನ್ನವಾಗಿ ಬರೆದರು. ಹೀಗಾಗಿ ಅವರ ಬರವಣಿಗೆ ಭಿನ್ನವಾಗಿ ಕಂಡಿತು. ಕಂಬಾರರು ಇಲ್ಲಿಯೇ ಇದ್ದರೆ ಅಷ್ಟೊಂದು ಪ್ರಭಾವ ಬೀರುತ್ತಿರಲಿಲ್ಲ. ಮೂಲತಃ ಅವರೊಬ್ಬ ಕವಿ ಎಂದು ತಿಳಿದುಕೊಂಡಿದ್ದೆ. ನಂತರ ಗೊತ್ತಾಯಿತು, ಅವರು ಬಹುಮುಖಿ ವ್ಯಕ್ತಿತ್ವ ಹೊಂದಿದವರು ಎಂದು. ಬೆಂಗಳೂರಿನಲ್ಲಿ ಅವರಿಗೆ ದೊಡ್ಡ ವೇದಿಕೆ ಸಿಕ್ಕಿತು. ಪ್ರಚಾರಕ್ಕಾಗಿ ಸಹಾಯ ದೊರೆಯಿತು. ಇವೆಲ್ಲಕ್ಕಿಂತ ಮಿಗಿಲಾಗಿದ್ದುದು ಅವರಲ್ಲಿದ್ದ ದೊಡ್ಡ ಶಕ್ತಿ. ಹೀಗಾಗಿ ಅವರು ಸಂಪೂರ್ಣವಾಗಿ ಬೆಳೆಯಲು ಸಾಧ್ಯವಾಯಿತು.

ಗೋಪಾಲಕೃಷ್ಣ ಅಡಿಗ, ಕೀರ್ತಿನಾಥ ಕುರ್ತಕೋಟಿ ಅವರಂಥವರ ಸಂಪರ್ಕದಿಂದ ಕಂಬಾರರಿಗೆ ಹೆಚ್ಚಿನ ಅವಕಾಶ ಸಿಕ್ಕಿತು. ನೆಲಮೂಲ ಪ್ರತಿಭೆಯ ವ್ಯಕ್ತಿ ಕಂಬಾರರು ಬೆಳಗಾವಿ ಜಿಲ್ಲೆಯ ಸಣ್ಣಾಟ, ಲಾವಣಿಯ ಪ್ರಭಾವಕ್ಕೆ ಒಳಗಾದವರು. ನಾಟಕ ಬರೆಯಿರಿ ಅಂದರೆ ಸಣ್ಣಾಟ, ಕಾವ್ಯ ಬರೆಯಿರಿ ಅಂದರೆ ಲಾವಣಿ ಬರೆಯುತ್ತಾರೆ. ಓದು ಸಂಸ್ಕೃತಿಯಿಂದ ಭಿನ್ನವಾಗಿದ್ದನ್ನು, ನಾಟಕ ಹಾಗೂ ಕಾವ್ಯದ ಕೇಳುವ ಸಂಸ್ಕೃತಿಯನ್ನಿಟ್ಟುಕೊಂಡು ಬರೆಯುತ್ತಾರೆ. ಇದು ಕಂಬಾರರ ವೈಶಿಷ್ಟ್ಯ.

ಕಂಬಾರರ ಸಾಹಿತ್ಯದಲ್ಲಿ ದ್ವಂದ್ವದ ಮುಖಾಮುಖಿ ಇದೆ. ಅವರ ಸಾಹಿತ್ಯದ ಮುಖ್ಯ ಲಕ್ಷಣ ಇದು. ಕಾಮಕೇಂದ್ರಿತವಾದ ವಿಚಾರಗಳನ್ನು ಅವರ ಕವನಗಳಲ್ಲಿ, ನಾಟಕಗಳಲ್ಲಿ ಕಾಣಬಹುದು. ಇತ್ತೀಚೆಗೆ ಅವರು ಬರೆದಂಥ 'ಶಿವರಾತ್ರಿ' ನಾಟಕ ಅದ್ಭುತವಾಗಿ ಮೂಡಿಬಂದಿದೆ. ಗಿರೀಶ್ ಕಾರ್ನಾಡರ 'ತಲೆದಂಡ' ನಾಟಕಕ್ಕಿಂತ 'ಶಿವರಾತ್ರಿ' ಅತ್ಯುತ್ತಮವಾಗಿ ಮೂಡಿಬಂದಿದೆ.

(ಪ್ರಜಾವಾಣಿ ಸಂದರ್ಶನ ಲೇಖನ - ಶ್ರೀಪಾದ ಯ[illegible])





# ಶಿಖರಸೂರ್ಯ: ಹೊಸಕಾಲದ ಚೈತನ್ಯಕಥನ

**–ಎಲ್.ಎನ್. ಮುಕುಂದರಾಜ್**

'ಶಿಖರ ಸೂರ್ಯ' ಎಂಬ ಮಹಾಕಥನದ ಮೂಲಕ ಡಾ.ಚಂದ್ರಶೇಖರ ಕಂಬಾರರು ಹೊಸ ಕಾಲದ ಅನೇಕ ಪ್ರಶ್ನೆಗಳಿಗೆ ಉತ್ತರಕೊಟ್ಟಿದ್ದಾರೆ. ಕನ್ನಡ ಮಹಾಕಾವ್ಯಗಳು ತಮ್ಮ ವಿಸ್ತಾರವನ್ನು ಕಂಡುಕೊಂಡಿದ್ದು ಸಂಸ್ಕೃತದ ಹಿನ್ನೆಲೆಯಲ್ಲಿ. ಪಂಪ, ರನ್ನ, ಕುಮಾರವ್ಯಾಸ, ಲಕ್ಷ್ಮೀಶ ಮತ್ತು ಕುವೆಂಪು ಅವರಂತಹ ಮಹಾ ಕವಿಗಳ ಪ್ರಜ್ಞೆ ಮೈತಳೆದದ್ದು ಈ ಪರಿಯಲ್ಲಿ. ಕನ್ನಡ ವಾಙ್ಮಯಕ್ಕೆ. ಮಹಾಕಥನ ಕೌಶಲ ಪ್ರತಿಭೆಗೆ ಸಂಸ್ಕೃತ ಇಂಬುಗೋಲಾಗಬೇಕಾದ ಅಗತ್ಯವಿತ್ತೆ?

ಈ ಪ್ರಶ್ನೆಗೆ ಕುವೆಂಪು ಅವರ ಎರಡು ಕಾದಂಬರಿಗಳು ಉತ್ತರಕೊಟ್ಟಿವೆ. ಕುವೆಂಪು ನಂತರದ ಕಾಲಮಾನದಲ್ಲಿ ಕಂಬಾರರ ಮಹಾಕವಿತ್ವಕ್ಕೆ ಅವರು ಸೃಷ್ಟಿಸಿದ ಚಕೋರಿ ಮತ್ತು ಶಿಖರಸೂರ್ಯ ಸಾಕ್ಷಿಯಾಗಿವೆ. ಮಹಾಕಾವ್ಯದ ನಿರ್ದೇಶಿತ ವ್ಯಾಪಾರ, ಜೀವನ ಮೌಲ್ಯ ಸಂಘರ್ಷಗಳು ಹಾಗೂ ಕತೆ ಉಪಕತೆಗಳ ಮೂಲಕ ಈ ಕೃತಿ ಮಹಾಕಾವ್ಯದ ಮಟ್ಟವನ್ನು ಮುಟ್ಟಿ ನಿಂತಿದೆ.

ವಿಮರ್ಶಕ ಮಾಧವ ಕುಲಕರ್ಣಿ ಹೇಳುವಂತೆ ಇದು ಪ್ರತಿಪುರಾಣ ಗದ್ಯ ಇದರ ಬಾಹ್ಯರೂಪ. ಒಳಗೆ ಪದ್ಯದ ರಸಗಂಧ ಅಂತರ್ಗತಗೊಂಡಿದೆ. ಓದುವಿಕೆಯ ಸ್ಪರ್ಶಮಾತ್ರದಿಂದಲೇ ಓದುಗನನ್ನು ಸ್ಫುರದ್ರೂಪಿಯಾಗಿಸಬಲ್ಲ ಮಹಾ ಮಾಂತ್ರಿಕ ಚೈತನ್ಯ ಕಂಬಾರರ ಶಿಖರಸೂರ್ಯ ಎಂಬ ಈ ಕೃತಿಗಿದೆ. ಮಹಾಕವಿ ಮಾತ್ರ ಇಂತಹ ರೋಚಕ ಸಾಧನೆ ಮಾಡಬಲ್ಲ. ಈ ರೀತಿಯ ವಿಶಿಷ್ಟ ಅನುಭವಕ್ಕೆ ಒಳಗಾಗಬಲ್ಲ ನಿಜವಾದ ಓದುಗ, ಈ ಕೃತಿಯನ್ನ ತನ್ನ ಓದಿನ ಸರಾಗ ಹಿಡಿತಕ್ಕೆ ದಕ್ಕಿಸಿಕೊಳ್ಳಲು ಕೆಲವು ಸಿದ್ಧತೆಗಳನ್ನು ಅನಿವಾರ್ಯವಾಗಿ ಮಾಡಿಕೊಳ್ಳಬೇಕಾಗುತ್ತದೆ ಓದುಗ ತನ್ನ ಸಾಂಸ್ಕೃತಿಕ ಹಾಗೂ ಜಾಗತಿಕ ಅನುಭವಗಳನ್ನು ವಿಸ್ತರಿಸಿ ಶಿಖರಸೂರ್ಯದ ನಿಜವಾದ ಸೊಬಗನ್ನು ಸವಿಯಬೇಕಾಗುತ್ತದೆ. ಓದುಗನಾದವನು ಸ್ವತಃ ಸೂಕ್ಷ್ಮವಾಗುತ್ತಲೇ ಕೃತಿ ಉಂಟುಮಾಡುವ ಸೂಕ್ಷ್ಮಾತಿಸೂಕ್ಷ್ಮ ಜಗತ್ತುಗಳನ್ನು ಗ್ರಹಿಸಬೇಕು. ಕವಿಯ ಚತುರಮತಿತ್ವ ಹಾಗೂ ಮಹಾಕವಿತ್ವ ಎಂಬುದು ಕೃತಿಯ ಭಾಷಿಕ ಸೊಬಗಿನಲ್ಲಿ ಅರಳಿ ನಿಂತಿದೆ. ಈ ಸೊಬಗು ಮಲ್ಲಿಗೆಯ ಘಮಲಿನಂತೆ ಕಂಪು ಚೆಲ್ಲಿದೆ. ಸಂಪಿಗೆಯ ಚೆಂಕಿಬಣ್ಣದ ಚೆರಗಿನಂತೆ ರೋಚಕ ವಿಕಸನವೊಂದಿದೆ.

ಶಿಖರಸೂರ್ಯದ ನಿಜವಾದ ಆಶಯ 'ಕಾಳನ್ನು ಹೊನ್ನಾಗಿಸುವ ಹೊನ್ನನ್ನು ಕಾಳಾಗಿಸುವ ತಾಂತ್ರಿಕ ಕುಶಲತೆ. ಸಹಜ ಮಾಂತ್ರಿಕತೆ ಎಂಬುದು ಸಾರ್ವಕಾಲಿಕ ಸತ್ಯ. ಸಾಂಸ್ಕೃತಿಕ ದಾಳಿಗಳನ್ನು ಎದುರಿಸಿ ನಿಲ್ಲಬಲ್ಲ ಮಹಾಸಂಕಲ್ಪವೇ ಜಗತ್ತಿನ ಯಾವುದೇ ಮಹಾಕಾವ್ಯದ ನಿಜವಾದ ಗುರಿಯಾಗಿರುತ್ತದೆ. ಕಂಬಾರರ

ಶಿಖರಸೂರ್ಯದ ತಾತ್ವಿಕ ಕೇಂದ್ರವೂ ಈ ಸ್ಫೋಟಕ ಸತ್ಯವನ್ನೇ ಒಳಗೊಂಡಿದೆ. 'ಒಂದು ಕಾಲಾಗ ತಕ್ಕಡಿ. ಒಂದು ಕಾಲಾಗ ಕತ್ತಿ ಹಿಡಿದುಕೊಂಡು ರಣಹದ್ದು ಒಂದು ಬೆಟ್ಟದ ನೆತ್ತಿಮ್ಯಾಲೆ ಕುಂತು ಹಟ್ಟೀ ಕಡೆ ನೋಡ್ತಾವಲೇ: ಬ್ರಹ್ಮನ ಅವತಾರ ಮುಗಿದು. ಶಿವ ಪಾರ್ವತಿಯರು ಅವತಾರಕ್ಕಾಗಿ, ತುದಿಗಾಲಲ್ಲಿ ನಿಂತಾರಲೇ'- ಎಂಬುದು ಇಲ್ಲಿನ ಕಾರಣಿಕ.

ಇಲ್ಲಿ ಚಿತ್ರಿತಗೊಂಡಿರುವ ಕಾಲ್ಪನಿಕ 'ಕನಕಪುರಿ' ತನ್ನ ಸ್ವಾರ್ಥಕ್ಕಾಗಿ ವಿಶ್ವದ ಹಿಡಿತ ಸಾಧಿಸಲು ಹೊರಟ ಅಮೆರಿಕೆಯಂತಹ ಬಲಿಷ್ಠ ರಾಷ್ಟ್ರಗಳ ಸಂಕೇತವಾಗಿ ಕಾಣುತ್ತದೆ. ಶಿವಾಪುರವೆಂಬುದು ವಸಾಹತುಶಾಹಿತ್ವದ ಧೋರಣೆಗೆ ಎದುರಾಗಬಲ್ಲ, ಅದನ್ನು ಸಮರ್ಥವಾಗಿ ಧಿಕ್ಕರಿಸಿ ನಿಲ್ಲಬಲ್ಲ ಅಭಿವೃದ್ಧಿಶೀಲ ರಾಷ್ಟ್ರಗಳ ಸಂಕೇತವಾಗಿ ಕಾಣುತ್ತದೆ. ಹೇರಲ್ಪಟ್ಟ ಶಿಕ್ಷಣ ವಿಷವಿದ್ಯೆಯಾಗುತ್ತದೆ. ಬ್ರಹ್ಮನ ಸೃಷ್ಟಿ ಪಶ್ಚಿಮುಖಿ ಸಂಸ್ಕೃತಿಯ ನೇರ ನಿಷ್ಠುರ ಚಲನೆಯಾದರೆ. ಶಿವ ಪಾರ್ವತಿಯರ ಸೃಜನಶೀಲ ಸೃಷ್ಟಿ ಸಹಜ ಸಂಸ್ಕೃತಿಯ ನಿರೂಪವಾಗಿ ತೋರುತ್ತದೆ.

ತಲೆ ಇದ್ದವನಿಗೆ ಚಿನ್ನದ ಅಧಿಕಾರ ದಕ್ಕುತ್ತದೆ. ಸಮಯದ ಯಂತ್ರಗಳು ಲೋಭದ ಸಂಕೇತವಾಗಿ ತೋರುತ್ತವೆ. ಸಗಣಿ ಪಾಯಸವಾಗುತ್ತದೆ. ದುಡಿಮೆಗಾರನಾದ ರೈತ ಬಂಗಾರಮ್ಮನ ಒಕ್ಕಲಾಗುತ್ತಾನೆ.

ಸ್ವಯಂನಿರ್ಮಿತ ಸೂರ್ಯರು ತಾವೇ ಅಖಂಡರಾಗಿ, ತಮ್ಮ ವಿಷವಿದ್ಯೆಗಳ ಮೂಲಕ ಸಾಂಸ್ಕೃತಿಕ ವಿರೂಪಗಳಾಗುತ್ತಾರೆ. ಅವರು ಪ್ರೀತಿಯ ನೈಜ ಆರ್ದ್ರತೆಗಳನ್ನು ಹಬೆಯಾಗಿಸುವ, ದಹಿಸುವ ಕ್ರೂರಿಗಳಾಗಿಬಿಡುತ್ತಾರೆ. ಕಂಬಾರರ ಮಾಪ್ರೋತ್ತುಂಗ ಕವಿತೆಯಲ್ಲಿ ಕವಿತೆಯ ನಾಯಕ ಮಾಪ್ರೋತ್ತುಂಗನು ತನ್ನನ್ನು ತಾನು ಸ್ವಯಂಸೂರ್ಯನೆಂದು ಭ್ರಮಿಸಿ ಹೊಸಸೃಷ್ಟಿಗೆ ಮುಂದಾಗುವ ಹುಂಬತನ ತೋರುವ ಮೂಲಕ ಅತಿಮಾನುಷ ಅಥವಾ ಅಮಾನುಷ ವ್ಯಕ್ತಿಯಾಗ ಬಯಸಿ, ನಾಶದ ಕಡೆಗೆ ಚಲಿಸಿದಂತಾಗುತ್ತದೆ. ಅಂತಹ ಇಕ್ಕಟ್ಟಿನ ಸಂದರ್ಭಗಳಲ್ಲಿ ಎದುರಾಗಬಹುದಾದ ಅಸಂಖ್ಯ ಬಾಗಿಲುಗಳಲ್ಲಿ ಒಂದು ಬಾಗಿಲನ್ನು ತೆರೆಯುವ ಮೂಲಕ ಸಾಮಾನ್ಯವಾಗಿ ಕಾಣಲಾರದಂತಹ ಸೌಭಾಗ್ಯಗಳು, ವಿಧಿಗಳು, ಅವಕಾಶಗಳು ಎದುರಾಗುತ್ತವೆ. ಅಂತಹ ಅವಕಾಶಗಳ ಬಾಗಿಲನ್ನು ತಾನೆ ತೆರೆದುಕೊಳ್ಳಬೇಕು. ಅದೃಷ್ಟಶಾಲಿಗಳಿಗೆ ಕೈಹಚ್ಚಿದ್ದೇ ಸರಿಯಾದ ಬಾಗಿಲಾಗುತ್ತದೆ- ಇದು ಶಿಖರಸೂರ್ಯ ಬಿಟ್ಟುಕೊಡುವ ಸತ್ಯದ ಸೂಕ್ಷ್ಮ.

ಸಿರಿವಂತಿಕೆ ಎಂಬುದು ಸಂಸ್ಕೃತಿ ಹಾಗೂ ಜನಾಂಗೀಯ ಜೀವನ ಮೌಲ್ಯದ ಮರುವ್ಯಾಖ್ಯಾನ. ಅದು ಶಾಪ ಮತ್ತು ಚಿರಂಜೀವತ್ವದ ಪಿಶಾಚತನವಾಗಿ ಲೋಕವನ್ನು ಕಾಡುತ್ತದೆ. ಚಿನ್ನವೆಂಬ ಹಳದಿ ಲೋಹದ ಆರಾಧಕರಿಗೆ ತಂದೆಯ ಮೂಲಕ ಹರಿದುಬರುವ ಪಿತೃಸಂಸ್ಕೃತಿ ದೊಡ್ಡದಾಗಿ ಕಾಣುತ್ತದೆ. ಅವರಿಗೆ ತಂದೆ ದೊಡ್ಡವನು. ಅವರು ಪ್ರೇಮದ ವಿರೋಧಿಗಳಾಗಿರುತ್ತಾರೆ. ಪ್ರೀತಿ ಬಲ್ಲವರಿಗೆ ಮಾತ್ರ ತಾಯಿ ದೊಡ್ಡವಳು. ಹೆತ್ತವರೆಲ್ಲ ತಾಯಿಯಂತೆ, ಪುಣ್ಯಕೋಟಿಯಂತೆ ಕಾಣುತ್ತಾರೆ. ಇಂತಹ ಕಾಣ್ಕೆಯು ಬ್ರಹ್ಮಸೃಷ್ಟಿಯ ಕಟ್ಟಳೆಗೆ ಎದುರಾಗಿ ಜಗದ ತಂದೆತಾಯಂದಿರ ಸಂಕೇತವಾದ ಶಿವಪಾರ್ವತಿಯರ ಸಹಜಸೃಷ್ಟಿಯನ್ನು ಮುಖಾಮುಖಿಗೊಳಿಸುತ್ತದೆ.

ಆರ್ಯ ಪ್ರಣೀತ ಆಚಾರ್ಯ ನೆಲೆಯ ಮಹಾಕಾವ್ಯಗಳು ತಮ್ಮ ಶ್ರೇಷ್ಠತೆಯ ವ್ಯಸನವನ್ನು ಮಂಟೇಸ್ವಾಮಿ, ಮಲೆಮಹದೇಶ್ವರ ಮುಂತಾದ ಜನಪದ ಮಹಾಕಾವ್ಯಗಳ ಎದುರು ಕಳೆದುಕೊಂಡು ಬೆತ್ತಲಾಗುವಂತೆ ಈ ಕೃತಿಯ ಎದುರು ಕಳೆದುಕೊಳ್ಳುತ್ತವೆ. ದ್ರಾವಿಡರ ವಿಚಾರ ನೆಲೆ ಹಾಗೂ ಮಹಾಕವಿತ್ವದ ನಿರವಲಂಬನ ಕೇಂದ್ರವೊಂದು ಚಂದ್ರಶೇಖರ ಕಂಬಾರರ ಮೂಲಕ ಇಲ್ಲಿ ಮತ್ತೆ ಮೈತಾಳಿದೆ. ಔರಂಗಜೇಬನ ಘಾತಕ್ಕೆ ಬ್ರಹ್ಮಪಿಶಾಚಿಯ ಪುನರ್ಜನ್ಮ ನೀಡುವ ಅನಗತ್ಯ ಗತಿ ಇಲ್ಲಿ ತನ್ನಿಂದತಾನೆ ನಿವಾರಣೆಯಾಗಿದೆ. ಹೊಸಕಾಲದ ಪುರಾಣ ಪರಂಪರೆ ದಶದಿಕ್ಕುಗಳಿಗೆ ಚಾಚುವ ವಿನೂತನ ಕ್ರಿಯೆ ಇಲ್ಲಿ ನಡೆಯುತ್ತದೆ. ಪೂರ್ಣಚಂದ್ರತೇಜಸ್ವಿಯವರ ನಿಗೂಢಗಳು, ಚಂದ್ರಶೇಖರ ಕಂಬಾರರ ನಿಷ್ಠುರಗುಗಳು ಪರಸ್ಪರ ಮುಖಾಮುಖಿಯಾಗುತ್ತವೆ. ಓದುಗನೆಂಬ ಮಹಾಪ್ರಾಣಿ ಜುಲುಮೆಗೆ ಸಿಕ್ಕಿ ಜರ್ಝರಿತನಾಗುವ ಬದಲು ಒಲುಮೆಗೆ ಸಿಕ್ಕಿ ವಿಕಾಸಗೊಳ್ಳುತ್ತಾನೆ. ಇದು ಈ ಕೃತಿಯ ನಿಷ್ಠುರ ಸಾಧನೆ.



ಕನ್ನಡಕ್ಕೆ ಎಂಟನೇ ಜ್ಞಾನಪೀಠ

# ಕಂಬಾರ : ಹಳ್ಳಿಯ ಪ್ರತಿನಿಧಿ–ನಾಡಿನ ನಿಧಿ

–ಜರಗನಹಳ್ಳಿ ಶಿವಶಂಕರ್

ನಮ್ಮ ಹಳ್ಳಿಗಳಿಗೆ ದೂರದರ್ಶನ ದಾಳಿ ಇಟ್ಟದ್ದು ಹಿಂದಿನ ಶತಮಾನದ ತೊಂಭತ್ತರ ದಶಕದಲ್ಲಿ. ಸಣ್ಣ ಮನೆ ಮನೆಯ ಕಿರು ಪೆಟ್ಟಿಗೆಯ ಪರದೆಯ ಮೇಲೆ ಮೂಡಿದ ರಾಮ–ಸೀತೆ ಪಾತ್ರಧಾರಿಗಳ ಪಾದಗಳಿಗೆ ಜನ ಬಿದ್ದರು. ಆ ಪ್ರಚಾರದ ಬಲದಿಂದಲೇ ಅಂತಹ ಪಾತ್ರಧಾರಿಗಳೂ ಜನಗಳನ್ನಾಳುವ ಜನಪ್ರತಿನಿಧಿಗಳಾಗಿ ಲೋಕಸಭೆಗಳಲ್ಲೂ ಕೂರುವಂತಾಯಿತು. ಅವರ ನಡವಳಿಕೆಗಳನ್ನು ಕಂಡ ಅಭಿಮಾನಿಗಳು ಮುಂದಿನ ದಿನಗಳಲ್ಲಿ ಛೀಮಾರಿ ಹಾಕಿ ನಿರಾಶೆಯಿಂದ ನಿಟ್ಟುಸಿರುಬಿಟ್ಟದ್ದರು. ಜತೆಗೆ ಮಂದಿರ ಮಸೀದಿಯ ಗಲಾಟೆಯೂ ನಡೆಯಿತು.

ಒಂದು ಹಳ್ಳಿಯ ಬಹುದೊಡ್ಡ ಮನರಂಜನೆಯಾಗಿ ಇದ್ದದ್ದು ನಾಟಕ ಅಥವಾ ನಾಟಕದ ಇತರೇ ಪ್ರಭೇದಗಳ ಪ್ರದರ್ಶನಗಳು. ಹಳ್ಳಿಯ ದೇಸಿ ಕ್ರೀಡಾ–ಆಟಗಳು. ಹಳ್ಳಿಯಲ್ಲಿ ಹುಟ್ಟಿ ಬೆಳೆದ ನನಗೂ ನಮ್ಮದೇ ಆದ ಇಲ್ಲಿನ ಆಟಗಳಲ್ಲಿ ತೊಡಗಿಸಿಕೊಳ್ಳಲು ಆಸಕ್ತಿಯಾಗಿತ್ತು.

ಹಾಗಾಗಿ ಬಾಲ್ಯದಲ್ಲಿ ನಾನೂ ಸತ್ಯಹರಿಶ್ಚಂದ್ರ ನಾಟಕದಲ್ಲಿ ಹರಿಶ್ಚಂದ್ರ ಮಹಾರಾಜನ ಆಸ್ಥಾನದ ಸಿಂಹಾಸನದ ಪಕ್ಕದಲ್ಲಿ ನಿಂತು ಚಾಮರವನ್ನು ಬೀಸುವ ಪಾತ್ರವನ್ನು ನಿರ್ವಹಿಸಿದ್ದೆ. ಒಮ್ಮೆ ರಾತ್ರಿಯ ನಿದ್ದೆಯ ಮಂಪರಿನಲ್ಲಿ ಬೀಸುವುದನ್ನು ನಿಲ್ಲಿಸಿ ನಿಂತಿದ್ದೆ. ಆಗ ನಮ್ಮೂರಿನ ಪಟೇಲರು ಹರಿಶ್ಚಂದ್ರ ಪಾತ್ರಧಾರಿಗಳು ನನ್ನನ್ನು ಗದರಿಸಿ 'ಬೀಸೋ' ಎಂದಾಗ ಪ್ರೇಕ್ಷಕರೆಲ್ಲ ಗೊಳ್ಳೆಂದು ನಕ್ಕಿದ್ದರು.

ರಾಮಾಯಣ, ಮಹಾಭಾರತ ಕುರಿತಾದ ನಾಟಕಗಳು ನಮ್ಮಲ್ಲಿ ವರ್ಷಕ್ಕೆ ಒಂದೋ ಎರಡೋ ಪ್ರದರ್ಶನಗೊಳ್ಳುತ್ತಿದ್ದವು. ನಾಟಕಗಳನ್ನು ಕಲಿಸಿದ ಒಬ್ಬ ಮೇಷ್ಟ್ರಿಗೆ ನಮ್ಮ ಹಳ್ಳಿಯ ಜನ ಒಂದು ಮನೆಯನ್ನೇ ಕಟ್ಟಿಸಿಕೊಟ್ಟು ನಮ್ಮ ಹಳ್ಳಿಯ ಪ್ರಜೆಯಾಗಿ ಉಳಿಯಲು ಸಹಕರಿಸಿದ್ದರು. ಆ ಕುಟುಂಬದವರು ಈಗಲೂ ನಮ್ಮ ಹಳ್ಳಿಯಲ್ಲಿ ವಾಸಿಸುತ್ತಿದ್ದಾರೆ. ಆದರೆ ನಾಟಕ ಕಲಿಸುವ

ಆಡಿಸುವ ವೃತ್ತಿ ಅವರಲ್ಲಿ ಈಗ ಉಳಿದುಕೊಂಡಿಲ್ಲ.

ಚಂದ್ರಮತಿ, ಸೀತೆ, ದ್ರೌಪದಿಯಂತಹ ಪಾತ್ರಗಳನ್ನು ನಮ್ಮೂರಿನ ಗಂಡಸರೇ ನಿರ್ವಹಿಸುತ್ತಿದ್ದರು. ಒಮ್ಮೆ ಮಹಿಳಾ ಪಾತ್ರಧಾರಿಗಳನ್ನು ಕರೆಯಿಸಬೇಕೆಂಬ ಬೇಡಿಕೆ ಮತ್ತು ಆ ಸುದ್ದಿ ಹಳ್ಳಿಯಲ್ಲಿ ಹರಡಿಕೊಂಡಿತ್ತು. ಅದು ದೊಡ್ಡ ಸುದ್ದಿಯಾಗಿ ಹಳ್ಳಿಯ ಹೆಂಗಸರೆಲ್ಲ ಒಟ್ಟುಗೂಡಿಕೊಂಡು, ನೀರಿನ ಬಾವಿಯ ಬಳಿ ಸಭೆ ನಡೆಸಿಕೊಂಡು ಮಹಿಳಾ ಪಾತ್ರಧಾರಿಗಳು ಹಳ್ಳಿಗೆ ಬರುವುದನ್ನು ಮೌನವಾಗಿ ಪ್ರತಿಭಟಿಸಿ ನಾಟಕದ ಯೋಜನೆಯನ್ನೇ ನಿಲ್ಲಿಸಿದ್ದರು.-ಇದು ಇಂದು ಬೃಹತ್ ಆಗಿ ಬೆಳೆದಿರುವ ಬೆಂಗಳೂರಿನ ಜೆ.ಪಿ. ನಗರದ ಜರಗನಹಳ್ಳಿಯ ವಾಸ್ತವ ಕತೆ.

ಇಂತಹ ವಾತಾವರಣದ ಹಿನ್ನೆಲೆಯಲ್ಲಿ ಬಂದಂತಹ ನಾನು ಎಂಭತ್ತರ ದಶಕದ ಕರ್ನಾಟಕದಲ್ಲಿನ ನಾಟಕಗಳ ಉಚ್ಛ್ರಾಯ ಸ್ಥಿತಿಗಳನ್ನು ಕಂಡು ಬೆಕ್ಕಸ ಬೆರಗಾಗಿದ್ದೆ.

ಒಂದು: ಕಂಬಾರರ 'ಸಂಗ್ಯಾ-ಬಾಳ್ಯಾ' ಹಾಗೂ 'ಜೋಕುಮಾರಸ್ವಾಮಿ' ನಾಟಕಗಳು ಎರಡು: ಜಡಭರತರ 'ಸತ್ತವರ ನೆರಳು' ಹಾಗೂ ಗಿರೀಶ ಕಾರ್ನಾಡರ 'ಹಯವದನ', ಮಾಸ್ತಿ ವಿರಚಿತ ನಟರಂಗದ 'ಕಾಕನ ಕೋಟೆ'.

ಬಿ.ವಿ.ಕಾರಂತರ ನಾಟಕಗಳು ಸಂಜೆ ಏಳಕ್ಕೆ ಎಂದರೆ ಏಳಕ್ಕೆ ಸರಿಯಾಗಿ ಪ್ರಾರಂಭವಾಗುತ್ತಿದ್ದವು. ಒಮ್ಮೆ ಆರುಗಂಟೆ ನಲವತ್ತೈದು ನಿಮಿಷದಲ್ಲಿ ಕಲಾಕ್ಷೇತ್ರದ ಹೊರಾಂಗಣದಲ್ಲಿ ಕಂಬಾರರು-ಕಾರಂತರು ಲೋಕಾಭಿರಾಮವಾಗಿ ಮಾತನಾಡುತ್ತಾ ನಿಂತಿದ್ದರು. ಅವರು ತೊಟ್ಟಿದ್ದ ದಿನನಿತ್ಯದ ಬಟ್ಟೆಯ ಜೊತೆಗೆ ತಲೆಗೆ ಒಂದು ಪಟಗ ಕಟ್ಟಿಕೊಂಡು ಪಾತ್ರಧಾರಿಗಳಾಗಿ ರಂಗದ ಮೇಲೆ ಕಾಣಿಸಿಕೊಂಡರು. ಅದೂ ನನಗೆ ಹೇಳತೀರದ ಆಶ್ಚರ್ಯ.

ಅಂದಿನ ಅವರ ಸರಳ ಜುಬ್ಬಗಳಿಗೆ ಆಕರ್ಷಿತನಾದ ನಾನೂ ಇಂದಿಗೂ ಹತ್ತಿ ಜುಬ್ಬಾಗಳನ್ನೇ ಬಳಸುವಂತಾಗಿದೆ. ಆ ನಾಟಕಗಳನ್ನು ಕಂಡು ಮನಸೋತ ನಾನು, ನಮ್ಮ ಹಳ್ಳಿಯ ಸಮಸ್ಯೆಗಳನ್ನು ಮುಂದಿಟ್ಟುಕೊಂಡು ನಾಟಕಗಳನ್ನು ಬರೆದು, ನಿರ್ದೇಶನ ಮಾಡಿ ಪಾತ್ರಧಾರಿಯಾಗಿಯೂ ಪ್ರದರ್ಶನಗಳನ್ನು ನೀಡಿದ್ದೇನೆ. ಅದು ನಮ್ಮ ಹಳ್ಳಿಯ ಪಾಲಿಗೆ ಪೌರಾಣಿಕದಿಂದ ಸಾಮಾಜಿಕ ವಸ್ತುವಿನ ಕಡೆಗೆ ಹೊರಳಿದ ಒಂದು ದೊಡ್ಡ ಬದಲಾವಣೆ.

ಸಮಸ್ಯೆಯ ಹಿಂದೆ ಇದ್ದ ಸಮಾಜಘಾತುಕರ ಕಣ್ಣು ಕೆಂಪಗಾಗಿ ನಾನು ಪೋಲೀಸ್ ಠಾಣೆಯ ಮೆಟ್ಟಿಲುಗಳನ್ನು ಎಣಿಸುವಂತಾಗಿತ್ತು. ಬಟ್ಟಾರೆ ಕವಿತೆ ಬರೆದು ಕವಿಯಾಗಬೇಕೆಂಬ ಕನಸು ಕಾಣುತ್ತಿದ್ದ ನನಗೆ ನಾಟಕಗಳ ಹುಚ್ಚು ಹೆಚ್ಚಿಸಿದವರು ಕಂಬಾರರು ಮತ್ತು ಕಾರಂತರು.

ಒಮ್ಮೆ ಪ್ರೇಕ್ಷಕರ ನಡುವೆ ಸಾಮಾನ್ಯವಾಗಿ ಕುಳಿತಿದ್ದ ಪಾತ್ರಧಾರಿ ಥಟ್ಟನೆ ಎದ್ದು ನಾಟಕದ ಮುಖ್ಯ ಪಾತ್ರಧಾರಿಗಳ ಕಡೆ ಧಾವಿಸಿ ಆತನೂ ಪಾತ್ರಧಾರಿಯಾಗಿ ಬಿಡುವ ಅಂದಿನ ಪ್ರಯೋಗ ಕುತೂಹಲ ಕೆರಳಿಸಿ ದಿಗ್ಭ್ರಮೆಯಾಗಿಬಿಡುತ್ತಿತ್ತು.

ಉತ್ತರ ಕರ್ನಾಟಕದ ಮತ್ತು ದಕ್ಷಿಣ ಕರ್ನಾಟಕಗಳ ನಡುವಿನ ಅಂತರವನ್ನು ತೆರೆದಿಟ್ಟು ನಾಡಿನ ಸಂಸ್ಕೃತಿಯ ಮೂಲನಾಡಿಯನ್ನು ಧ್ವನಿಸುವ ದೇಸಿ ಏಕತಾನತೆಯನ್ನು ಸಾರಿದವರು ಕಂಬಾರರು. ಹಾಗಾಗಿ ಹಳ್ಳಿಯನ್ನು ಪ್ರತಿನಿಧಿಸಿ ನಾಡಿನ ನಿಧಿಯಾಗಿ ಬೆಳೆದು ನಿಂತವರು.

ಬೆಂಗಳೂರು ವಿಶ್ವವಿದ್ಯಾಲಯದ ಕುಲಪತಿಗಳಾದ ಡಾ. ಎಸ್. ಪ್ರಭುದೇವ ಹಾಗೂ ಶ್ರೀ ಉಮೇಶ್ ಕತ್ತಿ ಅವರುಗಳ ಮಗ-ಮಗಳ ಮದುವೆ ಸಮಾರಂಭದಲ್ಲಿ ಭಾಗವಹಿಸಲು

ಬೆಳಗಾವಿಯ ಜಿಲ್ಲದ ಬಾಗೇವಾಡಿಗೆ ಹೋಗಿದ್ದೆವು. ಹತ್ತಿರದ ಗೋಕಾಕ ಜಲಪಾತವನ್ನು ನೋಡಲು ನಮ್ಮನ್ನೆಲ್ಲ ಕರೆದುಕೊಂಡು ಹೋಗಿದ್ದರು. ಬರುವ ದಾರಿಯಲ್ಲಿ ಘೋಡಗೇರಿ ಫಲಕ ನೋಡಿ ನಾನು ಪುಳಕಿತನಾಗಿ ಇದು ಕಂಬಾರರ ಊರಲ್ಲವೇ ಎಂದು ಕೇಳಿದೆ. 'ಹೌದು' ಎಂದರು ಚಾಲಕರು. ಸ್ವಲ್ಪ ಸಮಯ ಅಲ್ಲಿ ವಾಹನವನ್ನು ನಿಲ್ಲಿಸಿ ಆ ಸ್ಥಳದಲ್ಲಿ ತನ್ಮಯನಾಗೇ ನಿಂತು ಎಂತಹ ಮೇರು ವ್ಯಕ್ತಿಯನ್ನು ನಾಡಿಗೆ ಕೊಡುಗೆಯಾಗಿ ಕೊಟ್ಟಿರುವ ಹಳ್ಳಿಯೆಂದು, ಹಳ್ಳಿಗೆ ನಮಸ್ಕರಿಸಿದೆ. ಕೂಡಲೇ ಕಂಬಾರರಿಗೆ ದೂರವಾಣಿ (ಮೊಬೈಲ್) ಹಚ್ಚಿದೆ. ಕಂಬಾರರು ಎಲ್ಲಿದ್ದೀರಿ ಎಂದರು. ನಿಮ್ಮ ಊರಿನಲ್ಲಿ ಎಂದೆ. ಹಾಗಾದ್ರೆ ಬರ್ರೀ ಮನೆಗೆ ಎಂದರು. ಅವರು ನಾನು ಕತ್ತರಿಗುಪ್ಪೆ-ಬೆಂಗಳೂರಿನ ಬನಶಂಕರಿಯಲ್ಲಿದ್ದೇನೆಂದು ಭಾವಿಸಿದ್ದರು. ಇಲ್ಲಿ ನಾನು ಘೋಡಗೇರಿಯಲ್ಲಿದ್ದೇನೆಂದು ತಿಳಿಸಿದೆ ಬಹಳ ಖುಷಿಯಿಂದ ಎಲಾ, ಹೆಂಗದು? ಎಂದು ನಕ್ಕರು.

ಹಲವರ್ಷ ಕಂಬಾರರ ಒಡನಾಟವನ್ನು ಬಯಸಿ ಅವರಿಗೆ ಹತ್ತಿರವಾಗುತ್ತಾ ಹೋದೆ.

ದುಬೈನ ಧ್ವನಿ ಪ್ರತಿಷ್ಠಾನ ನೀಡುವ 'ಧ್ವನಿ' ಪುರಸ್ಕಾರಕ್ಕೆ ನಮ್ಮಿಬ್ಬರನ್ನು 2008ರಲ್ಲಿ ಆಹ್ವಾನಿಸಿದ್ದರು. ಒಟ್ಟಿಗೆ ಹೋಗಿ ಬಂದೆವು. ತುಂಬಾ ಸಂತೋಷದಿಂದ ಅಲ್ಲಿ ಕಾಲ ಕಳೆದೆವು. ಕಿರಿ-ಕಿರಿ ಎಂಬ ಕಿರಿಕಿರಿ ಇಲ್ಲದ ವ್ಯಕ್ತಿತ್ವ ಅವರದು.

ನಮ್ಮಲ್ಲಿ ಆಚರಿಸುವ ಬಸವ ಜಯಂತಿ ಕಾರ್ಯಕ್ರಮಕ್ಕೆ ಡಾ|| ಜಿ.ಎಸ್. ಶಿವರುದ್ರಪ್ಪ ಹಾಗೂ ಕಂಬಾರರು ಆಗಮಿಸಿದ್ದರು. ಅಂದು ಸುತ್ತೂರು ಶ್ರೀ ಕ್ಷೇತ್ರದ ಪೂಜ್ಯ ಜಗದ್ಗುರು ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳು ಆಗಮಿಸಿದ್ದರು. ವಿಧಾನ ಪರಿಷತ್ತಿನ ಸದಸ್ಯರಾಗುವ ಸೂಚನೆಯು ಪ್ರಸ್ತಾಪವಾಯಿತು. ಅಂತೆಯೇ ಅವರು ಸದಸ್ಯರಾಗಿ ನಾಮಕರಣಗೊಂಡರು. ಆ ಖುಷಿಯನ್ನು ನಾವು ಮೆಲುಕು ಹಾಕುತ್ತೇವೆ.

೨೦೦೯ನೇ ಇಸವಿಯಲ್ಲಿ ನನ್ನ ೬೦ನೇ ವರ್ಷದ ಅಭಿನಂದನಾ ಸಮಾರಂಭವನ್ನು ಗೆಳೆಯರು ಹಮ್ಮಿಕೊಂಡಿದ್ದರು. ಸುತ್ತೂರು ಶ್ರೀಗಳು, ಕಂಬಾರರು, ಯು.ಆರ್. ಅನಂತಮೂರ್ತಿ, ಎಂ.ಪಿ. ಪ್ರಕಾಶ್, ಲಲಿತಾನಾಯ್ಕ, ಬಿ. ಜಯಶ್ರೀ ಇನ್ನೂ ಅನೇಕ ಗಣ್ಯರು ಆಗಮಿಸಿ ಹಾರೈಸಿದ್ದರು. ಕಂಬಾರರು ನನ್ನ ಸಾಹಿತ್ಯ ಮತ್ತು ಒಡನಾಟದ ಬಗ್ಗೆ ಮೆಚ್ಚುಗೆಯಿಂದ ಮಾತನಾಡಿದರು.

ಕಂಬಾರರ ಶ್ರೀಮತಿ ಸತ್ಯಭಾಮ ಅವರಿಗೆ ನನ್ನ ಮಡದಿ ಶೈಲಜಳ ಬಗ್ಗೆ ವಿಶೇಷ ಪ್ರೇಮ. ಅವರಿಬ್ಬರಿಗೂ ಇರುವ ದೈವಭಕ್ತಿ ಅವರೀರ್ವರನ್ನೂ ಹತ್ತಿರವಾಗಿಸಿದೆ. ನವೋದಯ, ನವ್ಯ, ಪ್ರಗತಿಪರ, ಬಂಡಾಯ, ದಲಿತ ಪ್ರಕಾರಗಳು ಅಥವಾ ಚಳುವಳಿಗಳು ಹುಟ್ಟಿದ ಇತ್ತೀಚಿನ ದಶಮಾನಗಳು ಕನ್ನಡ ಸಾಹಿತ್ಯ ಚರಿತ್ರೆಯ ದೊಡ್ಡ ಮಜಲುಗಳು. ಈ ಎಲ್ಲ ಪ್ರಭಾವಗಳ ಒಟ್ಟಿಗೇ ತಮ್ಮ ಅಪ್ಪಟ ದೇಸಿತನವನ್ನು ನಿರಂತರವಾಗಿ ಕಾಯ್ದುಕೊಂಡು, ಹಳ್ಳಿಯ ಮುಗ್ಧತೆಯ ನಡುವೆ ಆವಿರ್ಭವಿಸುವ ಸಂಬಂಧಗಳು, ಪುರಾಣ ನಂಬಿಕೆಗಳು, ನಡೆ-ನುಡಿ-ಸಂಸ್ಕೃತಿಗಳನ್ನು ಪುನರುತ್ಥಾನಗೊಳಿಸುವ ಬಲಾಢ್ಯ ಲೇಖನಿ ಕಂಬಾರರಲ್ಲಿದೆ ಎಂದರೆ ತಪ್ಪಾಗಲಾರದು.

ಒಂದೇ ಕಾಲಘಟ್ಟದಲ್ಲಿ ವೈವಿಧ್ಯಮಯವಾದ ಬರವಣಿಗೆಯ ಕೃಷಿ ನಡೆಯುವುದು ಒಂದು ಭಾಷೆಯ ಮಹತ್ವ ಮತ್ತು ಸಂಪತ್ತನ್ನು ಹೆಚ್ಚಿಸುವುದರಲ್ಲಿ ಸಂದೇಹವಿಲ್ಲ.

ಲಂಕೇಶ, ತೇಜಸ್ವಿ, ಅನಂತಮೂರ್ತಿ, ಭೈರಪ್ಪ ಕನ್ನಡ ಸಾಹಿತ್ಯ ಸಂದರ್ಭದ ವೈವಿಧ್ಯತೆಗಳು. ಒಂದು ಪ್ರಕಾರ ಅಥವಾ ಒಂದು ಚಳುವಳಿಗೆ ಸೀಮಿತವಾದ ಒಂದು

ನಿರ್ದಿಷ್ಟ ಗುರಿಯನ್ನು ಮೀರಿದ ಪ್ರತಿಭೆಗಳು ಇವರು.

ಈ ಪ್ರತಿಭೆಗಳು ಹಳ್ಳಿಯಿಂದ ನಾಡಿಗೆ ನಾಡಿನಿಂದ ದಿಲ್ಲಿಗೆ ತಮ್ಮ ಸಾಮರ್ಥ್ಯವನ್ನು ಸಾಬೀತು ಪಡಿಸಿದ್ದಾರೆ. ಇಂತಹ ಕನ್ನಡ ಸಾಹಿತ್ಯಕ್ಕೆ ಸಮೃದ್ಧ ತಂದುಕೊಟ್ಟ ಸಂದರ್ಭದಲ್ಲಿ ನಾವಿರುವುದು ಸಂತೋಷಕ್ಕೆ ಸಾಕ್ಷಿಯಾಗಿದೆ.

ಕಂಬಾರರ ಒಟ್ಟಿಗೆ ಕಳೆದ ರಸಘಳಿಗೆಗಳ ನಾನೆಂದೂ ಮರೆಯಲು ಸಾಧ್ಯವಾಗದು. ಒಂದು ದಿನ ಬೆಳಿಗ್ಗೆ ಕಂಬಾರರು ದೂರವಾಣಿಯಲ್ಲಿ ನನ್ನ ಜೊತೆ ಮಾತನಾಡಿ, ನಮ್ಮ ಮನೆಗೆ ಬರುವುದಾಗಿ ತಿಳಿಸಿ, ಸ್ವಲ್ಪ ಸಮಯದಲ್ಲೇ ಮನೆಗೆ ಬಂದರು. ನಂತರ ನಾವಿಬ್ಬರೂ ಹೊರಗೆ ಹೋಗಿ ಒಂದು ಕಡೆ ಕುಳಿತುಕೊಂಡೆವು. ಕವಯಿತ್ರಿಯರ ಬಗ್ಗೆ ಅಂದು ಕಂಬಾರರು ತಮ್ಮ ವಿಚಾರಧಾರೆಯನ್ನು ಹರಿಸಿದರು. ಅದು ಅಕ್ಕಮಹಾದೇವಿ, ಮೀರ, ಆಂಡಾಳ ಹೀಗೆ ಅನೇಕರ ವಿಚಾರ ಮಾರ್ಗಗಳನ್ನು ತೆರೆದಿಟ್ಟರು. ಅದಾಗಲೇ ರಾತ್ರಿಯಾಗಿತ್ತು. ಅಂದು ಅವರು ಅಕ್ಕಮಹಾದೇವಿಯ ಮಾರ್ಗದಲ್ಲೇ ಮುಳುಗಿಹೋಗಿದ್ದರು. ನಾನು ನೇರವಾಗಿ ಸಾಹಿತ್ಯದ ವಿದ್ಯಾರ್ಥಿಯಾಗಿಲ್ಲದವನಾಗಿ ಅವರ ಮಾತುಗಳಿಂದ ರೋಮಾಂಚಿತನಾಗಿದ್ದೇನೆ. ಒಬ್ಬ ವಿಶ್ವವಿದ್ಯಾಲಯದ ವಿದ್ಯಾರ್ಥಿಯಂತೆ ಕಲಿತು ಜಂಭ ಪಟ್ಟುಕೊಂಡಿದ್ದೇನೆ.

ಈಗ ಜ್ಞಾನಪೀಠ ಪ್ರಶಸ್ತಿ ಅವರಿಗೂ ಕನ್ನಡ ನಾಡಿಗೂ ಸಂದಾಯವಾಗಿದೆ. ನಾಡಿನ ಜನತೆ ದೊಡ್ಡ ಪ್ರಮಾಣದಲ್ಲಿ ಸಂಭ್ರಮಿಸುತ್ತಿದೆ. ಆ ಸಂಭ್ರಮದ ಹಿಂದೆ ಅರ್ಹತೆಯನ್ನು ಪ್ರಮಾಣೀಕರಿಸುವಂತಿದೆ.

ಅವರಿಗೆ ಅಭಿನಂದನೆಗಳು.

*

---

## ಮಹಾಮಾಯಿ ಮೂಲಕ...

**ಪ**ಡೆದುಕೊಂಡು ಹುಟ್ಟಿದವರಿಗೆ ತಾವು ಪಡೆದದ್ದರ ಪರಿಮಿತಿಯ ಅರಿವಾಗದೇ ಅವರ ವ್ಯಕ್ತಿತ್ವ ಬೆಳೆಯುವುದಿಲ್ಲ. ವ್ಯಕ್ತಿತ್ವದ ಬೆಳವಣಿಗೆಯ ಪ್ರತಿಫಲವೆಂದರೆ ದುಃಖವಲ್ಲದೇ ಬೇರೇನೂ ಅಲ್ಲ. ರಾಜಕುಮಾರಿಯ ಸಾವು ಮತ್ತು ಬದುಕುಗಳು ಇದರಿಂದಾಗಿ ನಾಟಕದ ಸಂಘರ್ಷದ ಕೇಂದ್ರವಾಗುತ್ತವೆ. ತಾಯಿ ಕೊಲ್ಲಬೇಕೆಂದ ರಾಜಕುಮಾರಿಯನ್ನು ಮಗ ಬದುಕಿಸಲು ಪ್ರಯತ್ನಿಸುತ್ತಾನೆ. ತನ್ನ ವಿದ್ಯೆಯ, ಔಷಧದ ಸತ್ವವನ್ನು ಒರೆಗೆ ಹಚ್ಚುತ್ತಾನೆ...



ಈ ಮಹಾಮಾಯಿ ನಾಟಕದಲ್ಲಿ ಸಂಜೀವ ಶಿವನಿಗೆ ಮುಖ್ಯವಾಗಿರುವುದು ತಾಯಿಯ ಅಧಿಕಾರದಿಂದ ಬಿಡುಗಡೆಯನ್ನು ಪಡೆಯುವುದೇ ಹೊರತು ರಾಜಕುಮಾರಿಯನ್ನು ಬದುಕಿಸುವುದಲ್ಲ. ಅವನ ಈ ಸ್ವಾತಂತ್ರ್ಯದಿಂದಾಗಿ ರಾಜಕುಮಾರಿ ಬದುಕಿದ್ದು ಒಂದು ಆನುಷಂಗಿಕ ಫಲವಾಗಿದೆ... ಎಲ್ಲಕ್ಕಿಂತ ಮುಖ್ಯವಾದುದೆಂದರೆ ಈ ನಾಟಕದ ರಂಗಭೂಮಿ ದೃಷ್ಟಿಯಿಂದ ನಿರರ್ಥಕವಾದ ಒಂದು ಕ್ಷಣವೂ ಈ ನಾಟಕದಲ್ಲಿಲ್ಲ.

–ಕೀರ್ತಿನಾಥ ಕುರ್ತಕೋಟಿ



ಕನ್ನಡಕ್ಕೆ ಎಂಟನೇ ಜ್ಞಾನಪೀಠ

# ಬಯಲ ದನಿಯು ಜ್ಞಾನಪೀಠವೂ

–ಡಾ. ಕುಂಸಿ ಉಮೇಶ್

ಈ ಇಂಥ ಸಂದರ್ಭದಲ್ಲಿ ಕಂಬಾರರಿಗೆ ಜ್ಞಾನಪೀಠ ಬಂದಿರುವುದು ಕನ್ನಡ ಸಾಂಸ್ಕೃತಿಕ ಲೋಕದಲ್ಲಿ ಅನೇಕ ಸಂಭ್ರಮಗಳಿಗೆ ಕಾರಣವಾಗಿದೆ. ಅಕ್ಷರ ರಹಿತ ಉತ್ತರ ಕರ್ನಾಟಕ ನೆಲದ ದನಿಗಳಿಗೆ ಕರ್ನಾಟಕ ಸರ್ಕಾರ ಬಿಸಿಲಿನ ಝಳಕ್ಕೆ ತಗಡಿನ ಸರ್ಕಾರಿ ಸೂರುಗಳನ್ನು ನೀಡಿ, ಧರೆ ಹತ್ತಿ ಉರಿವ ಅವರ ಬದುಕಿಗೊಂದು ಹಸಿರಾಗದ ನಿರ್ಮಾನುಷ ಹೊತ್ತಿನಲ್ಲಿ ಅದೇ ನೆಲದ ಬಯಲದನಿ ಕಂಬಾರರು, ನೆಲಗೀರಿ ಜಾನಪದ ನಾದವನ್ನು ಮೀಟಿದವರು. ಅವರ ಕಸುವಿನ ಕನ್ನಡದಲ್ಲಿ ದೇಸಿ ಕನಸುಗಾರಿಕೆ ಮತ್ತು ಗ್ರಾಮೀಣ ಅಪ್ಪಟ ಕಲಾವಿದನ ಪ್ರತಿಭಾವಿಲಾಸವಿದೆ. ಕಾವ್ಯ, ಕಾದಂಬರಿ, ನಾಟಕ, ಸಿನಿಮಾ, ಸಂಗೀತ, ನಿರ್ದೇಶನ, ಗಾಯನ ಮುಂತಾದ ಹತ್ತಾರು ಕ್ಷೇತ್ರಗಳಲ್ಲಿ ತಮ್ಮ ಅಭಿವ್ಯಕ್ತಿ ಸಾಧ್ಯತೆಯನ್ನು ಕಂಡುಕೊಂಡ ಕಂಬಾರರು ಕನ್ನಡ ವಿಶ್ವವಿದ್ಯಾಲಯಕ್ಕೆ ತಂದುಕೊಟ್ಟ ದೇಸಿ ಸೊಗಡು ಅನನ್ಯ.

'ಮುಗಿಲ ತುಂಬಾ ಬೇರು ಬಿಳಿಲಿನಾಲದಮರ
ಆಳದಲಿ ಪಾತಾಳದಲಿ ಹಬ್ಬಿ ಬೆಳೆದ ಚಿಗುರಹಂದರ'.

ಇದು ಕಂಬಾರ ನುಡಿ. ಜಾನಪದ ಶಬ್ದ ಸಂಪತ್ತು ಹಾಗೂ ಕೃತ್ರಿಮವಿಲ್ಲದ ಮುಗ್ಧತೆಯ ನೆಲದ ದನಿಗೆ ಸಾಂಸ್ಕೃತಿಕ ಸೃಜನಶೀಲ ವ್ಯಾಪ್ತಿನೀಡುವಲ್ಲಿ ನಿಷ್ಣಾತರಾದ ಕಂಬಾರ, ಅದು ಕತೆ ಇರಲಿ ಕಾವ್ಯವೇ ಇರಲಿ, ನಾಟಕವೇ ಆಗಲಿ 'ತನ್ನತನದ ಹುಡುಕಾಟಕ್ಕೆ' ಹಾತೊರೆಯುತ್ತಾರೆ. ಅದಕ್ಕಾಗಿಯೇ ಅವರು ಕತೆಯನ್ನು ವಿಸ್ತರಿಸಿ ಕಾದಂಬರಿ, ಕಾದಂಬರಿಯನ್ನು ಮುರಿದು ನಾಟಕ, ನಾಟಕವನ್ನು ಹಿಚುಕಿ ಕಾವ್ಯ, ಕಾವ್ಯವನ್ನು ವಿಸ್ತರಿಸಿ ಕಾದಂಬರಿಯನ್ನು – ಹೀಗೆ ಎಲ್ಲದರಲ್ಲಿ ಕಂಬಾರರ ಕುಸುರಿ ಕುಂಬಾರಿಕೆಯೇ ತುಂಬಿರುತ್ತದೆ.

ತಮ್ಮೊಳಗಿನ 'ಶಿವಾಪುರ'ವೆಂಬ ಮಾಯಾಲೋಕದೊಳಗೇ ಕುಳಿತು ವಿಮರ್ಶ
ಹಂಗು, ಸಮಕಾಲೀನತೆಯ ತೊಡರು, ಸೈದ್ಧಾಂತಿಕಭಾರ ಈ ಯಾವುದರ ಸೂತಕವ
ಅಂಟಿಸಿಕೊಳ್ಳದೇ ನುಡಿಸಂಭ್ರಮ ಹಾಗೂ ಕರ್ನಾಟಕದ ಬಯಲ ಸಾಂಸ್ಕೃತಿಕ ದ
ಪದ ಮೆರವಣಿಗೆಯನ್ನು ಸಾಕರಿಸಿಕೊಂಡಿದ್ದಾರೆ. ಅದಕ್ಕಾಗಿಯೇ ಅವರ ಕೃತಿಗಳ ಓ
ಹೊರ ಹತಾರದ ಪ್ರವೇಶಕ್ಕಿಂತ 'ಶಿವಾಪುರ'ದೊಳಗಿನ ತಣ್ಣನೆಯ, ನಿರುದ್ವಿಗ್ನ ನಡಿಗ
ಅಗತ್ಯವಿದೆ. ಆರಂಭದಲ್ಲಿ ಕಂಬಾರರ ಕಸುವು ನವ್ಯದ ಹಂಗಿಗೊಳಗಿದ್ದಂತೆ ಕಂಡರ
ಜೀವಕಾರುಣ್ಯತೆ ಹಂಬಲಿಸುವಂತೆ ನೆಲಮೂಲದ 'ರಾಮಗೊಂಡ ಸಂಜೀವಶಿ
ಕರಿಬಂಟ, ಚಂದಿರಮುತ್ತ, ಮಾವುತ್ಸೆ, ಕರಿಮಾಯಿ' ಹೀಗೆ ಅಸಂಖ್ಯ ಕಿನ್ನರರೊಡ
ಸಂಭಾಷಿಸುವಲ್ಲಿ ನವ್ಯದ ಸೈದ್ಧಾಂತಿಕ ಭಾರವು ತೊಡರಾಗುವುದನ್ನು ಬೇಗನೇ ಮನಗಂ
ಅಲ್ಲಿಂದ ತಮ್ಮ 'ಶಿವಪುರದ' ಜಾನಪದ ನೆಲಕ್ಕೆ ಮರಳಿದ್ದು ಕನ್ನಡ ಸಾಂಸ್ಕೃತಿಕ ಲೋಕ
ಜೀವಪಯಣವಾಗಿದೆ. ಈ ಪಯಣದಲ್ಲಿ ಅನೇಕರು, ಬೇಂದ್ರೆಯ ಜಾನಪದ ಗಾರುಡಿ
ಭಾಷೆಗೆ ಕಂಬಾರರು ಸೋತಿದ್ದಾರೆ ಎಂಬ ಮತ್ತೊಂದು ಸಮೀಕರಣಕ್ಕೆ ತೊಡಗಿದ್ದು ಇ
ನವ್ಯದಲ್ಲಿ ಬರೆಯುತ್ತಿದ್ದು ಅಲ್ಲಿಂದ ವಿಮುಖವಾಗಿ, ಬೇಂದ್ರೆಯಂತೆ ಪದಗಳ ನುಲಿಯು
ಇದ್ದರೂ ಆ ದೊಡ್ಡ 'ವರಜೀವಿ'ಯ ನೆರಳಾಗಿ ಕುಗ್ಗಿ ಹೋಗದೇ 'ತನ್ನತನದ' ದಾರಿಯ
ಕಂಡುಕೊಂಡು ಕನ್ನಡದ 'ಸಿರಿಸಂಪಿಗೆ'ಯಾಗಿ ಬೆಳೆದ ಕಂಬಾರರ ಬರವಣಿಗೆಯ ಹಾ
ರೋಚಕವಾದುದು.

ಕನ್ನಡ ರಂಗಭೂಮಿಯು ಎಪ್ಪತ್ತರ ದಶಕದ ಹೊತ್ತಿಗೆ ಇಂಗ್ಲಿಶ್ ನಾಟಕಗಳ ನೆರಳ
'ಅಸಂಗತತೆ'ಗೆ ಸಿಕ್ಕಿಹಾಕಿಕೊಂಡಿದ್ದಾಗ 'ಕರಿಮಾಯಿ, ನಾಯಿಕತೆ'ಯ ಮೂಲಕ ಸಂಗೀತ
ರಂಗಭೂಮಿ ಮತ್ತು ಸಿನಿಮಾಗಳನ್ನು ಏಕಕಾಲಕ್ಕೆ ಮರುಜೋಡಿಸಿದ ಕಂಬಾರ
ಬರಿಯೋದು, ಹಾಡೋದು, ಅಭಿನಯಿಸಿಸುವುದು, ನಾದಗಳ ಮೂಲಕ ಕೇಳುಗ
ಮ್ಯೂಜಿಮ್ ಎನ್ನುವಂತೆ ಮಾಡುವ ಎಲ್ಲಾ ಜವಾರಿ ತಾಕತ್ತುಗಳೂ ಆ ಕಾಲದಿಂದಲ
ರೂಢಿಗತವಾವೆ. ಅದಕ್ಕಾಗಿ ಅವರ ಎಲ್ಲಾ ಅಭಿವ್ಯಕ್ತಿಗಳ ಜೀವತಂತು 'ನಾದ-ದೇಹವಾಂ
ಮೀರಿ ನಿಂತ ನಮ್ಮ ಲೋಕದೇವರುಗಳ ಸಾಂಗತ್ಯ ಬದುಕಿನ ಅದಮ್ಯ ಚೈತನ್ಯವಾದ ಕಾವ
ಈ ಎಲ್ಲವೂ ಒಡಮುರಿದು ಜಿಗಿತುಕೊಂಡಿರುತ್ತವೆ. "ಹೇಳತೇನಕೇಳ, ಜೋಕುಮಾರಸ್ವಾ
ಹರಕೆಯಕುರಿ, ಜೈಸಿದನಾಯ್ಕ, ಜಿ.ಕೆ. ಮಾಸ್ತರ... ಸಂಗ್ಯಾಬಾಳ್ಯ, ಋಷ್ಯಶೃಂಗ, ಸಿಂಗಾರೆ
ಕರಿವ್ವ... ಶಿಖರಸೂರ್ಯ, ಕಾಡುಕುದುರೆ..." ಎಲ್ಲ.... ಎಲ್ಲವೂ ಕಂಬಾರರ ದ
ಕಲಾವಂತಿಕೆಗೆ ಸಾಕ್ಷಿಯಾಗಿವೆ. "ಕೆಲವೊಮ್ಮೆ ತೀರಾ ಸರಳ ಜೀವನ ಸಿದ್ಧಾಂತದಲ್ಲಿ ಕ
ರಚನೆಗೆ ತೊಡಗಿದರೂ ವಸ್ತು ಬೆಳೆಯುತ್ತಾ ಸಂಕೀರ್ಣತೆಯನ್ನು ಸಾಧಿಸುವಲ್ಲಿ ಕಂಬಾರ
ಯಶಸ್ವಿಯಾಗಿಬಿಡುತ್ತಾರೆ. ವಸ್ತು ಭಾಷೆಗಳ ಸಂಘಟನೆಯಿಂದಾಗಿ ಒಂದು ಹೊಸಲೋ
ಅನಾವರಣ ಮಾಡುವ ಶಕ್ತಿಯನ್ನು ಕಂಬಾರರ ಬರಹಗಳಲ್ಲಿ ಕಾಣುತ್ತೇವೆ" ಎ
ರಾಜಪ್ಪದಳವಾಯಿಯವರ ಮಾತು ಸಂಗತವೇ.

ಆದರೆ ವಸ್ತು ಮತ್ತು ಭಾಷೆಗಳ ನಡುವೆ ಕಂಬಾರರು ಅನಾವರಣಗೊಳಿಸುವ ಲೋ
ಬಗ್ಗೆನೇ ಅನೇಕ ಅನುಮಾನಗಳೂ ಓದುಗರಲ್ಲಿ ಉಳಿದು ಬಿಡುತ್ತವೆ. 'ರಾಮಗೊಂ
ಮೂಲಕ ಕಂಬಾರರು ಏನು ಹೇಳುವ ಹೊರಟಿದ್ದಾರೆ. ಶಿಖರಸೂರ್ಯದಲ್ಲಿನ ಒ
ಸಂಭಾಷಣೆ 'ಧಾನ್ಯದಿಂದ ಚಿನ್ನಮಾಡಿದಂತೆ, ಚಿನ್ನದಿಂದ ಧಾನ್ಯ ಮಾಡುವ ವಿದ್ಯ

ನನಗೆ ತಿಳಿದಿರಬೇಕಲ್ವಾ?' ಮಹಾರಾಣಿಯ ಈ ಮಾತಿಗೆ ಶಿಖರಸೂರ್ಯ 'ಇಲ್ಲ ಧಾನ್ಯದಿಂದ ಚಿನ್ನ ಮಾಡಬಲ್ಲೆ, ಚಿನ್ನದಿಂದ ಧಾನ್ಯಮಾಡಲಾರೆ ಮಹಾರಾಣಿ'..... ಹಾಗಲ್ಲ ವೈದ್ಯ ಮಿತ್ರನೇ ತಿನ್ನುವ ಧಾನ್ಯವನ್ನು ಚಿನ್ನಮಾಡಿ ಇಟ್ಟುಕೊಳ್ಳೋ ಬುದ್ಧಿ ಮನುಷ್ಯರಿಗ್ಯಾಕೆ ಬಂತು? ಅಪಾರ ಪರಿಶ್ರಮವನ್ನೂ ಸಣ್ಣ ಲೋಹದಲ್ಲಿ ಬಚ್ಚಿಟ್ಟು ಸಂಗ್ರಹಿಸುವುದು ಸಂಗ್ರಹದಿಂದ ಬಲ, ಬಲದಿಂದ ಅಧಿಕಾರ, ಅದಕ್ಕಾಗಿ ಸ್ಪರ್ಧೆ ಇದು ನಿಮ್ಮ ಪ್ರಾಂತೀಯ ನಕ್ಷೆ ..... ಈ ಮಾತಿನ ಸಂದರ್ಭವನ್ನು ವಿಶ್ಲೇಷಿಸುತ್ತಾ ಬಂಜಗೆರೆಯವರು, "ಈ ಕಾದಂಬರಿ ನಮ್ಮ ಸಮಕಾಲೀನ ವಾಸ್ತವದ ಯಾವ ಅಂಚುಗಳನ್ನು ಜಾನಪದೀಯ ನೆಲೆಯ ಮೌಲ್ಯಗಳ ಮೂಲಕ ಗಟ್ಟಿಸುತ್ತಿದೆ ಎಂಬುದನ್ನು ನಿರೂಪಿಸಲು ಈ ಬಗೆಯ ಬೇರೆ-ಬೇರೆ ಉದಾಹರಣೆಗಳನ್ನು ನೋಡಲು ಸಾಧ್ಯವಿದೆ. ನಮ್ಮ ಸಧ್ಯದ ಸಂದರ್ಭದಲ್ಲಿ ಒಂದು ಕಡೆ ಕೋಮುವಾದ ಆ ಮೂಲಕವಾಗಿ ಬ್ರಾಹ್ಮಣವಾದದ ಸಂಸ್ಕರಿತ ರೂಪಗಳ ಒಂದು ಚಿಂತನಾಚೌಕಟ್ಟು, ಅದಕ್ಕೆ ಎದುರಾಗಿ ದೇಸಿ ಸಾಂಸ್ಕೃತಿಕ ನೆಲೆಗಳ ಮೂಲಕ ಬಹುಳತ್ವದ ಜೀವನ ಮೌಲ್ಯಗಳನ್ನು ಸೋಸಿಕೊಳ್ಳುವ ಚಿಂತನಾ ಪ್ರಯತ್ನಗಳು ಸಂಘರ್ಷದಲ್ಲಿವೆ. ಕಂಬಾರರು ದೇಸಿ ಪ್ರಜ್ಞೆಯನ್ನು ಜಾನಪದೀಯ ಬದುಕಿನ ಮೌಲ್ಯಗಳನ್ನು ಬಹಳ ಬಲವಾಗಿ ನಂಬಿ ಅದನ್ನು ಹಲವು ಪ್ರಕಾರಗಳಲ್ಲಿ ಬಿಂಬಿಸುತ್ತಾ ಬಂದಿರುವವರು...... ಕಂಬಾರರಿಗೆ ಜ್ಞಾನಪೀಠ ಬರುವ ಮುಖಾಂತರ ಕನ್ನಡ ಸಾಂಸ್ಕೃತಿಕ ಲೋಕದ ಮತ್ತಷ್ಟು ವಿಸ್ತಾರವಾದ ಸಾಮಾಜಿಕ ಪರಿಧಿಗೆ ಮಾನ್ಯತೆ ಒದಗಿದೆ. ಕಂಬಾರರಂತಹ ಅತಿ ಹಿಂದುಳಿದ, ಅಶಕ್ತ ಸಾಮಾಜಿಕ ನೆಲೆಗಳ ಬರಹಗಾರರು ಕನ್ನಡ ಸಾಂಸ್ಕೃತಿಕ ಪ್ರಜ್ಞೆಯ ಕೇಂದ್ರ ಪ್ರಜ್ಞೆಗಳಲ್ಲಿ ಒಂದೆಂಬಂತೆ ಪರಿಗಣಿತವಾಗಬೇಕಿದ್ದ ಅವಶ್ಯಕತೆ ಇದರಿಂದ ಈಡೇರಿದೆ" - ಎಂದು ದಾಖಲಿಸಿದ್ದಾರೆ. ಆದರೆ ಅದೇ 'ಅಶಕ್ತ ಸಾಮಾಜಿಕ ನೆಲೆಯ' ಕಂಬಾರರು ಇತ್ತೀಚೆಗೆ ಸಮಾರಂಭವೊಂದರಲ್ಲಿ ಉಡುಪಿಯ ಮಾಧ್ವಮಠದ ಪೇಜಾವರಶ್ರೀಗಳ ಪಾದಕ್ಕೆರಗುವ ಮೂಲಕ ಅನೇಕ ಅನುಮಾನವನ್ನು ಅವರ ಕೃತಿಗಳ ಓದಿನ ಮೇಲೆ ಎಳೆದುಕೊಂಡಿದ್ದಾರೆ ಎನಿಸುತ್ತದೆ.

ಸಾರ್ವಜನಿಕವಾಗಿ ಪ್ರಭುತ್ವದ ನಿಯಂತ್ರಿಕ ಶಕ್ತಿಗಳಾದ ಸ್ವಾಮಿಗಳಿಗೆ ಕಾಲಿಗೆರಗುವುದು ತಮ್ಮೊಳಗಿನ ಕಥನಗಳ ರೂಪಕದಂತೆಯೇ ಇದೆ. ಲೋಹಿಯಾ ಹಿಂದೆಯೇ ಹೇಳಿದಂತೆ "ಬ್ರಾಹ್ಮಣರ ಕಾಲುಗಳನ್ನು ಸಾರ್ವಜನಿಕವಾಗಿ ತೊಳೆಯುವ ಕೈಗಳು ಶೂದ್ರರನ್ನು - ದಲಿತರನ್ನು ಒದೆಯಬಲ್ಲ ಕಾಲುಗಳ ಜೊತೆಗೇ ಇರುತ್ತವೆ" ಎಂಬ ಮಾತನ್ನು ನೆನೆದುಕೊಂಡು ಕಂಬಾರರು ಕಟ್ಟಿಕೊಡುವ ಸಂವೇದನೆಗಳನ್ನು ಅನುಮಾನದಿಂದ ನೋಡುವಂತಾಗಿದೆ. ಏಕೆಂದರೆ ನಮ್ಮದು ಗುಲಾಮಗಿರಿಯ ಓದಾಗದ ಹಾಗೆ ಕನ್ನಡ ಸಂಕಥನಗಳನ್ನು ರೂಪಿಸಿಕೊಳ್ಳಬೇಕಾದ ಹೊಣೆಗಾರಿಕೆಯ ಹೊತ್ತಿನಲ್ಲಿದ್ದೇವೆ. ಸ್ವಲ್ಪ ಯಡವಟ್ಟಾದರೂ ಕನ್ನಡ ಪ್ರಜ್ಞೆಯು ಊಳಿಗಮಾನ್ಯ ಪ್ರಜ್ಞೆಯಾಗುವ ಅಪಾಯಗಳಿವೆ. ಒಂದು ಭಾಷೆಯಲ್ಲಿ ಸೃಜನಶೀಲ ಕಾಯಕವು ಅಷ್ಟು ಸುಲಭವಲ್ಲ. ಹಾಗೆಯೇ "ಸಂವೇದನೆ"ಯನ್ನು ರೂಪಿಸುವ ಹೊಣೆಗಾರಿಕೆಯು ಕೂಡ ಕಾಲದಪ್ರಜ್ಞೆಯೊಡನೆ ಸಂವಾದಿಸುವಂತೆ ಕಥನಕಟ್ಟುವುದು ಕೂಡ ಮನುಷ್ಯನ ಅಭಿವ್ಯಕ್ತಿ ಸಾಧ್ಯತೆಯ ಬಹುದೊಡ್ಡ ಯತ್ನವೂ ಹೌದು. ಅಂತಹ ಯತ್ನದಲ್ಲಿ ಬಲಪಂಥೀಯ ಶ್ರದ್ಧೆಯೊಂದು ಏಜೆಂಟ್ ಆಗದ ಹಾಗೆ ತನ್ನನ್ನು ತಾನು ಕಾಪಾಡಿಕೊಳ್ಳಬೇಕಾದ ಸಂಕಷ್ಟದ ಬೇಗೆಯಲ್ಲಿ ಕಲಾವಿದನೊಬ್ಬ ರೂಪುಗೊಳ್ಳಬೇಕಾದುದು ನಮ್ಮ ನಡುವಿನ ಜರೂರು ಮತ್ತು ಸತ್ವದ ದಾರಿಯಾಗಿದೆ. ಈ ಇಂತಹ ಅನೇಕ ಸಂದಿಗ್ಧಗಳನ್ನು ಕಂಬಾರರು ನಿಜವಾಗಿಯೂ ತಮ್ಮ ಸೃಜನಶೀಲ ಅಭಿವ್ಯಕ್ತಿಗಳಲ್ಲಿ ಗೆದ್ದಿರುವರೆ?

ಕನಕಪುರಿಯೋ ಅಥವಾ ಶಿವಾಪುರದಂತಹ ಆದರ್ಶವಾದಿ ಸಮೃದ್ಧಜಗತ್ತು ಇ
ಕೋಮುವಾದಿ. ಫ್ಯೂಡಲ್ ಜಗತ್ತಿನಲ್ಲಿ ಇದ್ದೀತಾದರೂ ಸಾಧ್ಯವೆ? ಆಧುನಿಕತೆಯನ್ನು
ಅನುಮಾನದಿಂದ ನೋಡಬಲ್ಲ ಕಂಬಾರರು ಸಾಂಪ್ರದಾಯಿಕ ನೆಲೆಯಲ್ಲಿ ತಮ್ಮ ಗ್ರಾಮೀಣ
ಲೋಕವನ್ನು ಅತ್ಯುನ್ನತ ರಮ್ಯನೆಲೆಯಲ್ಲಿ ಕಲೆಗೊಳಿಸಿಕೊಡುವಾಗ ಜೀತಯುಕ್ತ ಗ್ರಾಮ
ಅಸ್ಪೃಶ್ಯತೆಯಂತಹ ಕರಾಳತೆಗೆ ಹೇಗೆ ಪ್ರತಿಕ್ರಿಯಿಸಬಲ್ಲರಾಗಿದ್ದಾರೆ? ಏಕೆಂದರೆ, ನವ್ಯದಲ್ಲಿದ್ದು
ಅದರೊಡನೆ ತಾತ್ವಿಕ ಭಿನ್ನಾಭಿಪ್ರಾಯಹೊಂದಿದ ಕಂಬಾರರು, ನವ್ಯೋದಯವರಂತೆ
ಗ್ರಾಮೀಣ ಇಂಡಿಯಾವನ್ನು ರಮ್ಯ ಆದರ್ಶವಾದಿ ಮುಗ್ಧನೆಲೆಯಲ್ಲಿ ಕಡೆದಿಡಲಾರರು
ಅಥವಾ ನವ್ಯದವರಂತೆ ಅದೇ ಗ್ರಾಮೀಣ ಭಾರತವನ್ನು ಸರಕಾಗಿ ನೋಡಲಾರರು ಅಥವಾ
ದಲಿತ ಬಂಡಾಯದವರಂತೆ ಶೋಷಿತ ನೆಲೆಯಾಗಿಯೂ ಕಾಣಲಾರರು. ಹಾಗಾದರೆ
ಕಂಬಾರರು ಕಟ್ಟಿಕೊಡುವ ಮಾಯಾಕಿನ್ನರ, ಗ್ರಾಮೀಣ ಇಂಡಿಯಾವು, ಕೇವಲ ಗತದ
ರಮ್ಯ ಮೋಹವಾದೀತೆ, ರಂಗುರಂಗಿನ ಚಿತ್ತಾರದ ದೃಶ್ಯಮಾಲೆಗಳನ್ನು ಪೋಣಿಸಿಕೊಂಡು
ಅದನ್ನು ಕಾಪು-ರಕ್ಕಸ-ಗೌಡ-ಕರ್ರವ್ವ-ಗುಡ್ಡದ ಸಿರಾಣಿಯಂತಹ ಅತಿಮಾನುಷ ನೆಲೆಯಿಂದ
ಗತದ ಮೋಹವನ್ನು ಮತ್ತೆ-ಮತ್ತೆ ಆವಾಹಿಸಿಕೊಂಡು ದುಡಿಯುವ ಕಂಬಾರರ
ಸೃಜನಶೀಲ ಮೋಹ ಎಲ್ಲಿದೆ? ಅನ್ಯಪ್ರವೇಶದ ಕ್ರೌರ್ಯವನ್ನು ಎಚ್ಚರದಿಂದ ಕಟ್ಟಬಲ್ಲ
ಶಿವಾಪುರದ ಕವಿ ಒಳಗಿನಿಂದಲೇ ಎದ್ದುಬರುವ ದುರಂತ ಕ್ರೌರ್ಯವನ್ನು ಗಮನಿಸುವಲ್ಲಿ
ಸೋಲುತ್ತಾರೆ. ಹಾಗಾಗಿಯೇ ಅವರ ಅನೇಕ ಕಥನ-ನಾಟಕಗಳಲ್ಲಿ ಹೆಣ್ಣು ಕೇವಲ
ಭೋಗದ ಸರಕಾಗುತ್ತಾಳೆ. ರಕ್ತದ ಹೊಳೆ ಗೌಡನಿಂದ ಹರಿಯುತ್ತಲೇ ಇರುತ್ತದೆ. ಗ್ರಾಮೀಣ
ಇಂಡಿಯಾವನ್ನು ಕಾಪಾಡುವ ಕರ್ರವ್ವ, ಕರಿಮಾಯಿ, ಮಹಾಮಾಯಿ, ಜೋಕುಮಾರರು.....
ಮುಗುಮ್ಮಾಗಿ ನಿಲ್ಲುವರಾಗಿದ್ದಾರೆ. ಭಾಷೆಯ ಮಾಂತ್ರಿಕತೆಯು ವಾಸ್ತವವನ್ನು ಮರೆಸುತ್ತದೆ.
ಜ್ಞಾನಪೀಠವೂ ಪ್ರಭುತ್ವದ ಮುಖವಾಣಿಗಳಾದವರ ಕಾಲು ಹಿಡಿಯತೊಡಗುತ್ತದೆ. ಇದು
ಈ ಕಾಲದ ಹೆಮ್ಮೆ ವಿಶ್ವಾಸವೋ, ಕನ್ನಡ ಪ್ರಜ್ಞೆಯನ್ನು ವಿಶ್ವಪ್ರಜ್ಞೆಗೇರಿಸುವ ದಾರಿಯೋ?!
ಗೊತ್ತಿಲ್ಲ.

ಅಂತೂ ಕುವೆಂಪು ನಂತರದ ಕನ್ನಡದ ಜ್ಞಾನಲೋಕಕ್ಕೆ ಒಂದು ಜಿಗಿತವು ಅರಕ್ತ
ಸಾಮಾಜಿಕ ನೆಲೆಯಿಂದ ಸಾಧ್ಯವಾಗಿದೆ. ಅದಕ್ಕಾಗಿ ಕಂಬಾರರನ್ನು ಅಭಿನಂದಿಸಬೇಕಿದೆ.
'ಜ್ಞಾನಪೀಠ'ವೆಂಬುದು ಒಂದು ಖಾಸಗಿ ಪ್ರಶಸ್ತಿ ಎಂಬುದನ್ನು ನೆನೆದುಕೊಂಡೂ....
ಕನ್ನಡ ಸಾಂಸ್ಕೃತಿಕ ಲೋಕದ ಸಾಲು ಸಾಲು ಬರಹಗಾರರ ನಡುವೆ ಕಂಬಾರರಿಗೆ
ದೊರೆತುದು ಸಂತಸದ ವಿಚಾರವಾಗಿಯೂ. ಅವರ ಕೃತಿಗಳ ಮರು ಓದಿಗೆ ಈ ನೆನಪು
ದಾರಿಯಾದೀತು. ಹಾಗಾದರೆ 'ದೇಸಿಯೋಳ್ ಪುಗುವುದು, ಪಂದು 'ಮಾರ್ಗ'ದೊಳ್
ತಳ್ವುದು....' ಅಂದರೆ ಮತ್ತೊಮ್ಮೆ ಕಂಬಾರರನ್ನು ಶ್ರೀಗಳ ಪ್ರಸಂಗದಿಂದ ಮತ್ತೆ ..... ಮತ್ತೆ
ಮರುಓದಿಗೆ ತೊಡಗಿಸುವುದು. ಸಿ.ಎಸ್. ದ್ವಾರಕನಾಥರ ಮಾತಿನಿಂದ ಮುಗಿಸುತ್ತೇನೆ.
"ಆತ್ಮಗೌರವಕ್ಕಿಂತಲೂ ಮಿಗಿಲಾದ ಯಾವುದಾದರೂ ಪ್ರಶಸ್ತಿ ಇದೆಯೆ?" ಬಲಿಪಿನ ಕೂಟಕ್ಕೆ
ಹಾಸಿನ ಹಂಗೇಕೆ?



ಕನ್ನಡಕ್ಕೆ ಎಂಟನೇ ಜ್ಞಾನಪೀಠ

# ದೇಸಾಯರ ಮೂಲಕ ಕಂಬಾರರು

–ಸತೀಶ ಕುಲಕರ್ಣಿ

'ಕಂಬಾರರು ಜ್ಞಾನಪೀಠ ಪಡಿದ್ದಾರೆ. ಏನಾದರು ಒಂದಿಷ್ಟು ಅನ್ವೇಷಣೆಗಾಗಿ ಬರೀ' ಎಂದು ಆರ್. ಜಿ. ಹಳ್ಳಿ. ಕೇಳಿದಾಗ ಅದೇ ಲಹರಿಯಲ್ಲಿ ಬರೆದ ಲೇಖನ ದೇಸಾಯರ ಮೂಲಕ ಕಂಬಾರರು. ಕಂಬಾರ ಸಾಹಿತ್ಯದ ಬಗ್ಗೆ, ಚರ್ಚೆ ನಡೆದಾಗೆಲ್ಲ ನನಗೆ ನೆನಪಾಗುವುದು ಅವರಿಗೆ ಅತ್ಯಂತ ಆತ್ಮೀಯರಾಗಿದ್ದ ದಿ. ಜಿ. ಸಿ. ದೇಸಾಯಿಯವರು. ದೇಸಾಯರಿಗೂ ಕಂಬಾರರಿಗೂ ಒಂದು ವಿಚಿತ್ರವಾದ ಸಾಹಿತ್ಯ ಸಂಬಂಧ. ಹೀಗಾಗಿ ಅದನ್ನೆಲ್ಲಾ ನೆನಪಿಸುವ ಉದ್ದೇಶದಿಂದ ಒಂದಿಷ್ಟು ಬರೆಯುತ್ತಿರುವೆ.

ಚಂದ್ರಶೇಖರ ಕಂಬಾರ, ಚಂದ್ರಶೇಖರ ಪಾಟೀಲ ಹಾಗೂ ಚಂದ್ರಕಾಂತ ಕೂಸನೂರ ಈ ಮೂರು ಹೆಸರುಗಳು ಧಾರವಾಡ ವಿಶ್ವವಿದ್ಯಾಲಯದ ಕಾಲೇಜಿನ ಆ ದಿನಗಳಲ್ಲಿ 'cocktail' ಆಗಿ ತಲೆಯಲ್ಲಿದ್ದವು. ಯಾರ ನಾಟಕ, ಯಾವ ಕವಿತೆ, ಯಾರುಯಾರೆಂದು ತಿಳಿಯುತ್ತಲೇ ಇರಲಿಲ್ಲ. ಅದೇ ತಾನೆ ಸಾಹಿತಿಯಾಗಬೇಕೆಂಬ ಅದರಲ್ಲಿಯೂ ಕವಿಯಾಗಬೇಕೆಂಬ ಹೊಸ ಮನಸ್ಸಿನ ಹಸಿ ರಾಡಿಯಲ್ಲಿ ಈ ಹೆಸರುಗಳು ನಿಲ್ಲುತ್ತಲೇ ಇರಲಿಲ್ಲ.

'ಹೋರಿ' ಕವಿತೆ, 'ಜಾಕೀತ' ನಾಟಕ, 'ತಕರಾರಿನವರು' ಕವನ ಸಂಕಲನ ಓದಿ ತಿಳಿದಾಗ ಕಂಬಾರರು ಗಟ್ಟಿಯಾಗಿ ಮನಸ್ಸಿನಲ್ಲಿ ಬೇರೂರಿದರು. ಒಂದು ರೀತಿಯಲ್ಲಿ ದೊಡ್ಡಾಟ, ಬಯಲಾಟಗಳ ಓಣಿಯಿಂದ ಬಂದ ನನ್ನಂತವರಿಗೆ ನವ್ಯದ ಆ ಭರಾಟೆಯಲ್ಲಿಯೂ ತೀರ ಮನಸ್ಸಿಗೆ ಹತ್ತಿರವಾದವರು 'ಸಂಗ್ಯಾ ಬಾಳ್ಯಾ' ಭಾಷೆಯ ಕಂಬಾರರು.

ಪದವಿ ಶಿಕ್ಷಣದ ಓದು ಮುಗಿದ ನಂತರ ನಾನು ಉದ್ಯೋಗ ಅನ್ವೇಷಣೆಗೆ ಆಯ್ಕೆ ಮಾಡಿಕೊಂಡದ್ದು ವಿದ್ಯುತ್ತ ಇಲಾಖೆ. ನಂತರ ಕನ್ನಡ ಸ್ನಾತಕೋತ್ತರ ಓದು ನನ್ನ ಸಾಹಿತ್ಯ ಕ್ಷಿತಿಜ ಹಿಗ್ಗಿಸಿತು. ಒಂದು ವರ್ಷ ಮಾತ್ರ ನಾನು ಬೆಳಗಾಂವಿ ಜಿಲ್ಲೆಯ ರಾಮದುರ್ಗದ ಕೆ.ಇ.ಬಿ.ಯಲ್ಲಿ ಕೆಲಸ ಮಾಡುತ್ತಿದ್ದೆ. (ಆ ನಂತರ ವರ್ಗಾವಣೆಯಾಗಿ ಹಾವೇರಿಗೆ ಬಂದೆ) ಆ ದಿನಗಳಲ್ಲಿ ನನಗೆ ಸಿಕ್ಕ ದಿ. ಜಿ. ಸಿ. ದೇಸಾಯಿ, ಹಸನ ನಯೀಮ ಸುರಕೋಡ, ಪದ್ಮರಾಜ ದಂಡಾವತಿ

ಹಾಗೂ ಎಂ. ಎಸ್. ಚಿಕ್ಕನರಗುಂದ ಈ ಗೆಳೆಯರ ಗುಂಪಿಗೆ ಜಿ. ಬಿ. ದೇಸಾಯಿರ
ಮಂಡನಾಯಕರು. ವಾರಕ್ಕೆ ಒಮ್ಮೆಯಾದರೂ ಕೂತು ಚರ್ಚಿಸುತ್ತಿದ್ದ ಸಮಯದಲ್ಲಿ
ಜಿ.ಬಿ.ಯವರು ಕಂಬಾರರ ಕಾವ್ಯದ ಬಗ್ಗೆ ಕೊಡುತ್ತಿದ್ದ ಅರ್ಥ ವ್ಯಾಖ್ಯಾಯನ ಶೈ
ಅಪರೂಪದವಾಗಿದ್ದವು. ಅವನ್ನೆಲ್ಲ ಒಂದು ವೇಳೆ ದೇಸಾಯರು ಬರೆದಿಟ್ಟದರೆ ಕಂಬಾರರ
ಸಾಹಿತ್ಯವನ್ನು ನೋಡುವ ವಿಧಾನವೇ ಬೇರೆಯಾಗಿರುತ್ತಿತ್ತು ಎಂಬ ಭಾವನೆ ನನ್ನದು.

ಕಂಬಾರರ 'ತಬ್ಬಿದ ಲಜ್ಜೆಯ ನೋಡಾ' ಕವಿತೆ ಕನ್ನಡದ ಅತ್ಯುತ್ತಮ ಕವಿತೆಗಳಲ್ಲೊಂದು
ಎಂಬ ವಾದ ದೇಸಾಯರದ್ದು. ಬೇಂದ್ರೆಯವರ 'ಹಕ್ಕಿ ಹಾರುತಿದೆ ನೋಡಿದಿರಾ' ಮತ್ತು
ಅಡಿಗರ 'ಭೂಮಿಗೀತ' ಜೊತೆಗೆ ತುಲನೆ ಮಾಡಿ ವ್ಯಾಖ್ಯಾಯಿಸುವ ರೀತಿ ತುಂಬ ವಿಚಿತ್ರ
ರೀತಿಯಾಗಿತ್ತು. 'ತಬ್ಬಿದ ಲಜ್ಜೆಯ ನೋಡಾ' ಕವಿತೆ ತನ್ನೊಳು ತಾನೇ ಸೃಷ್ಟಿಸಿಕೊಳ್ಳುವ
ಲಯ ಶಕ್ತಿ. ಕೂಡಿ ನುಡಿವ ಪದ ಮೃತ್ತಿಗಳು. Endless ಎನ್ನುವ ರೀತಿಯ ಸೃಷ್ಟಿ
ಹಾಡುವಿಕೆ. ನಾದಾಧಾರದಿಂದಲೇ ಮೂಡುವ ಒಂದು ನೇಪುರ ಅಪರೂಪದ್ದು ಎಂದು
ಜಿ. ಬಿ. ದೇಸಾಯಿ ಹೇಳುತ್ತಿದ್ದರು.

ಕಂಬಾರರಿಗೆ ಜ್ಞಾನಪೀಠ ಬಂದ ಮೇಲೆ ಅವರ ಸತ್ವ, ಸಾಧನೆ, ಹಿಂದಿನ ಪರಂಪರೆ
ಕುರಿತಾಗಿ ಹಲವು ಚರ್ಚೆಗಳು ನಡೆದಿವೆ. ಇದೊಂದು ರೀತಿಯಲ್ಲಿ ಆರೋಗ್ಯಪೂರ್ಣ
ಕನ್ನಡ ವಾತಾವರಣ ಕೂಡ. ಕಾರಣ ಕನ್ನಡದಲ್ಲಿ ಈಗೀಗ ಇಲ್ಲಿರುವ ಸ್ತಬ್ಧವಾದ
ಯಾಂತ್ರಿಕವಾದ ವಾತಾವರಣಕ್ಕೆ ಶಾಕ್ ಕೊಟ್ಟ ಪ್ರಸಂಗವಿದು. ಇಂತಹದೊಂದು ವಾತಾವರಣ
ನವ್ಯದ ಸಂದರ್ಭದಲ್ಲಿ ಲವಲವಿಕೆಯಿಂದ ಕಂಡು ಬರುತಿತ್ತು. ಏನೇ ಆದರೂ ಸ
ಸಮುದಾಯದಿಂದ ಬಂದಿರುವ ಕಂಬಾರರು ನೆಲ ಭಾಷೆಯ ಕವಿ ಎಂಬುದು ನಿರ್ವಿವಾದ

ಜಿ. ಬಿ. ದೇಸಾಯರು ಮತ್ತು ಕಂಬಾರರು ಬೆಳಗಾವಿ ಜಿಲ್ಲೆಯ ಸಣ್ಣ ಹಳ್ಳಿಗಳಾದ
ಸಾಲಹಳ್ಳಿ ಮತ್ತು ಘೋಡಗೇರಿಯಿಂದ ಬಂದವರು. ದೇಸಾಯರ ಮದುವೆಗೆ ಬಂದಿದ್ದ
ಕಂಬಾರರು ಅಕ್ಕಿ ಕಾಳು ಬೀಳುವ ತನಕ ಚರ್ಚೆಯಲ್ಲಿ ಮುಳುಗಿದ್ದರಂತೆ. ದೇಸಾಯಿ
ಬೇಗನೇ ಬಂದು ಮದುವೆ ಚಪ್ಪರಕ್ಕೆ ಕರೆದೊಯ್ದದ್ದನ್ನು, ಕಂಬಾರರು ರಾಮದುರ್ಗ
ಒಂದು ಸಭೆಯಲ್ಲಿ ನೆನಪಿಸಿಕೊಂಡಿದ್ದರು.

ಸದಾ 'ಅಮಲ್ದಾರ'ರಾಗಿರುತ್ತಿದ್ದ ಜಿ. ಬಿ. ದೇಸಾಯಿ ಕಂಬಾರರ ಸಿಂಗಾರೆವ್ವ ಮತ್ತು
ಅರಮನೆ ಬರಿ Rewrite ಮಾಡಲು ಹೇಳಿದ್ದನ್ನು ರಾತ್ರಿ ಕೂತಾಗ ನೆನಪಿಸುತ್ತಿದ್ದರು. 'ಕೆಲ
ಭಾಗಾ ತೆಗಿರಿ. ಅಪ್ಪನ್ನ Rewrite ಮಾಡ್ರಿ. ಅಷ್ಟಾಕಂದ್ರ ಇದೊಂದು ರದ್ದಿ ಕಾದಂಬ
ಆಕೃತಿ' ಎಂದು ಹೇಳಿದ್ದನ್ನು ನೆನಪಿಸಿಕೊಳ್ಳುತ್ತಿದ್ದರು. ದೇಸಾಯಿಯವರ ಒಂದೇ ಒಂದ
ಕೃತಿ 'ಸಾವು ಮತ್ತು ಇತರೆ ಕಥೆಗಳು' – ಕಂಬಾರರು ಪ್ರತಿಷ್ಠಿತ ದೈನಿಕ 'ಪ್ರಜಾವಾಣಿ'ಯ
ಪ್ರಿಂಟರ್ಸ್ ಪ್ರಕಾಶನದ ಮೂಲಕ ಪ್ರಕಟವಾಗಲು ಸಹಾಯ ಮಾಡಿದ್ದರು. ಅದೇ ವ್ಯಾಳ್ಯ
ಕಂಬಾರರ 'ಸಿಂಗಾರೆವ್ವ ಮತ್ತು ಅರಮನೆ' (ಮುದ್ರಣ: ಪ್ರಥಮ) ಪ್ರಕಾಶನವಾಗಿ ಬಂದಿತ್ತು

ಕಂಬಾರ ಅನೇಕ ಕೃತಿಗಳ ಹಿಂದಿನ ಮೊದಲ ಸಾಲಿನ ಓದುಗ ಮತ್ತು ವಿಮರ್ಶ
ಜಿ ಬಿ ದೇಸಾಯರಾಗಿದ್ದರು. ಕಂಬಾರರ ಅನೇಕ ಕೃತಿಗಳ 'ನನ್ನ ಮಾತುಗಳಲ್ಲಿ' ಅವರನ್ನು
ಸ್ಮರಿಸಿಕೊಂಡಿದ್ದಾರೆ ಕೂಡ. ಸಾಂಸ್ಕೃತಿಕ ಲೋಕದಲ್ಲಿ ರಾಷ್ಟ್ರವ್ಯಾಪಿ ಮಾನ್ಯತೆ ಇರು
ಜ್ಞಾನಪೀಠ ಕಂಬಾರರಿಗೆ ಬಂದಿದೆ. ಪೀಠದ ಹಿಂದಿನ ಒಂದಿಷ್ಟು ಬೆಳಕಿನ ಸೆಳಕುಗಳ
ಹಿಡಿದಿಡುವ ಪ್ರಯತ್ನ ಈ ಲೇಖನ ಮೂಲಕ ಪ್ರಯತ್ನ ಮಾಡಿರುವೆ.

---

* 'ಅನ್ವೇಷಣೆ'ಯಲ್ಲಿ ಪ್ರಕಟವಾಗಿರುವ ಲೇಖನಗಳ ಅಭಿಪ್ರಾಯ ಆಯಾ ಲೇಖಕರದ್ದು. –ಸಂ

# ಶಿವಾಪುರ

ಸಣ್ಣಹಳ್ಳಿ ಅದು, ಶಿವಾಪುರ–
ನೀವು ಕೇಳೇ ಇಲ್ಲ.
ನಿಮ್ಮ ನಕಾಶೆಯ ಯಾವ ಮೂಲೆಯಲು
ನಮ್ಮ ಊರು ಇಲ್ಲ.

ಸಣ್ಣಬೀದಿಗಳು ಊರು ಬಿಟ್ಟು
ಬೇರೆಲ್ಲು ಹೋಗುವುದಿಲ್ಲ.
ಕಾಲುದಾರಿಯಲಿ ಒಳಗೆ ಬರಬೇಕು
ಬೇರೆ ದಾರಿ ಇಲ್ಲ.

ಒಳಗೆ ಬಂದರೂ ನಿಮಗೆ ಸಿಗದು
ನಾವಿರುವ ಕೇಂದ್ರ ಬಿಂದು.
ಎಲ್ಲಿ ನಿಂತರದೆ ಕೇಂದ್ರ, ತಿರುಗುವುದು
ಪರಿಘ ಅದರ ಸುತ್ತು.

ಸಿಟಿಗೆ ಹೋಲಿಸಿದರಂತು ನಮ್ಮ ಈ
ಪರಿಘ ಚಿಕ್ಕದೇನೆ.
ಅವರು ಇವರೊಂದಿಗ್ಯಾಕೆ ಹೋಲಿಕೆ?
ನಮ್ಮ ಬಾಳು ನಮಗೆ.

ಇಲ್ಲಿ ಘಟನೆ ಘಟಿಸುವುದೆ ಇಲ್ಲ
ಇತಿಹಾಸಕಿಲ್ಲ ಕೆಲಸ.
ಸದಾ ಹರಿಯುವುದು ನದಿಯು ಮಾತ್ರ
ಕಥೆ ಹುಟ್ಟತಾವು ದಿವಸ.

ನಮಗೆ ನಮ್ಮ ದೇವರುಗಳುಂಟು
ರಾಕ್ಷಸರು, ದೆವ್ವ ಭೂತ.
ನಮ್ಮ ಕೊರತೆಗಳ ಭರ್ತಿ ಮಾಡುವರು
ಅವರ ಮುಂದೆ ನಿಂತು.

ಕ್ಷಿತಿಜದಾಚೆಗೂ ನಂಟು ಬೆಳೆಸಿದವ
ರುಂಟು ನಮ್ಮ ನಡುವೆ.
ಏನು ಸಿಕ್ಕರೂ ತಂದು ಹಂಚುವರು
ಚಿಂತೆಯಿಲ್ಲ ನಮಗೆ

–ಚಂದ್ರಶೇಖರ ಕಂಬಾರ



ಚಿತ್ರ ಕೃಪೆ : ಎಸ್.ಜಿ. ವಾಸುದೇವ



## ಜೈಸಿದ ನಾಯ್ಕ

ಕಂಬಾರರ ನಾಟಕಗಳಿಗೆ ಸಮರ್ಥ ಭಾಷೆಯ ಜೊತೆಗೆ ಧ್ವನಿಪೂರ್ಣವಾದ ಕ್ರಿಯೆಯು ಬೆನ್ನೆಲುಬೂ ಇರುತ್ತದೆ. ಅವರ ನಾಟಕಗಳನ್ನು ಓದುವಾಗ ಕೂಡ ಅವುಗಳ ಆಂತರಿಕ ಕ್ರಿಯೆ ತಾನಾಗಿಯೇ ಕಣ್ಣಿಗೆ ಕಟ್ಟುತ್ತದೆ.

–ಗಿರೀಶ ಕಾರ್ನಾಡ

## ಸಿರಿಸಂಪಿಗೆ

ದೇಹ ಮನಸ್ಸು ಆತ್ಮಗಳ ಜಿಜ್ಞಾಸೆ ಎಂದಿನಿಂದಲೂ ಸಾಹಿತ್ಯದ ಮುಖ್ಯ ಪ್ರಶ್ನೆಯಾಗಿದೆ. ಸಿರಿಸಂಪಿಗೆ ನಾಟಕದ ವಿಶೇಷವೆಂದರೆ ಈ ಸಮಸ್ಯೆಯನ್ನು ಬೌದ್ಧಿಕ ಗ್ರಹಿಕೆಯ ಭಾಗವಾಗಿ ಮಾತ್ರ ನೋಡದೆ ನಾಟಕೀಯ ಸಂಘರ್ಷದ ಮೂಲಕ ವಿಕಾಸಶೀಲವಾಗುವಂತೆ ಮಾಡಿರುವುದು ಗಮನಿಸಬೇಕಾದ ಅಂಶ. ಬೌದ್ಧಿಕ ಚರ್ಚೆಯಲ್ಲಿಯೇ ಅಂತ್ಯವಾಗಬೇಕಾಗಿದ್ದ ಮೂಲ ಪ್ರಶ್ನೆಯೊಂದನ್ನು ವ್ಯಕ್ತಿಯ ಅಂತರ್ಯದ ವಿವಿಧ ಸ್ತರಗಳಿಗೆ ಬದ್ಧವಾಗಿದ್ದ ಮನುಷ್ಯ ಲೋಕದಲ್ಲಿ ನಿರಂತರವಾಗಿ ಕಾಡುವ ಸಮಸ್ಯೆಯನ್ನಾಗಿ ಗ್ರಹಿಸಿರುವುದರಿಂದ ಕನ್ನಡದ ನಾಟಕಗಳ ಸಂದರ್ಭದಲ್ಲಿ ಸಿರಿಸಂಪಿಗೆ ಅನನ್ಯವಾದ ಸೃಷ್ಟಿಯಾಗಿದೆ.

–ಕಿ.ರಂ. ನಾಗರಾಜ

## ಸಂಗ್ಯಾಬಾಳ್ಯಾ

ಕಂಬಾರರು ಕನ್ನಡದ ರಂಗಭೂಮಿಗೆ ಮಳೆ ತಂದ ಋಷ್ಯಶೃಂಗರು. ಹಾಡುಗಳೆಂದರೆ ಕಂಪೆನಿ ಹಾಡುಗಳೆಂದು ಮಾತ್ರ ಅರ್ಥವಿದ್ದಾಗ ಮೊಟ್ಟ ಮೊದಲಿಗೆ 'ತೊಡಗಿಸುವ' 'ಗತ್ಯಾತ್ಮಕ' ಹಾಡುಗಳ ನಾಟಕ ಬರೆದ ಕಂಬಾರರ ಕವಿ ಸಾಮರ್ಥ್ಯದ ಬಗ್ಗೆ ನನಗಂತೂ ತುಂಬಾ ಗೌರವ, ಭಯ, ಅಸೂಯೆ. ನಮ್ಮಲ್ಲಿ ನಾಟಕಕಾರ ಮತ್ತೆ ಕವಿಯೆನಿಸಿಕೊಂಡಿದ್ದಾನೆ ಕಂಬಾರರ ಮೂಲಕ. ಅವರ ಜೋಕುಮಾರಸ್ವಾಮಿಯನ್ನು ನಾನು ಹುಡುಕಿದೆನೋ ಅಥವಾ ಜೋಕುಮಾರಸ್ವಾಮಿ ನನ್ನನ್ನು ಹುಡುಕಿದನೊ.... ಕನ್ನಡದಲ್ಲೇ ಅಲ್ಲ. ಇಡೀ ದೇಶದಲ್ಲೇ ಕಂಬಾರರಷ್ಟು ತೀವ್ರವಾಗಿ ನೆಲದ ವಾಸನೆ ತುಂಬಿಕೊಂಡು, ಜತೆಯಲ್ಲಿ ನವ್ಯತೆ ಆಧುನಿಕತೆಗಳನ್ನೂ ಮೈಗೂಡಿಸಿಕೊಂಡಿರುವ ಸೃಜನಶೀಲ ನಾಟಕಕಾರ ಸಿಗುವುದು ದುರ್ಲಭ.

–ಬಿ.ಬಿ. ಕಾರಂತ

## ಸಿರಿಸಂಪಿಗೆ ಕಂಬಾರ 60

ಕವಿಗಳಾಗಿ ತಮ್ಮ ಲೇಖನ ವ್ಯವಸಾಯ ಶುರು ಮಾಡಿದ ಪಾಟೀಲ ಮತ್ತು ಕಂಬಾರರ ನಾಟಕಗಳಲ್ಲಿ ಮೊದಲು ಕಾಣುವುದು ಕಾವ್ಯವಂತಿಕೆ. ನಮ್ಮ ನಮ್ಮ ಕಾವ್ಯ ನಮ್ಮನ್ನು ಕೊಂಡೊಯ್ಯುವಷ್ಟು ಹತ್ತಿರಕ್ಕೆ ಇವರ ನಾಟಕ ಕೊಂಡೊಯ್ಯುವಂತೆ ಕಂಡು ಬರುತ್ತವೆ...

ವಾಸ್ತವಿಕತೆಗೆ ಹೊಸ ಅರ್ಥ ತಂದ ಕೃತಿಯನ್ನು ಚರ್ಚಿಸುವಾಗಲೆಲ್ಲಾ ಸಾಹಿತ್ಯದ ಪ್ರಕಾರ, ಶೈಲಿ, ರಚನೆಯನ್ನು ಒಳಗೊಂಡು ಹಲವು ಮೂಲಭೂತ ಸಂಗತಿಗಳು ನಮ್ಮ ಚರ್ಚೆಗೊಳಗಾಗುತ್ತವೆ. ಕಂಬಾರರ ನಾರ್ಸಿಸಸ್ ಇಂಥ ಚರ್ಚೆಗೆ ಯೋಗ್ಯವಾಗಿದೆ.

–ಪಿ. ಲಂಕೇಶ್

# ಟಾಗೋರ್

# ೧೫೦



ನುಡಿದು ಬೇಸತ್ತಾಗ!
ದುಡಿದುಡಿದು ಸತ್ತಾಗ
ಜನಕ ಹಿಗ್ಗಿನ ಹಾಡು ನೀಡಾಂವ
ನಿನ್‌ಹಾಂಗ ಆಡಾಕ!
ನಿನ್‌ಹಾಂಗ ಹಾಡಾಕ
ಪಡೆದು ಬಂದವ ಬೇಕೊ ಗುರುದೇವಾ!

ಮೂಡಲಕ ಮೂಡೀದಿ!
ಪಡುವಲಕ ಓಡೀದಿ
ದಿಕ್ಕೆಲ್ಲ ಕೂಡೀದಿ ಗುರುದೇವಾ
ಹಾಡಿ ಹಣ್ಣಾದಿ ನೀ!
ಜಗದ ಕಣ್ಣಾದಿ ನೀ
ದುಡಿದು ಸಣ್ಣಾದಿ ನೀ ಗುರುದೇವಾ!

–ಅಂಬಿಕಾತನಯದತ್ತ



ಟಾಗೋರ್ ೧೯೩೦

# ಠಾಗೋರ್* : ಮೇ ತಿಂಗಳ ಹೂವು

–ಡಾ. ಡಿ.ಆರ್. ನಾಗರಾಜ

**ಮೇ** ತಿಂಗಳು ಎಂದರೆ ಭಾರತೀಯ ಸಾಹಿತ್ಯದ ವಿದ್ಯಾರ್ಥಿಗಳಿಗೆ ಠಾಗೋರ್ ತಿಂಗಳು. ಹದಿನಾಲ್ಕನೆಯ ಮಗು ರವೀಂದ್ರ ಹುಟ್ಟಿದ್ದು ೧೮೬೧ರ ಮೇ ಏಳರಂದು. ಮುಂದೆ ಅವರ ಜೀವನದ ಪ್ರಮುಖ ಘಟನೆಗಳಲ್ಲಿ ಹಲವು ನಡೆದಿದ್ದು ಮೇ ತಿಂಗಳಿನಲ್ಲೇ. ೧೯೨೫ರ ಮೇ ತಿಂಗಳಿನಲ್ಲೇ ಮಹಾತ್ಮಗಾಂಧಿ ಶಾಂತಿನಿಕೇತನಕ್ಕೆ ಭೇಟಿಕೊಟ್ಟಾಗ, ಇಬ್ಬರೂ ಅನೇಕ ಮಹತ್ವದ ಸಂಗತಿಗಳನ್ನು ಚರ್ಚಿಸಿದ್ದು. ಎಲ್ಲಕ್ಕಿಂತ ಹೆಚ್ಚಾಗಿ, ೧೯೧೨ರ ಮೇ ೨೭ರಂದು 'ಗೀತಾಂಜಲಿ'ಯ ಇಂಗ್ಲಿಷ್ ರೂಪದೊಡನೆ ಠಾಗೋರ್ ಇಂಗ್ಲೆಂಡಿಗೆ ತೆರಳಿದ್ದು ಮುಖ್ಯ. ಭಾರತೀಯ ಸಾಹಿತ್ಯದ ಇತಿಹಾಸದಲ್ಲಿ ಇದೊಂದು ಅನನ್ಯ ಪ್ರಯಾಣ. ಈ ಪ್ರವಾಸದಲ್ಲೇ ಕವಿ ಯೇಟ್ಸನೂ ಸೇರಿದಂತೆ ಸಾಹಿತ್ಯಕ ವಲಯ ಹುಚ್ಚೆದ್ದು ಈ ಕವಿಯನ್ನು ಆರಾಧಿಸಿತು. ಅದರ ಫಲವೇ ನೊಬೆಲ್ ಪ್ರಶಸ್ತಿ.

೬೦ರ ದಶಕದ ಕಡೆಯಂಚಿನಲ್ಲಿ ನಿಂತು ಆಧುನಿಕ ಭಾರತದ ಈ ಮಹಾನ್ ಲೇಖಕನಿಗೆ ಹೇಗೆ ಪ್ರತಿಕ್ರಿಯಿಸುವುದು? ನನಗೆ ಠಾಗೋರರ ಸಾಹಿತ್ಯಕ್ಕೆ ದೊಡ್ಡ ಮಟ್ಟದಲ್ಲಿ ಪ್ರವೇಶ ಸಿಕ್ಕಿದ್ದು ೭೦ರ ದಶಕದ ಉತ್ತರಾರ್ಧದಲ್ಲಿ. ಕೊಲ್ಕತ್ತದ ಎಡಪಂಥೀಯ ಪತ್ರಿಕೆ 'ಫ್ರಾಂಟಿಯರ್'ನಲ್ಲಿ ಠಾಗೋರರ ಸಾಹಿತ್ಯದ ಬಗ್ಗೆ ತೀವ್ರ ವಿವಾದಗಳ ಕೆಲವು ತುಣುಕುಗಳು ಕಾಣಿಸಿಕೊಳ್ಳುತ್ತಿದ್ದವು. ತೀವ್ರ ಎಡ ಪಂಥೀಯರು ಠಾಗೋರರನ್ನು ಕತ್ತಿ ಬಿಸಾಡುತ್ತಿದ್ದರು. ಕವಿಯ ವರ್ಗ ನಿಷ್ಠೆಯ ಬಗೆಗೆ, ಸೈದ್ಧಾಂತಿಕ ನಿಷ್ಠೆಯ ಬಗೆಗೆ, ಅಷ್ಟೇಕೆ ಆತನ ಲೈಂಗಿಕ ಜೀವನದ ಬಗೆಗೆ ತೀವ್ರ ರೋಷದ, ಭರ್ತ್ಸನೆಯ ಮಾತುಗಳು. ಪ್ರಾಚೀನ ಚಿತ್ರರೂಪವನ್ನು ಕೊಲ್ಲದೆ

* ಇಂಗ್ಲೀಷಿನ Tagore – ಕನ್ನಡದಲ್ಲಿ ಹಲವು ರೀತಿ ಬಳಕೆಯಾಗುತ್ತಿದೆ. ಡಿಆರ್‌ಎನ್ ತಮ್ಮ ಲೇಖನದಲ್ಲಿ 'ಠಾಗೋರ್' ಎಂದೇ ಬಳಸಿದ್ದಾರೆ. ಇತರೆ ಬರಹಗಾರರು ಟ್ಯಾಗೋರ್, ಟಾಗೋರ್, ಟಾಗೂರ್, ಠಾಕೂರ್ – ಹೀಗೆಲ್ಲಾ ಬಳಸಿದ್ದಾರೆ. –ಸಂ

ಕ್ರಾಂತಿ ಇಲ್ಲ ಎಂಬಂಥ ಚರ್ಚೆ ಅದು.

ಕವಿ ಇಕ್ಬಾಲ್, ಠಾಗೋರರನ್ನು 'ಬುಲ್ ಬುಲ್' ಎಂದ. ಕವಿಯ ಸುತ್ತ ಹಬ್ಬಿದ್ದ ರಮ್ಯ ಪ್ರಭಾವಳಿಯ ಸಂಕೇತ ಅದು. ಸುಕುಮಾರತೆ ಮಾಧುರ್ಯಗಳ ಕವಿ ಈತ ಎಂದು ನಂಬಿದವರಿಗೆ ಈ 'ಬುಲ್ ಬುಲ್' ಉಪಮೆ ತೀರಾ ಪ್ರಿಯವಾಯಿತು ಕೂಡಾ. ಈಗಲೂ ಠಾಗೋರರ ಬಗ್ಗೆ ಈ ರೀತಿಯ ಕಲ್ಪನೆಗಳೇ ಹೆಚ್ಚು. ಸುಂದರ ಪ್ರಯಾಣದ ಹಾಡುಗಾರ ಈತ; ಜಗತ್ತಿನ ಮೂಲ ಸಾಮರಸ್ಯದ ಬಗೆಗೆ ರೋಮಾಂಚಿತವಾಗಿ ಹಾಡಿದ ಅನುಭಾವಿ ಈತ – ಹೀಗೆ ಈ ರೀತಿಯ ಮಾಧುರ್ಯ ಕೇಂದ್ರಿತ ಕಲ್ಪನೆಗಳೇ ಹೆಚ್ಚು. ಸ್ವತಃ ಯೇಟ್ಸ್ ಕವಿಗೂ ಠಾಗೋರರ ಬಗ್ಗೆ ಇದ್ದದ್ದು ಈ ರೀತಿಯ ಅನಿಸಿಕೆಯೇ. ಚರಿತ್ರೆಯಾಗಿರುವ ಭಾರತೀಯ ಸಮಷ್ಟಿ ಆತ್ಮದ ಆನಂದಮಯ ಪ್ರಾರ್ಥನೆ ಠಾಗೋರ್ ಕಾವ್ಯ ಎಂದು ಆತ ಭಾವಿಸಿದ್ದ. ಈ ಭಾರತೀಯ ಕವಿಯ ನಿಜವಾದ ಅನುಭವಗಳಿಗಿಂತ ಯೇಟ್ಸನಿಗೆ ಆಸಕ್ತಿ ಇದ್ದುದು ತನ್ನ ಸ್ವಂತ ಹುಡುಕಾಟಗಳ ಬಗೆಗೆ. ಅದಕ್ಕಾಗಿಯೇ ಒಮ್ಮೆಗೆ ಎಚ್ಚರವಾಗಿ ಈ ಕಾವ್ಯದಲ್ಲಿ ಘರ್ಷಣೆಗಳಿಲ್ಲ ಎಂದ. ಹೀಗಾಗಿಯೇ ಈ ಎರಡು ರೀತಿಯ ಪ್ರತಿಕ್ರಿಯೆಗಳು ಯೇಟ್ಸನ ಸ್ವಂತ ತಲ್ಲಣದ ಅಭಿವ್ಯಕ್ತಿಗಳು. ನಿಜವಾದ ಠಾಗೋರ್ ಅಲ್ಲಿರಲೇ ಇಲ್ಲ.

ಕಡೆಗಾಲದ ಠಾಗೋರರ ವೈಯಕ್ತಿಕ ವ್ಯಕ್ತಿತ್ವ ಕೂಡ ಸಾಕಷ್ಟು ಆಕರ್ಷಕವೇ. ಭಾರತೀಯ ಸಾಂಸ್ಕೃತಿಕ ಸನ್ನಿವೇಶದಲ್ಲಿ ಯಶಸ್ವೀ ಸಾರ್ವಜನಿಕ ವ್ಯಕ್ತಿತ್ವ ಮತ್ತು ವೈಯಕ್ತಿಕ ಲೋಕಗಳ ನಡುವಣ ಘರ್ಷಣೆಯ ಅಧ್ಯಯನಕ್ಕೆ ಠಾಗೋರ್ ಅತ್ಯುತ್ತಮ ಮಾದರಿ. ಒಬ್ಬ ಸಾರ್ವಜನಿಕ ವ್ಯಕ್ತಿಗೆ ಸುತ್ತಲೂ ಸದಾ ಜನತೆಯ ಕನ್ನಡಿ ಇದ್ದೇ ಇರುತ್ತದೆ. ಆತ ಯಾವಾಗಲೂ ಅವರ ನಿರೀಕ್ಷೆಗೆ ತಕ್ಕಂತೆಯೇ ಇರಬೇಕು. ಕಲಾವಿದನಿಗೆ ಹಾಗೆ ಬದುಕುವುದು ಸಾಧ್ಯವೇ ಇಲ್ಲ. ಖಾಸಗಿ ವ್ಯಕ್ತಿತ್ವವೊಂದು ಅವನಿಗೆ ಇರದಿದ್ದರೆ ಷೋಕೇಸಿನ ಬೊಂಬೆಯಾಗಿ ಬಿಡುತ್ತಾನೆ, ಆತ.

ಠಾಗೋರರ ಕಷ್ಟ ಪ್ರಾರಂಭವಾದದ್ದು ಇಲ್ಲಿಯೇ. ಭಾಷೆ ಆತನಿಗೆ ಸಾರ್ವಜನಿಕ ದಂಧೆಯಾಗಿ ಮಾತ್ರ ಕಾಣತೊಡಗಿತ್ತು. ಎಂಥದೇ ಹೆಣ್ಣಿನ ಬಗ್ಗೆ ಬರೆದರೂ ಆಕೆ ಭಾರತ ಮಾತೆಯ ಹಾಗೆ ಕಾಣತೊಡಗಿದ್ದಳು. ಎಲ್ಲವೂ ಸಾರ್ವಜನಿಕವೇ ಆಗಿ ಬಯಲಲ್ಲಿ ಬದುಕಿದ ಹಾಗೆ ಅನ್ನಿಸತೊಡಗಿತ್ತು. ಅದಕ್ಕೆ ಆತ ತನ್ನ ಖಾಸಗಿ ಅಭಿವ್ಯಕ್ತಿಗೆ ಸಂಗೀತಮಯ ಭಾಷೆಯ ಗೊಡವೆಯನ್ನೇ ಬಿಟ್ಟು ಚಿತ್ರಕಲಾವಿದನಾದ.

ದೆಹಲಿಯಲ್ಲಿ ಠಾಗೋರರ ಕಲಾಕೃತಿಗಳ ಪ್ರದರ್ಶನವನ್ನು ನೋಡಿದ್ದು ನನಗೆ ಮರೆಯಲಾಗದ ಅನುಭವ. ಕಲಾಕೃತಿಗಳಾಗಿ ಅವು ಅಂಥ ದೊಡ್ಡ ಮಟ್ಟದಲ್ಲದವೇ ಇರಬಹುದು. ಆದರೆ, ಅವುಗಳ ಹಿಂದೆ ಇದ್ದ ವೈಯಕ್ತಿಕ ತಹತಹ ತಲೆ ಕೆಡಿಸುವಂಥದ್ದು. ಅವುಗಳ ಪ್ರಧಾನ ಅನುಭವ – ಹೆಣ್ಣು. ರೇಖೆಗಳಲ್ಲಿ ಹೆಣ್ಣನ್ನು ಶೋಧಿಸುವ ತೀವ್ರ ಪ್ರಯತ್ನ ಅಲ್ಲಿದೆ. ಅಲ್ಲಿ ಆದಿವಾಸಿ ಮತ್ತು ರೈತಾಪಿ ಹೆಣ್ಣುಗಳ ಛಾಯೆ ದಟ್ಟವಾಗಿದ್ದು, ಕವಿಯ ಕಡೆಗಾಲದ ಲೈಂಗಿಕ ಜೀವನದಲ್ಲಿ ಎದ್ದಿದ್ದ ಗುಲ್ಲು ಮತ್ತೆ ಮತ್ತೆ ತಲೆಯಲ್ಲಿ ಸುಳಿಯುತ್ತಿತ್ತು. ಪದ್ಯಗಳಲ್ಲಿ ಹೇಳಲಾಗದ ಯಾವ ನಿರ್ದಿಷ್ಟ ಅನುಭವಗಳನ್ನು ಕವಿ ಈ ಚಿತ್ರಗಳಲ್ಲಿ ಹೇಳಬಯಸಿದ್ದ? ಋಷಿ ಋಷಿ ಅಂತ ಹೇಳಿ ನಮ್ಮ ಸಂಸ್ಕೃತಿ ಯಾಕೆ ಕವಿಗಳನ್ನು ನಿಧಾನಕ್ಕೆ ಕತ್ತರಿಸಿ ಹಾಕುತ್ತದೆ?

ಠಾಗೋರರ ಕಾವ್ಯದಲ್ಲಿ ವಿಶ್ವದ ಸಾಮರಸ್ಯವನ್ನು ಕುರಿತ ತನ್ಮಯ ಗೀತೆಗಳು

ಬಿಟ್ಟಿವೆಯೋ. ಅಷ್ಟೇ ಪ್ರಮಾಣದಲ್ಲಿ ಭಗ್ನತೆಯನ್ನು ಕುರಿತ ಕವಿತೆಗಳೂ ಇವೆ. ಅದಕ್ಕಾಗಿಯೇ ಕನಿಷ್ಠ ಪಕ್ಷ ಇಬ್ಬರು ಠಾಗೋರರನ್ನು ಅವರ ಕಾವ್ಯದಲ್ಲಿ ಕಾಣಲು ಸಾಧ್ಯವಿದೆ. ಒಬ್ಬ ಜಾದೂಗಾರ: ಭಾಷೆಯನ್ನು ಕುಣಿಸಿ ಮಣಿಸಿ ಪ್ರತಿಲೋಕ ಸೃಷ್ಟಿಸುವ ಗಾರುಡಿಗ. ಠಾಗೋರರ ಕಾವ್ಯವನ್ನು ಈಗಲೂ ಬಂಗಾಳಿಗಳು ಹುಚ್ಚೆದ್ದು ಕುಣಿದು ಹಾಡುವುದು ಈ ಕಾರಣಕ್ಕಾಗಿಯೇ. ಇಲ್ಲಿ ಠಾಗೋರರ ಕಾವ್ಯ ಪ್ರಾರ್ಥನೆಯಾಗಿಬಿಡುತ್ತದೆ. ಹುಚ್ಚು ಪ್ರೇಮಿಯ ಉನ್ಮತ್ತ ಹಾಡಾಗಿಬಿಡುತ್ತದೆ. ದೇವರನ್ನು ಕಾಣಬಯಸುವ ಜೋಗಿ ಜಂಗಮರ ಆತ್ಮ ಒಂದು ಕಥೆ ಹೇಳುವ ಹಾಗೆ. 'ವಿಸ್ಮಯ' ಇಲ್ಲಿಯ ಸ್ಥಾಯೀಭಾವ. ಅರಣ್ಯದಲ್ಲಿ ನಡೆಯುವಾಗ ಅಂಗಾಲು ಎಳೆಹುಲ್ಲು ಮುಟ್ಟಿದಾಗ ಆಗುವ ರೋಮಾಂಚನ–ಇವೆಲ್ಲವೂ ಆ ಕಾವ್ಯದಲ್ಲಿವೆ.

ಬಹುಶಃ ಈ ಸಂಭ್ರಮ – ಸಂತೋಷಗಳು ಭಾಷಾಂತರಗಳಲ್ಲಿ ಉಳಿಯಲಾರವು. ಅದಕ್ಕೆಂದೇ ಒಮ್ಮೊಮ್ಮೆ ಅನ್ನಿಸುತ್ತದೆ, ಅನೇಕ ಸಾರಿ ಭಾಷೆಗಳು ತಮ್ಮ ಪ್ರಿಯಕರ ಕವಿಗಳನ್ನು ತಮ್ಮಲ್ಲೇ ಬಚ್ಚಿಟ್ಟು ಹೊರಗೇ ಬಿಡದಷ್ಟು ಅಸೂಯಾಪರವಾಗಿ ಬಿಡುತ್ತವೆ ಎಂದು. ಕನ್ನಡ ಬೇಂದ್ರೆಯನ್ನು, ಬಂಗಾಳಿ ಠಾಗೋರರನ್ನು ಹಾಗೆ ತಮ್ಮ ಒಡಲೊಳಗೆ ಬಚ್ಚಿಟ್ಟುಕೊಂಡು ಬಿಟ್ಟಿವೆ. ಈ ಭಾಷಾಂತರದ ಅಸಾಧ್ಯತೆಯ ಕಾರಣಕ್ಕೋ ಏನೋ, ಠಾಗೋರರನ್ನು ನಾವೂ ಮರೆತು ಬಿಟ್ಟಿದ್ದೆವು. ಕನ್ನಡದಲ್ಲಿ ನಾರಾಯಣ ಸಂಗಮ ಮತ್ತು ಬೇಂದ್ರೆ ಜತೆಗೂಡಿ ಮಾಡಿದ ಅನುವಾದಗಳನ್ನು ಬಿಟ್ಟರೆ, ಆಮೇಲೆ ದೊಡ್ಡ ರೀತಿಯಲ್ಲಿ ಠಾಗೋರ್ ಕನ್ನಡಕ್ಕೆ ಬಂದೇ ಇಲ್ಲ. ಇಂಗ್ಲಿಷಿನಲ್ಲಿ ಕೂಡ ೧೯೮೫ರಲ್ಲಿ ವಿಲಿಯಂ ರ್‍ಯಾಡಿಸ್ ಒಂದು ಹೊಸ ಅನುವಾದ ಸಂಕಲನ ತರುವತನಕ ಠಾಗೋರ್ ಮರೆತೇ ಹೋಗಿದ್ದರು.

ಮೇಲೆ ಜಾದೂಗಾರನನ್ನು ಕಂಡದ್ದಾಯಿತು. ಠಾಗೋರರ ಕಾವ್ಯವ್ಯಕ್ತಿತ್ವದ ಇನ್ನೊಂದು ಪ್ರಮುಖ ಆಯಾಮ ಭಗ್ನ ಜೀವಿಯದು. ಠಾಗೋರರ ಕಡೆಗಾಲದ ಕಾವ್ಯ ಸಂಪೂರ್ಣವಾಗಿ ಈ ಬಗೆಯದು. ತಲ್ಲಣ, ಸಂದೇಹ, ಭಗ್ನತೆಗಳೇ ಈ ಕವಿತೆಗಳ ಮುಖ್ಯ ಅನುಭವ. ವಿಶೇಷವ ನಾದಮಯ ಛಂದದಲ್ಲಿ ಹಾಡಲಿಲ್ಲ. ಆತಂಕವನ್ನು ಹಾಡಾಗಿಸಿದರೆ, ಅದೂ ಕೂಡ ಅಂತಿಮವಾಗಿ ಲೋಲುಪತೆಯಾಗುತ್ತದೆ ಎಂಬ ಸತ್ಯ ಠಾಗೋರರಿಗೆ ತಿಳಿದಿತ್ತು. ಅದಕ್ಕೆಯೇ ಅದನ್ನು 'ಗದ್ಯಛಂದ' ಎಂದು 'ಕಡೆಗಾಲದ ಠಾಗೋರ್ ಕವಿತೆಗಳು' ಎಂಬ ಬೃಹತ್ ಗ್ರಂಥದಲ್ಲಿ ಈ ಘಟ್ಟವನ್ನು ವಿಸ್ತಾರವಾಗಿ ಚರ್ಚಿಸಿದ್ದಾರೆ.

ಕವಿ ಕೋಡಂಗಿಯಾದರೂ ಸಹಿಸಬಹುದು. ಆದರೆ, ಯೋಗಸ್ ಯೋಗಿಗಳಂತೆ ನಟಿಸತೊಡಗಿ ತೇಲುಗಣ್ಣು–ಮೇಲುಗಣ್ಣು ಮಾಡತೊಡಗಿ ಪದ್ಯ ಬರೆಯತೊಡಗಿದರೆ, ಆ ಇಡೀ ಸಂಸ್ಕೃತಿ ಶುದ್ಧ ಗೋಸುಂಬೆಗಳ ಸಂತೆಯಾಗಿ ಬಿಡುತ್ತದೆ. ಚೆನ್ನಯ್ಯನವರ ಒಂದು ಪದ್ಯ ಇದನ್ನು ಸೊಗಸಾಗಿ ವಿಡಂಬಿಸುತ್ತದೆ. ಬೆಳಗ್ಗೆ ಎದ್ದು ಧ್ಯಾನಕ್ಕೆ ಕೂತಾಗ ಕಾಣುವುದೇನು? 'ಎಲ್ಲೋ ಕಂಡ ಮುದ್ದು ಮುಖ, ತೋರುತಿಹ!' ಆದರೆ, ಅದನ್ನೇ ಶಾರದಾಂಬೆಯ ದಿವ್ಯಾನುಭವ ಅಂತ ಸುಳ್ಳು ಬರೆಯಬಾರದಷ್ಟೇ. ಆದರೆ, ಕವಿ ಸಾರ್ವಜನಿಕವಾಗಿ ಯಶಸ್ವಿಯಾದಷ್ಟೂ ನಮ್ಮಲ್ಲಿ ಆತನ ಒಳಕೋಣೆಗಳು ಒಂದೊಂದಾಗಿ ಮುರಿದುಬೀಳುತ್ತ ಹೋಗುತ್ತದೆ. ಸಮಾಜ ಕವಿಯನ್ನು ಹೀಗೆ ನುಂಗಿ ಹಾಕುತ್ತದೆ.

ಅದಕ್ಕಾಗಿಯೇ, ಠಾಗೋರರ ಕಡೆಗಾಲದ ವ್ಯಕ್ತಿತ್ವ ಮತ್ತು ಸೃಜನಶೀಲತೆ ಬಗೆಗೆ ನನಗೆ ವಿಶೇಷ ಕುತೂಹಲ. ಯಾಕೆ ಆ ರೀತಿಯ ದಿಗ್ಭ್ರಮೆ, ಆತಂಕ, ಉದ್ವಿಗ್ನತೆ? ಏನನ್ನು ಹೇಳಲಾಗದೆ ಆ ವ್ಯಗ್ರತೆ ಮೂಡಿದೆ? ಖಾಸಗಿತನವನ್ನು ಮರಳಿ ಪಡೆಯುವುದ

ಸಾರ್ವಜನಿಕ ಹೀರೋ ಒಬ್ಬನ ಸಂಕಟಗಳನ್ನು ಅವು ಹೇಳುತ್ತವೇನು? ಯೇಟ್ಸ್ ಈ ದೃಷ್ಟಿಯಿಂದ ಸಾಂಸ್ಕೃತಿಕವಾಗಿ ಭಾಗ್ಯಶಾಲಿ. ಪಿಕಾಸೋ ಕೂಡ ಅಷ್ಟೇ. ತನ್ನ ವೃದ್ಧಾಪ್ಯದ ತಲ್ಲಣಗಳನ್ನು, ತುಂಬು ತರುಣಿಯ ಜತೆಗಿನ ತನ್ನ ಸಂಬಂಧವನ್ನು, ಕೋತಿ ಮತ್ತು ಪ್ರಮತ್ತೆಯೊಬ್ಬಳ ಚಿತ್ರಗಳಲ್ಲಿ ಅವನು ಮಾರ್ಮಿಕವಾಗಿ ಹೇಳಿರುವುದನ್ನು ನಾವು ಮತ್ತೊಮ್ಮೆ ಗಮನಿಸಬೇಕಾಗಿದೆ.

ಸಾರ್ವಜನಿಕವಾಗಿ ಸಾಹಿತಿಗೆ ಇರಬೇಕಾದ ಗುಣಗಳ, ಕ್ರಿಯಾಶೀಲತೆಯ ಪ್ರತಿನಿಧಿ ಠಾಗೋರ್. ಶಿಕ್ಷಣ, ಗ್ರಾಮೀಣ ಬದುಕಿನ ಹಸನು ಹೀಗೆ ಹತ್ತು ಸಾಮಾಜಿಕ ಕಾಳಜಿಗಳನ್ನು ಸದಾ ಹಚ್ಚಿಕೊಂಡಿದ್ದ ಪ್ರಯೋಗಶಾಲಿ ಲೇಖಕ ಈತ. ಎಲ್ಲಕ್ಕಿಂತ ಹೆಚ್ಚಾಗಿ ಸಾಹಿತಿಗೆ ಇರಬೇಕಾದ ಸಾಮಾಜಿಕ ನೈತಿಕತೆಯ ಬಗ್ಗೆ ತೀವ್ರ ಎಚ್ಚರವನ್ನೂ ಉಳಿಸಿಕೊಂಡಿದ್ದ ಲೇಖಕ. ೧೯೧೯ರ ಮೇ ೩೦ರಂದು ಪಂಜಾಬಿನ ನರಹತ್ಯೆಯನ್ನು ಪ್ರತಿಭಟಿಸಿ ಪ್ರತಿಷ್ಠಿತ ಪುರಸ್ಕಾರ – ನೈಟ್‌ಹುಡ್ಡನ್ನು ತಿರಸ್ಕರಿಸಿ, ಕವಿ ಬರೆದ ಪತ್ರ ಇವತ್ತಿಗೂ ಹೃದಯಸ್ಪರ್ಶಿ ಮಾದರಿ. ಕವಿ ಬರೆದರು:

> **"ಈ ಅವಮಾನದ ಅಸಂಬದ್ಧ ಸನ್ನಿವೇಶದಲ್ಲಿ ಬಿರುದು ಬಾವಲಿಗಳು ನಮ್ಮ ಅಪಮಾನವನ್ನು ಮತ್ತಷ್ಟು ತೀವ್ರಗೊಳಿಸುತ್ತವೆ. ಅಪಮಾನಿತರಾದ ನನ್ನ ದೇಶದ ಜನತೆಯ ಜತೆಗೆ ನಿಂತು ನಾನು ಈ ವಿಶೇಷ ಪದವಿಗಳನ್ನು ತಿರಸ್ಕರಿಸುತ್ತಿದ್ದೇನೆ."**

ನಮ್ಮ ಸಾಹಿತಿಗಳಲ್ಲಿ ಎಲ್ಲಿ ಹೋಯಿತು. ಈ ಬಗೆಯ ನೈತಿಕ ಸಿಟ್ಟು, ಕ್ರಿಯಾಶೀಲತೆ? ಸಂಕೇತಗಳನ್ನು ಸೃಷ್ಟಿಸುವ ಮಂದಿಗೆ ಸಾಂಕೇತಿಕ ಕ್ರಿಯೆಯೂ ಅಸಾಧ್ಯವಾಗಿಬಿಟ್ಟದೆ. ಮೇ ತಿಂಗಳೇ, ನೀನು ಕವಿ ಠಾಗೋರರಿಗೆ ಸೇರಿದವಳು.

●

---

ಟಾಗೋರ್ – ಗಾಂಧೀಜಿ ಫೋಟೋ ಪೋಸ್!






# ವಿಶ್ವಕವಿ ರವೀಂದ್ರ

–ಡಾ. ಸರಜೂ ಕಾಟ್ಕರ್

ರವೀಂದ್ರನಾಥರನ್ನು ಇಡೀ ವಿಶ್ವ ಕವಿಯೆಂದೇ ಗುರುತಿಸುತ್ತದೆ. ರವೀಂದ್ರನಾಥರೂ ತಮ್ಮನ್ನು ತಾವು ಪರಿಚಯಿಸಿಕೊಳ್ಳುವಾಗ 'ಕವಿ'ಯೆಂದೇ ಪರಿಚಯಿಸಿಕೊಳ್ಳುತ್ತಿದ್ದರು. ಜಗತ್ತಿನ ಹತ್ತು ಸರ್ವಶ್ರೇಷ್ಠ ಕವಿಗಳಲ್ಲಿ ಅವರೂ ಒಬ್ಬರಾಗಿದ್ದರು – ಇದರಲ್ಲಿ ಯಾವ ಅನುಮಾನವೂ ಇಲ್ಲ.

ರವೀಂದ್ರನಾಥರು ಬರೆಯುವುದಕ್ಕಿಂತ ಮೊದಲು ಬಂಗಾಲಿಯಲ್ಲಿ 'ಸಾಧು ಭಾಷಾ'ದಲ್ಲಿ ಬರೆಯುವ ಸಂಪ್ರದಾಯವಿತ್ತು. 'ಸಾಧು ಭಾಷಾ' ಅಂದರೆ 'ಸ್ಟ್ಯಾಂಡರ್ಡ್ ಬಂಗಾಲಿ ಭಾಷೆ'. ಈ ಭಾಷಾ ಶೈಲಿ ಪೂರ್ಣವಾಗಿ ಸಂಸ್ಕೃತ ಜನ್ಯವಾಗಿತ್ತು. ಒಂದು ರೀತಿಯಲ್ಲಿ ಕೃತ್ರಿಮವಾಗಿತ್ತು. ಆದರೆ ಆಗಿನ ಬಂಗಾಲಿ ಪ್ರಗತಿಪರರು ಬಂಗಾಲಿಯನ್ನು ಪ್ರಧಾನವಾಗಿರಿಸಿಕೊಂಡು 'ಚಾಲೂ ಬಂಗಾಲಿ' (ಜನರಾಡುವ ಭಾಷೆ)ಎಂಬ ಹೊಸ ಸಾಹಿತ್ಯ ಪ್ರಕಾರವವನ್ನು ಆರಂಭಿಸಿದರು. 'ಸಾಧು ಭಾಷಾ' ಮತ್ತು 'ಜನರಾಡುವ ಭಾಷೆ' – ಇವೆರಡನ್ನೂ ಸೂಕ್ಷ್ಮವಾಗಿ ಗಮನಿಸಿದ ರವೀಂದ್ರನಾಥರು ತಮ್ಮ ಸಾಹಿತ್ಯವನ್ನು 'ಜನರಾಡುವ ಭಾಷೆ'ಯಲ್ಲಿಯೇ ಬರೆಯಬೇಕೆಂದು ನಿರ್ಧರಿಸಿದರು. 'ಭಾಷೆ ಜನರಿಂದ ದೂರ ಹೋದಷ್ಟು ಅದು ಬೇಗ ಸಾಯುತ್ತದೆ' ಎಂದು ಅವರು ನಂಬಿದ್ದರು. ತಮ್ಮ ಸಾಹಿತ್ಯವನ್ನು ಅವರು 'ಚಾಲೂ ಬಂಗಾಲಿ'ಯಲ್ಲಿಯೇ ಬರೆದರು.

ಭಾಷೆಯ ಮೇಲಿನ ಈ ರೀತಿಯ 'ಆಕ್ರಮಣ'ವನ್ನು ಆಗಿನ ಸಂಪ್ರದಾಯಶೀಲ ಬಂಗಾಲಿ ಸಮಾಜ, ವಿದ್ವತ್ ಜನರು ಮತ್ತು ಪಂಡಿತರು ಸಹಿಸಲಿಲ್ಲ. ಅವರು ರವೀಂದ್ರನಾಥರನ್ನು ಟೀಕಿಸಲು ಹಿಂದೆ ಮುಂದೆ ನೋಡಲಿಲ್ಲ. ಗೌರವ ಡಾಕ್ಟರೇಟ್ ಪದ

ನೀಡಬೇಕೆಂಬ ವಿಚಾರ ಕಲ್ಕತ್ತಾ ವಿಶ್ವವಿದ್ಯಾಲಯದಲ್ಲಿ ಪ್ರಸ್ತಾಪಿಸಲ್ಪಟ್ಟಾಗ ಬಂಗಾಲದ ಹಲವಾರು ಭಾಷಾ ಪಂಡಿತರು 'ರವೀಂದ್ರನಾಥರಿಗೆ ಯಾಕಾಗಿ ಗೌರವ ಡಾಕ್ಟರೇಟ್ ನೀಡಬೇಕು? ಬಂಗಾಲಿ ಭಾಷೆಗೆ ಬಜಾರಿ ರೂಪ ನೀಡಿದ್ದಕ್ಕೆ ಮತ್ತು ಅದರ ಮೌಲ್ಯವನ್ನು ಕುಸಿಯುವಂತೆ ಮಾಡಿದ್ದಕ್ಕೆ ಗೌರವ ಡಾಕ್ಟರೇಟ್ ನೀಡಬೇಕೆಂದರೆ ರವೀಂದ್ರನಾಥರಿಗೆ ಆ ಪದವಿ ನೀಡಬಹುದು' ಎಂದು ವಾದ ಮಂಡಿಸಿದರು. ಇವರ ವಾದದ ಅಬ್ಬರದೆದುರು ಗೌರವ ಡಾಕ್ಟರೇಟ್ ಪ್ರಸ್ತಾಪ ಬಿದ್ದು ಹೋಯಿತು.

ಮೆಟ್ರಿಕ್ಯುಲೇಶನ್ ಪರೀಕ್ಷೆಯಲ್ಲಿ ಬಂಗಾಲಿ ಭಾಷೆಯ ಪರೀಕ್ಷಕರಾಗಿ ರವೀಂದ್ರನಾಥರನ್ನು ನಿಯಮಿಸಬೇಕೆಂದು ಸರಕಾರ ಯೋಚಿಸಿದಾಗಲೂ ಇದೇ ರೀತಿಯ ವಿರೋಧ ಬಂದಿತು. 'ರವೀಂದ್ರನಾಥರಿಗೆ ಶುದ್ಧ ಬಂಗಾಲಿ ಭಾಷೆ ಬರುವುದಿಲ್ಲ' ಎಂಬುದು ವಿರೋಧಿಗಳ ವಾದವಾಗಿತ್ತು. ಈ ಪಂಡಿತೋತ್ತಮರ ವಾದದೆದುರು ಯಾರೂ ನಿಲ್ಲುವಂತಿರಲಿಲ್ಲ; ಸರಕಾರ ತನ್ನ ಯೋಜನೆಯಿಂದ ಹಿಂದೆ ಸರಿದು ಬೇರೊಬ್ಬರನ್ನು ರವೀಂದ್ರನಾಥರ ಜಾಗೆಯಲ್ಲಿ ನಿಯಮಿಸಿದರು.

'ಸಾಧು ಭಾಷಾ' ಸಮರ್ಥಕರು ಇಷ್ಟಕ್ಕೇ ಸುಮ್ಮನಾಗಲಿಲ್ಲ; ಪರೀಕ್ಷೆಯಲ್ಲಿ ರವೀಂದ್ರನಾಥರು ಬರೆದ ಸಾಹಿತ್ಯದ ಒಂದು ಉತಾರಾ (ಒಂದೆರಡು ಪ್ಯಾರಾಗಳು) ನೀಡಿ ಅದನ್ನು 'ಶುದ್ಧ ಬಂಗಾಲಿಯಲ್ಲಿ ಬರೆಯುವಂತೆ' ಹೇಳುತ್ತಿದ್ದರು. ಇಂತಹ ಹೊಟ್ಟೆಕಿಚ್ಚಿನ ಅವಮಾನಗಳನ್ನು ಕವಿ ರವೀಂದ್ರರು ತಮ್ಮ ಆರಂಭದ ದಿನಗಳಲ್ಲೂ, ಮುಂದೆ ವಿಶ್ವಪ್ರಸಿದ್ಧರಾದ ಅನಂತರವೂ ನಿರಂತರವಾಗಿ ಅನುಭವಿಸಿದರು. ಇಂತಹ ಅವಮಾನಗಳನ್ನು ಮೆಟ್ಟಿನಿಲ್ಲುವ ಧೈರ್ಯ ಅವರಲ್ಲಿತ್ತು. ಆ ಧೈರ್ಯವೇ ಅವರನ್ನು ನೊಬೆಲ್ ಪ್ರಶಸ್ತಿಯವರೆಗೆ ಕರೆದುಕೊಂಡು ಹೋಯಿತು.

ರವೀಂದ್ರನಾಥರು ತಮ್ಮ ಮೊದಲ ಕವಿತೆ ಬರೆದಾಗ ಅವರಿಗೆ ೮ ವರ್ಷ ವಯಸ್ಸು. ತಮ್ಮ ಹದಿಮೂರನೆಯ ವರ್ಷದಲ್ಲಿ ಅವರು ಶೇಕ್ಸ್‌ಪಿಯರ್‌ನ "ಮ್ಯಾಕ್‌ಬೆಥ್" ಅನ್ನು ಬಂಗಾಲಿಗೆ ಅನುವಾದಿಸಿದರು; ಅದೂ ಛಂದೋಬದ್ಧ ರೀತಿಯಲ್ಲಿ! ಒಂಭತ್ತನೇ ವರ್ಷದಿಂದ ಆರಂಭವಾದ ಅವರ ಕಾವ್ಯಯಾತ್ರೆ ಅವರು ಸಾಯುವವರೆಗೆ ಅಖಂಡವಾಗಿ ಮುಂದುವರೆಯಿತು. ೧೯೪೧, ಆಗಸ್ಟ್ ೭ರಂದು ಕವಿ ರವೀಂದ್ರನಾಥರು ನಿಧನರಾದರು. ಆಗಸ್ಟ್ ೧ರಂದು ಅವರು ಒಂದು ಆಪರೇಷನ್‌ಗೆ ಒಳಗಾಗಬೇಕಿತ್ತು. ಆಪರೇಷನ್ ಆರಂಭವಾಗುವ ಒಂದು ತಾಸು ಮೊದಲು ತಮ್ಮ ಮಾನಸಪುತ್ರಿ ರಾಣಿ ಚಂದಾಳನ್ನು ಕರೆಯಿಸಿ ಒಂದು ಕವಿತೆ ಬರೆದುಕೊಳ್ಳಲು ಹೇಳಿದರು. ಅವರಿಗೆ ಕವಿತೆಯ ಲಹರಿ ಬಂದಾಗ ರಾಣಿ ಚಂದಾಳನ್ನು ಕರೆಯಿಸಿ ಅವಳಿಗೆ ಕವಿತೆ ಹೇಳಿ ಬರೆಸುತ್ತಿದ್ದರು. ಆಗಸ್ಟ್ ೧ರ ಕವಿತೆಯೇ ಕವಿ ರವೀಂದ್ರರ ಕೊನೆಯ ಕವಿತೆಯಾಯಿತು. ಆಪರೇಷನ್ ಅನಂತರ ಅವರು ಪೂರ್ತಿ ಕೋಮಾಕ್ಕೆ ಹೋದರು. ಈ ಕೋಮಾದಿಂದ ಅವರು ಎಂದೂ ಜಾಗೃತಿಸ್ಥಿತಿಗೆ ಬರಲಿಲ್ಲ.

ರವೀಂದ್ರನಾಥರು ೫೫ ಕವಿತಾಸಂಗ್ರಹಗಳನ್ನು ಪ್ರಕಟಿಸಿದ್ದಾರೆ. ಇದರಲ್ಲಿ ಒಟ್ಟು ೩,೦೦೦ ಕವಿತೆಗಳಿವೆ. ರವೀಂದ್ರರು ೬೦೦೦ ಗೀತೆಗಳನ್ನು ಬರೆದಿದ್ದಾರೆ. ಪಶ್ಚಿಮ ಬಂಗಾಲ ಸರಕಾರ ಕವಿ ರವೀಂದ್ರನಾಥರ ಸಮಸ್ತ ಸಾಹಿತ್ಯವನ್ನು 'ರವೀಂದ್ರ ರಚನಾವಲಿ' ಎಂಬ ಹೆಸರಿನಲ್ಲಿ ಒಟ್ಟು ೧೫ ಸಂಪುಟಗಳಲ್ಲಿ ಪ್ರಕಟಿಸಿದೆ. ಇವುಗಳಲ್ಲಿ ೩ ಸಂಪುಟಗಳು ರವೀಂದ್ರರ ಕಾವ್ಯಕ್ಕೆ

ಮೀಸಲಿದ್ದರೆ ಇನ್ನೊಂದು ಸಂಪುಟದಲ್ಲಿ ಅವರ ಸಮಸ್ತ ಗೀತೆಗಳನ್ನು ಅಳವಡಿಸಲಾಗಿದೆ; ಉಳಿದ ಹನ್ನೊಂದು ಸಂಪುಟಗಳು ಅವರ ಗದ್ಯ ಸಾಹಿತ್ಯವನ್ನು ಒಳಗೊಂಡಿದೆ.

ರವೀಂದ್ರರು ಶ್ರೇಷ್ಠ ನಾಟಕಕಾರರೂ ಆಗಿದ್ದರು. ಅವರು ೫೫ ನಾಟಕಗಳನ್ನು ಬರೆದಿದ್ದಾರೆ. ನಾಟ್ಯ, ಕಾವ್ಯ, ನೃತ್ಯ, ಮತ್ತು ಸಂಗೀತ– ಹೀಗೆ ಸಾಹಿತ್ಯದ ನಾಲ್ಕೂ ಅಂಗಗಳಿಗೆ ಮಹತ್ವವನ್ನು ನೀಡಿದ ರವೀಂದ್ರನಾಥರ ನಾಟಕಗಳು ಸಾರ್ವಕಾಲಿಕವಾದ ನಾಟಕಗಳಾಗಿವೆ. ಇವರ ನಾಟಕಗಳು ಶೇಕ್ಸ್‌ಪಿಯರ್‌ನ ನಾಟಕಗಳಿಗೆ, ಸಂಸ್ಕೃತದ 'ಶಾಕುಂತಲಾ', 'ಮೃಚ್ಛಕಟಿಕ' ನಾಟಕಗಳಿಗೆ ಸರಿಸಮನಾದ ನಾಟಕಗಳು.

ರವೀಂದ್ರನಾಥರು ಸುಮಾರು ೯೦ ಕಥೆಗಳನ್ನು ಬರೆದರು. ಒಟ್ಟು ಮೂರು ಕಥಾ ಸಂಕಲನಗಳಲ್ಲಿ ಅವರ ಕಥೆಗಳು ಪ್ರಕಟಗೊಂಡವು. ವಿಶ್ವಕಥಾ ಸಾಹಿತ್ಯದಲ್ಲಿ ಆ ಕಾಲದಲ್ಲಿ ಮೋಪಾಸಾ ಮತ್ತು ಚೆಕಾಫ್ ಅವರ ಕಥೆಗಳು ಗಾಜಾಯಿಸುತ್ತಿದ್ದವು. ರವೀಂದ್ರನಾಥರ ಕಥೆಗಳು ಇಂಗ್ಲೀಷಿಗೆ ಅನುವಾದಗೊಂಡಾಗ ಪಶ್ಚಿಮದ ದೇಶಗಳು ರವೀಂದ್ರರ ಕಥೆಗಳನ್ನು ಹಾರ್ದಿಕವಾಗಿ ಸ್ವಾಗತಿಸಿದವು. ಕಥೆಗಳ ಜೊತೆಗೆ ಅವರು ಕಾದಂಬರಿ, ಲಘು ಕಾದಂಬರಿಗಳನ್ನು ಬರೆದರು. ಅವರ 'ಗೋರಾ' ಕಾದಂಬರಿಯನ್ನು ಟಾಲ್‌ಸ್ಟಾಯ್‌ರ 'ವಾರ್ ಅಂಡ್ ಪೀಸ್' ಕಾದಂಬರಿಗೆ ತುಲನೆ ಮಾಡಲಾಯಿತು. ರವೀಂದ್ರನಾಥರ ಕಾಲದಲ್ಲಿಯೇ ಬಂಗಾಲಿಯಲ್ಲಿ ಶರತ್ಚಂದ್ರರು ಶ್ರೇಷ್ಠ ಕಾದಂಬರಿಕಾರರೆಂದು ಹೊರಹೊಮ್ಮಿದ್ದರು. 'ನಾನು ಕಾದಂಬರಿಕಾರನಾಗಲು ರವೀಂದ್ರನಾಥರ ಗೋರಾ ಕಾದಂಬರಿ ನನಗೆ ಸ್ಫೂರ್ತಿ ನೀಡಿತು' ಎಂದು ಶರತ್ಚಂದ್ರರು ಸಂದರ್ಶನವೊಂದರಲ್ಲಿ ಹೇಳಿದ್ದಾರೆ.

ಬಾಲಕರಾಗಿದ್ದಾಗ ರವೀಂದ್ರನಾಥರು ಅಭಿನಯದಲ್ಲೂ ಪರಿಣತಿಯನ್ನು ಸಂಪಾದಿಸಿದ್ದರು. ಬೇರೆ ಬೇರೆ ಹಬ್ಬಗಳ ಸಂದರ್ಭಗಳಲ್ಲಿ ಅವರ ಮನೆಯಲ್ಲಿಯೇ ನಾಟಕಗಳನ್ನು ಕೂಡ್ರಿಸಲಾಗುತ್ತಿತ್ತು. ಈ ನಾಟಕಗಳಲ್ಲಿ ರವೀಂದ್ರನಾಥರು ಅಭಿನಯಿಸಿದ್ದರು. ಅನಂತರ ಅವರು ಹಲಕೆಲ ನಾಟಕಗಳನ್ನು ದಿಗ್ದರ್ಶಿಸಿದರು. ರವೀಂದ್ರನಾಥರಿಗೆ ಸುಶ್ರಾವ್ಯವಾದ ಧ್ವನಿ ಇತ್ತು. ಅವರು ಚೆನ್ನಾಗಿ ಹಾಡುತ್ತಿದ್ದರು. 'ಕೋಕಿಲಕಂಠದ ರವೀಂದ್ರ' ಎಂದು ಅವರು ಹಳ್ಳಿಗಳಲ್ಲಿ ಪ್ರಸಿದ್ಧರಾಗಿದ್ದರು. 'ಬಾವುಲ' ಎಂಬ ಜನಪದ ಸಂಗೀತ ಪ್ರಕಾರಕ್ಕೆ ಅವರು ಮಾರುಹೋಗಿದ್ದರು. ಮುಂದೆ ಭಟಿಯಾಲಿ ಸಂಗೀತ ಪ್ರಕಾರ, ಹಿಂದೂಸ್ತಾನಿ ಸಂಗೀತ ಮತ್ತು ಯುರೋಪ್ ಸಂಗೀತ ಪ್ರಕಾರಗಳನ್ನು ಕೂಡಿಸಿ 'ರವೀಂದ್ರಸಂಗೀತ' ತಯಾರಿಸಿದರು. ತಮ್ಮ ಕವಿತೆಗಳಿಗೆ ತಾವೇ 'ಚಾಲ್' ಹಚ್ಚುತ್ತಿದ್ದರು.

ಆ ಕಾಲದಲ್ಲಿಯ ಸುಪ್ರಸಿದ್ಧ ಗಾಯಕ ಕುಂದನಲಾಲ್ ಸೈಗಲ್ ರವೀಂದ್ರರ ಒಂದು ಹಾಡನ್ನು ಹಾಡಿದ್ದರು. ಈ ಹಾಡಿನ 'ಚಾಲ್' ರವೀಂದ್ರರಿಗೆ ಹಿಡಿಸಲಿಲ್ಲ. ಈ ಹಿಂದೆ ಈ ಹಾಡಿಗೆ ಅವರೇ ಸ್ವತಃ 'ಚಾಲ್' ಹಚ್ಚಿದ್ದರು. ಸೈಗಲ್ ಈ 'ಚಾಲ್' ಬಿಟ್ಟು ತಮ್ಮದೇ 'ಚಾಲ್'ನಲ್ಲಿ ಹಾಡಿದ್ದರು. ಸಿಟ್ಟಿಗೆದ್ದ ರವೀಂದ್ರನಾಥರು ಸೈಗಲ್ ಅವರಿಗೆ 'ಇನ್ನು ಮುಂದೆ ನನ್ನ ಹಾಡುಗಳನ್ನು ಹಾಡಬೇಡ' ಎಂದು ತಾಕೀತು ಮಾಡಿದರು.

ರವೀಂದ್ರನಾಥರಿಗೆ ನೃತ್ಯದ ಬಗ್ಗೆಯೂ ವಿಶೇಷವಾದ ಆಸಕ್ತಿ ಇತ್ತು. ಮಣಿಪುರಿ ನೃತ್ಯ ಸಂಪ್ರದಾಯವನ್ನು ಭಾರತದಾದ್ಯಂತ ಪಸರಿಸಿದವರು ಅವರೇ. ಅವರು ಬಾಲಿ ದ್ವೀಪಕ್ಕೆ ಭೇಟಿ ನೀಡಿದಾಗ ಅಲ್ಲಿಯ ಜಾವಾ ಮತ್ತು ಕೇರಂತಿ ನೃತ್ಯ ಪ್ರಕಾರಗಳು ಅವರಿಗೆ ಹಿಡಿಸಿದವು. ಈ ಎರಡೂ ನೃತ್ಯ ಪ್ರಕಾರಗಳು ಭಾರತೀಯ ಮೂಲದವುಗಳು. ರವೀಂದ್ರರು

ಶಾಂತಿನಿಕೇತನದ ನೃತ್ಯ ವಿದ್ಯಾರ್ಥಿಗಳನ್ನು ಬಾಲಿಗೆ ಕಳಿಸಿ ಈ ಎರಡೂ ಪ್ರಕಾರಗಳನ್ನು ಕಲಿತುಕೊಂಡು ಬರಲು ಆದೇಶಿಸಿದರು.

ರವೀಂದ್ರರು ಅನೇಕ ಚಿತ್ರಗಳನ್ನು ಬಿಡಿಸಿದ್ದಾರೆ. ಪ್ಯಾರಿಸ್ ಮತ್ತು ವಿದೇಶಗಳಲ್ಲಿ ಅವು ಪ್ರದರ್ಶಿತವಾದವು. ಪಿಕಾಸೋನಂಥ ಜಗತ್ಪ್ರಸಿದ್ಧ ಚಿತ್ರಕಾರ. ರವೀಂದ್ರನಾಥರ ಚಿತ್ರಗಳನ್ನು ನೋಡಿ ತನ್ನ ಚಿತ್ರಗಳನ್ನು ವಿಕಸನಗೊಳಿಸಿಕೊಂಡ.

'ಜನಗಣಮನ'ವನ್ನು ಐದನೇ ಜಾರ್ಜ್ ಭಾರತಕ್ಕೆ ಬಂದಾಗ ಅವರ ಸ್ವಾಗತಕ್ಕಾಗಿ ಬರೆಯಲಾಯಿತೆಂದು ರವೀಂದ್ರರ ನಿಂದಕರು ಅವರ ಮೇಲೆ ಗೂಬೆ ಕೂರಿಸಲು ಯತ್ನಿಸಿದರು. ಆದರೆ ಇದು ನಿಜವಾಗಿರಲಿಲ್ಲ. ಜಲಿಯನ್ ವಾಲಾಬಾಗ್ ಹತ್ಯಾಕಾಂಡವನ್ನು ವಿರೋಧಿಸಿ ಬ್ರಿಟಿಷ್ ಸರಕಾರ ತನಗೆ ನೀಡಿದ್ದ 'ಸರ್' ಪದವಿಯನ್ನು ವಾಪಸು ನೀಡಿದ್ದ ರವೀಂದ್ರನಾಥರು ಐದನೇ ಜಾರ್ಜ್‌ಗಾಗಿ ಕವಿತೆಯೊಂದನ್ನು ಬರೆಯುತ್ತಾರೆಂದು ನಂಬುವಂತಿರಲಿಲ್ಲ. ಅವರ ಸ್ವಾತಂತ್ರ್ಯ ಪ್ರೀತಿ, ಅಭಿಮಾನವನ್ನು ಖುದ್ದು ಗಾಂಧೀಜಿಯವರೇ ಪ್ರಶಂಸಿಸಿದ್ದರು. ಐದನೇ ಜಾರ್ಜ್‌ಗೆ ಸ್ವಾಗತ ಗೀತೆ 'ಜುಗ್ ಜುಗ್ ಜೀವೋ ಮೇರೆ ಪಾತಶಹಾ' ಎಂಬ ಅಜ್ಞಾತಕವಿ ಬರೆದ ಹಾಡಿನಿಂದಾಯಿತೆಂದು ಆಗಿನ ಇತಿಹಾಸ ಹೇಳುತ್ತದೆ.

●

---

## ಮಹಾಕವಿ ಅಲ್ಲ, ಶ್ರೇಷ್ಠ ಕವಿ!



**ರ**ವೀಂದ್ರರು ಮುಖ್ಯವಾಗಿ ಭಾವಕವಿ. ಅವರ ಪ್ರತಿಭೆ ಪ್ರಧಾನತಃ ಭಾವಗೀತಾತ್ಮಕವಾದುದು; ಮಹಾಕಾವ್ಯಾತ್ಮಕವಾದುದಲ್ಲ. ಅವರು ತಮ್ಮ ಲಘುಕೃತಿಗಳಲ್ಲಿ ಮುಟ್ಟಿರುವ ಪರಾಕಾಷ್ಠತೆಯನ್ನೂ ತಮ್ಮ ದೀರ್ಘ ಕೃತಿಗಳಲ್ಲಿ ಮುಟ್ಟದಿರುವುದಕ್ಕೂ ಅದೇ ಕಾರಣ. ಅಲ್ಲದೆ ಅವರು ಮಹಾಕಾವ್ಯಗಳ ರಚನೆಯ ಗೋಜಿಗೆ ಹೋಗದಿರುವುದಕ್ಕೂ ಅದೇ ಕಾರಣವೆಂದು ತೋರುತ್ತದೆ. ಅವರನ್ನು "ಮಹಾಕವಿಯಾಗಿರುವ ಶ್ರೇಷ್ಠ ವ್ಯಕ್ತಿ" ಎಂದು ವರ್ಣಿಸುವುದಕ್ಕಿಂತಲೂ "ಶ್ರೇಷ್ಠ ಕವಿಯಾಗಿರುವ ಮಹಾವ್ಯಕ್ತಿ" ಎಂದು ವರ್ಣಿಸಿದರೆ ಹೆಚ್ಚು ಸತ್ಯವಾಗಿ ತೋರುತ್ತದೆ.

ಇಲ್ಲಿ ಮತ್ತೊಂದು ವಿಷಯವನ್ನು ಸೂಕ್ಷ್ಮವಾಗಿ ಸೂಚಿಸಿದರೆ ಮೇಲಿನ ಇತ್ಯರ್ಥಕ್ಕೆ ಇನ್ನಷ್ಟು ಪುಷ್ಟಿ ದೊರೆಯುತ್ತದೆ. ಅದೇನೆಂದರೆ, ರವೀಂದ್ರರ ವಿರಾಟ್ ಪ್ರತಿಭೆಯನ್ನು ಸಂಕುಚಿತವೂ ಏಕಮುಖಿ ಮಾತ್ರವೂ ಆದ ಒಂದು ತತ್ತ್ವಪಂಜರದಲ್ಲಿ ಸಂಚರಿಸುವಂತೆ ಮಾಡಿದ ಹೊಣೆ ಬ್ರಾಹ್ಮಸಮಾಜಕ್ಕೆ ಸೇರಿದುದು. ಆ ಸಮಾಜದವರು ಉಪನಿಷತ್ತುಗಳನ್ನು ಮುಖ್ಯವಾಗಿ ಒಪ್ಪಿಕೊಂಡು, ಹಿಂದೂ ಸಾಹಿತ್ಯ ಸಂಸ್ಕೃತಿಯ ಆಕರಗಳಾದ ಪುರಾಣಗಳನ್ನು ಮತೀಯ ಕಾರಣಕ್ಕಾಗಿ ತಿರಸ್ಕರಿಸಿದರು. ಆ ಸಮಾಜದ ಶ್ರದ್ಧೆಯಲ್ಲಿಯೆ ಚಿಕ್ಕಂದಿನಿಂದಲೂ ಸಾಣೆಗೊಂಡ ರವೀಂದ್ರರ ಮತಿ ತನ್ನ ಪ್ರತಿಭೆಗೂ ಆ ಶೃಂಖಲೆಗಳನ್ನು ತೊಡಿಸಿತು. ಹಾಗಾಗಿ ಮಹಾಕಾವ್ಯಾತ್ಮಕವೂ ಆಗಬೇಕಾಗಿದ್ದ ಆ ಪ್ರತಿಭೆ ಭಾವಗೀತಾತ್ಮಕ ಮಾತ್ರವಾಗಿಯೆ ಪರ್ಯವಸಾನ ಹೊಂದಬೇಕಾಯಿತು. ರವೀಂದ್ರರು ರಾಮಾಯಣ, ಮಹಾಭಾರತ ಮತ್ತು ಇತರ ಪುರಾಣಗಳಿಂದ ವಸ್ತುಗಳನ್ನು ಸ್ವೀಕರಿಸಿ ಹಿಂದೂ ಸಂಸ್ಕೃತಿಯ ನಂದಾದೀಪವಾಗುವಂತೆ ಯಾವ ಮಹಾಕಾವ್ಯವನ್ನೂ ಬರೆಯಲಾರದೆ ಹೋದರು.

– ಕೆ.ವಿ. ಪುಟ್ಟಪ್ಪ



ಟಾಗೋರ್ ೧೫೦

# ರವೀಂದ್ರನಾಥ ಟಾಗೋರ್ ಹಾಗೂ ವಾಸ್ತವ

**–ಸುರೇಂದ್ರ ಕೌಲಗಿ**

ಭಾರತಕ್ಕೆ ಏನೆಲ್ಲ ಸಾಂಸ್ಕೃತಿಕ ವೈಭವವಿದೆಯೋ, ಏನೆಲ್ಲ ಪ್ರಾಚೀನತಮ ಜ್ಞಾನವಿದೆಯೋ ಅದರ ಪ್ರತಿನಿಧಿಯಾಗಿ ನೊಬೆಲ್ ಪ್ರಶಸ್ತಿ ಪುರಸ್ಕೃತ ರವೀಂದ್ರ ಟಾಗೋರರಿದ್ದರು. ಟಾಗೋರ್ ಗತಿಸಿ ಏಳು ದಶಕ ದಾಟಿದ್ದರೂ ಸಹ ತಮ್ಮ ಅಪೂರ್ವವಾದ ಸಾಹಿತ್ಯಕೃತಿಗಳ ಕಾರಣದಿಂದಾಗಿ ಭಾರತೀಯರ ಮಾನಸದಲ್ಲಿ ಚಿರಸ್ಥಾಯಿಯಾದ ಸ್ಥಾನವನ್ನು ಪಡೆದಿದ್ದಾರೆ.

ಕವಿಗಳು ದ್ರಷ್ಟಾರರೆಂಬ ಮಾತು ರವೀಂದ್ರರಿಗೆ ಶತಶ ಅನ್ವಯಿಸುತ್ತದೆ. ಅವರು ತಮ್ಮ ಅಪಾರ ಸಂಖ್ಯೆಯ ಕವಿತೆ ಕಾದಂಬರಿಗಳ ಮೂಲಕ ಮಾನವಕುಲಕ್ಕೆ ಕೊಟ್ಟಿರುವ ಸಂದೇಶವು ೨೧ನೇ ಶತಮಾನದ ಈ ಭರಾಟೆಯ ಕಾಲದಲ್ಲಿಯೂ ಸ ಪ್ರಳಯಕಾಲದಲ್ಲಿ ಆಲದ ಎಲೆಯ ಮೇಲೆ ತೇಲಿಬರುವ ಕೃಷ್ಣನಂತೆ ನಮ್ಮ ಬಳಿಗೆ ಬರುತ್ತದೆ. ಆದರೆ ಅದನ್ನು ಎತ್ತಿಕೊಂಡು ನಲಿದಾಡುವ ಭಾಗ್ಯ ನಮ್ಮದಾಗಬೇಕಾಗಿದೆಯಷ್ಟೇ. ಆದರೆ ಅ ಭಾಗ್ಯ ಇಂದಿನ ಸ್ಪೀಡ್ ಮತ್ತು ಗ್ರೀಡ್ ಯುಗದಲ್ಲಿ ಸಾಧ್ಯವಿಲ್ಲವೆಂದು ಯಾರಿಗಾದರೂ ಅನಿಸುತ್ತದೆ. ಎಲ್ಲಕ್ಕಿಂತಲೂ ದುರ್ದೈವದ ಸಂಗತಿಯೆಂದರೆ ಉಪನಿಷತ್ತಿನ ಸಚಿತ್ರ ಸಂಪುಟದಂತಿದ್ದ ರವೀಂದ್ರರಂಥ ಇನ್ನೊಬ್ಬ ಕವಿ ಈ ಶತಮಾನದಲ್ಲಿ ಹುಟ್ಟಲಾರ ಏಕೆಂದರೆ ವಿಶ್ವಮಟ್ಟದ ಕವಿಯೊಬ್ಬ ನಾಡಿನ ಪುಣ್ಯದಿಂದ ಹುಟ್ಟುತ್ತಾನಾದರೂ ಅಂಥ ಕವಿಯನ್ನು ಅಂತಿಮವಾಗಿ ರೂಪಿಸುವಂಥದ್ದು ಆ ನಾಡಿನ ಜನರೂ ಮತ್ತು ಜೀವನವೂ ಎಂ ವಾಸ್ತವ ಸಂಗತಿಯನ್ನು ಮರೆಯಲಾಗದು. ಆದರೆ ಈಗ ನಮ್ಮ ಸಮಾಜದಲ್ಲಿ ವಿಶ್ವಕವಿ ರವೀಂದ್ರನಾಥರಂಥವರನ್ನು ಸೃಷ್ಟಿಸು

ಪರಿಪಾಠ ಇಲ್ಲವಾಗಿದೆ. ಇಂದಿನ ಪರಿಸರ ಭೂಮಿಯ ಮಣ್ಣಿನ ಕಣಕಣಗಳಲ್ಲಿರುವ ಸತ್ಯಂ-ಶಿವಂ-ಸುಂದರಂನ ಸಾಂಸ್ಕೃತಿಕ ಪ್ರಭಾವವನ್ನು ಹೊತ್ತುಕೊಂಡು ಬರುವ ಸಹಜ ಕವಿ, ಮುಗ್ಧಕವಿ, ಸೃಷ್ಟಿಕವಿ, ರಾಷ್ಟ್ರಕವಿಯೊಬ್ಬ ಹುಟ್ಟಿಬರಬಲ್ಲನೇ ಎಂಬುದು ಭಾರತೀಯರ ಕೊರಗು. ಏಕೆಂದರೆ ಇಂದಿನ ಜೀವನದ ಓಘ ನಗರದತ್ತ. ಹಳ್ಳಿಗಳ ಸಮಾಧಿಯ ಮೇಲೆ ನಗರದ ಸೌಧಗಳ ನಿರ್ಮಾಣವಾಗುತ್ತಿರುವಾಗ "ದೇವರು ಹಳ್ಳಿಗಳನ್ನು ಸೃಷ್ಟಿಸಿದ, ನಗರವನ್ನು ಮಾನವ" ಎಂದು ರವೀಂದ್ರನಾಥರು ಹಾಡಿದಂಥ ಭಾವನೆಯ ಅರ್ಥವುಳ್ಳ ಕವನಗಳನ್ನು ಇಂದಿನ ಕವಿಗಳು ಹಾಡಬಲ್ಲರೆ? ಏಕೆಂದರೆ ಇಂದಿನ ಬಹಳಷ್ಟು ಪ್ರಬುದ್ಧ ಕವಿಗಳೂ, ಚಿಂತಕರೂ ಗ್ರಾಮಗಳಲ್ಲಿಲ್ಲ. ಗ್ರಾಮಗಳಲ್ಲಿ ಒಂದು ವೇಳೆ ಇದ್ದರೂ ಅವರ ಜೀವನ ನಗರಾಭಿಮುಖವಾಗಿದೆ. ಇಂಥ ಪರಿಸ್ಥಿತಿಯಲ್ಲಿ ರವೀಂದ್ರರು ಗ್ರಾಮಿಗರ ಜೀವನದಲ್ಲಿ ತರಬಯಸಿದ್ದ ಸಂತೋಷವನ್ನಾದರೂ ತರಬಲ್ಲರು?

ರವೀಂದ್ರನಾಥ ಟಾಗೋರರು ತಮ್ಮ ಮಾತೃಭಾಷೆ ಮತ್ತು ಪ್ರದೇಶ ಭಾಷೆ ಬಂಗಾಳಿಯನ್ನು ಬಹುವಾಗಿ ಪ್ರೀತಿಸುತ್ತಿದ್ದರು. ಮಕ್ಕಳಿಗೆ ವಿದ್ಯಾಭ್ಯಾಸ ಅವರವರ ಮಾತೃಭಾಷೆಯಲ್ಲಿಯೇ ದೊರೆಯಬೇಕೆಂದು ಬಯಸಿದ್ದರು. ರವೀಂದ್ರರ ಜೀವನ ರೂಪಿತವಾದದ್ದೇ ಬಂಗಾಳಿಯಲ್ಲಿ. ರವೀಂದ್ರರೆಂದರೇನೆ ಬಂಗಾಳಿ, ಬಂಗಾಳಿಯೆಂದರೆ ರವೀಂದ್ರರು ಎಂಬಂಥ ಸಮೀಕರಣವನ್ನು ಅವರು ಭಾಷೆ ಮತ್ತು ವ್ಯಕ್ತಿಯ ಮಧ್ಯೆ ನಿರ್ಮಿಸಿದ್ದರು. ಆದರೆ ನಮ್ಮನ್ನು ಈಗ ಚಿಂತೆಗೀಡು ಮಾಡಿರುವ ಸಂಗತಿಯೇ ಇದು. ಇಂಥ ಸಮೀಕರಣ ಈಗ ಪ್ರಚಾರದಲ್ಲಿಲ್ಲವಲ್ಲ ಎಂಬುದು ಸ್ವತಂತ್ರರಾದ ಭಾರತೀಯರು ಇದುವರೆಗೂ ಈ ಸಮೀಕರಣವನ್ನು ಅರ್ಥಮಾಡಿಕೊಂಡಿರದೇ ಇರುವುದು.

ಇಂದಿಗೂ ಸಹ ಆಧುನಿಕತೆಯ ಹೆಸರಿನಲ್ಲಿ ದೇಶದ ಮುಗ್ಧ ಮಕ್ಕಳ ಕೊರಳಿಗೆ ಪರಭಾಷೆಯ ಬೀಸುಕಲ್ಲನ್ನು ಕಟ್ಟಿ ಅವರನ್ನು ಅರ್ಥಹೀನ ಜೀವನ ಸಾಗರದಲ್ಲಿ ಮುಳುಗಿಸುತ್ತಿದ್ದೇವೆ. ರವೀಂದ್ರರು ಮಕ್ಕಳನ್ನು ಇಂಥ ದುಷ್ಟ ಪದ್ಧತಿಯಿಂದ ಬಿಡುಗಡೆ ಮಾಡಲೆಂದೇ ಶಾಂತಿನಿಕೇತನ ಮತ್ತು ವಿಶ್ವಭಾರತಿಯಂಥ ವಿದ್ಯಾಸಂಸ್ಥೆಗಳನ್ನು ಸ್ಥಾಪಿಸಿದರು. ಈ ವಿದ್ಯಾಕೇಂದ್ರಗಳನ್ನು ಸ್ಥಾಪಿಸುವ ಮೊದಲು ಅವರು ಬಾಲಕರಾಗಿದ್ದಾಗ ಅನುಭವಿಸಿದ್ದ ಶಾಲೆಯೆಂಬ ಸೆರೆಯ ಅನುಭವಗಳ ನೆನಪು ಅವರನ್ನು ಕಾಡಿತ್ತು. ಈ ಸಂಗತಿಯನ್ನು ರವೀಂದ್ರರ ಮಾತುಗಳಲ್ಲಿಯೇ ಕೇಳೋಣ:

> "ಹೊಸಕಾಲದ ವಿದ್ಯಾಭ್ಯಾಸ ಎನ್ನುವುದು ವಿದ್ಯಾರ್ಥಿಗಳಲ್ಲಿ ಸುಪ್ತವಾಗಿ ಅಡಗಿರುವ ಪ್ರತಿಭೆಯನ್ನು ಹೊರತೆಗೆಯಲು ಸಹಾಯ ಮಾಡದೆ, ಅವರಿಗೆ ಬೇಡವಾದುದನ್ನು ಒಳಕ್ಕೆ ಗಿಡಿಯುವ ಸಾಧನವಾಗಿದೆ. ಪಾಠಶಾಲೆಗಳು ನಿಜವಾದ ವಜ್ರಗಳನ್ನು ಹಾಳುಮಾಡಿ ಕೃತಕ ವಜ್ರಗಳನ್ನು ತಯಾರಿಸುವ ಕುಲುಮೆಗಳಾಗಿವೆ."

ತಾವು ಅನುಭವಿಸಿದ ಶಾಲೆಯೆಂಬ ಸೆರೆಮನೆ ಭವಿಷ್ಯದ ಮಕ್ಕಳಿಗೆ ತಪ್ಪಲೆಂಬ ಅವರ ಹಾರೈಕೆಯೇ ವಿಶ್ವನಿಕೇತನ ಮತ್ತು ವಿಶ್ವಭಾರತಿಗಳ ರೂಪದಲ್ಲಿ ಮೂರ್ತಿವೆತ್ತಿದವಾದರೂ ನಮ್ಮ ದೇಶದ ಬಹುಸಂಖ್ಯಾತ ಶಾಲೆ-ಕಾಲೇಜುಗಳು-ವಿಶ್ವವಿದ್ಯಾನಿಲಯಗಳು ಇಂದಿಗೂ ಬಹುಪಾಲು ಮಕ್ಕಳಿಗೆ ಸೆರೆಮನೆಯಾಗಿಯೇ ಇವೆ. ದುಃಖದ ಸಂಗತಿಯೆಂದರೆ ಈ ವಿದ್ಯಾಕೇಂದ್ರಗಳನ್ನು ಇನ್ನೂ ಹೆಚ್ಚು ಹೆಚ್ಚಾಗಿ ಸೆರೆಮನೆಗಳನ್ನಾಗಿ ಹೇಗೆ ಮಾಡಬೇಕೆಂಬುದರ ಕಡೆಗೇ ಎಲ್ಲರ ಗಮನ ಮತ್ತು ಪ್ರಯತ್ನಗಳಿವೆಯೇ ಹೊರತು ಮಕ್ಕಳನ್ನು ಅವುಗಳಿಂದ ಬಿಡುಗಡೆ ಮಾಡುವ ಯೋಚನೆಯೇ ಎಲ್ಲಿಯೂ ಇಲ್ಲವಾಗಿದೆ. ರವೀಂದ್ರರ ಜೀವನವೆಲ್ಲ

ಅವರ ಕನಸು ಮತ್ತು ಭಾವನೆಗಳೆಲ್ಲ ಹಾಗೂ ವಿಚಾರಗಳೆಲ್ಲ ಜೀವನದ ಪ್ರಫುಲ್ಲ ಅರಳುವಿಕೆ
ಸಂಬಂಧಿಸಿದ್ದಾಗಿದೆ. ಅವರು ಯಾಂತ್ರಿಕ ರೀತಿಯ ಜೀವನವನ್ನು, ಸದ್ದುಗದ್ದಲವನ್ನು
ಬಹುವಾಗಿ ತಿರಸ್ಕರಿಸಿದ್ದರು. ಆದ್ದರಿಂದಲೇ ಅವರಿಗೆ ತಮ್ಮ ಸುತ್ತಲಿನ ಪ್ರತಿಯೊಂದು
ಜೀವಿಯಲ್ಲಿ, ವಸ್ತುವಿನಲ್ಲಿ ಅರ್ಥಶೋಧಿಸಲು, ಸೌಂದರ್ಯ ಕಾಣಲು ಸಾಧ್ಯವಾಯಿತು.
ಇಂದು ಏಷ್ಯಾ ಖಂಡದಲ್ಲೇ ದೊಡ್ಡದೆಂದು ಖ್ಯಾತಿಯನ್ನು ಪಡೆದಿರುವ ಕೊಲ್ಕತ್ತ ನಗರ
ಹಿಂದೆ ಎಷ್ಟು ಶಾಂತ ಮತ್ತು ಎಷ್ಟು ಸಜೀವವಾಗಿತ್ತೆಂಬುದನ್ನು ರವೀಂದ್ರರು ಹೀಗೆ
ಬರೆದಿದ್ದಾರೆ:

> "ಅಂದಿನ ಕೋತಿ ಆಡಿಸುವವರೂ, ಕರಡಿ ಕುಣಿಸುವವರೂ ಈಗ ಕಾಣಿಸುತ್ತಿಲ್ಲ. ಇಂದ್ರಜಾಲಿಗರೂ, ಯಕ್ಷಿಣಿಗಾರರೂ ಅವರ ತಮ್ಮಟೆಯ ಸದ್ದು ಇಂದಿನ ಬೀದಿಗಳಲ್ಲಿಲ್ಲ. ಅದರ ಬದಲಿಗೆ ಅವಸರವಾಗಿ ಧಾವಿಸುವ ಜನಜಂಗುಳಿಯೂ, ಲಾರಿ, ಕಾರು, ಬಸ್ಸು, ಟ್ರಾಮುಗಳ ಸದ್ದು ತುಂಬಿದೆ. ಹೀಗೆ ಒಂದೇ ಎರಡೇ? ಯಾವುದಕ್ಕೆ ಹೋಲಿಸಿದರೂ ಯಾವುದನ್ನು ನೆನಪಿಸಿದರೂ ಅಂದಿನ ಸೊಗಸು ಕಾಣಬರದು. ಅಂದಿನ ದಿನಗಳೆಂದರೆ ಇವತ್ತು ಮರೆತುಹೋದ ಕಥೆಗಳಂತಾಗಿದೆ. ಆ ದಿನಗಳ ವರ್ಣಸಂಭ್ರಮವಾಗಲೀ, ಸ್ವರಸಂಚಯವಾಗಲೀ ಇಂದು ಕಾಣಿಸುವುದಿಲ್ಲ. ಕೇಳಿಸುವುದಿಲ್ಲ. ದಿನಗಳೊ ಶುಷ್ಕ, ರಾತ್ರಿಗಳೊ ನಿಸ್ಸಾರ. ಇಂದಿನ ಕಲ್ಕತ್ತೆಯನ್ನು ನೋಡಿ ಶತಮಾನಗಳ ಹಿಂದಿನದನ್ನು ನೆನೆದಾಗ ಅದೇ ಒಂದು ಬೇರೆಯಾದ, ಮತ್ತೆ ಬಾರದ ಲೋಕವೆಂಬ ಅನುಭವವಾಗುತ್ತದೆ."

ರವೀಂದ್ರರ ಈ ಮಾತು ಇಂದಿನ ಕೊಲ್ಕತ್ತ ನಗರಕ್ಕೆ ಮಾತ್ರ ಅನ್ವಯಿಸುವುದಿಲ್ಲ
ದೇಶದ ಎಲ್ಲಾ ಮಹಾ ನಗರಗಳಿಗೂ ಅನ್ವಯಿಸುತ್ತದೆ. ಹಳ್ಳಿಗಳು ಬಡವಾಗುತ್ತಿವೆ. ನಗರಗಳ
ಶ್ರೀಮಂತವಾಗುತ್ತಿವೆ. ನಗರಕ್ಕೆ ಜನರ ವಲಸೆ ದಿನೇ ದಿನೇ ಹೆಚ್ಚಾಗುತ್ತಿದೆ. ಈ ಸಮಸ್ಯೆಯನ್ನು
ಪರಿಹರಿಸಲಿಕ್ಕಾಗಲೀ, ತಡೆಯುವುದಕ್ಕಾಗಲೀ, ಕಳೆದ ಹತ್ತು ಪಂಚವಾರ್ಷಿಕ ಯೋಜನೆಗಳ
ವಿಫಲವಾಗಿವೆ; ಮುಂದಿನ ಯೋಜನೆಗಳೂ ಸಫಲಗೊಳ್ಳುವವೆಂಬ ಯಾವ ಸೂಚನೆಗಳು
ಕಾಣುತ್ತಿಲ್ಲ. ಹೀಗಿರುವಾಗ ರವೀಂದ್ರರ ಮತ್ತು ಇತರ ಕವಿಗಳ ಕೋಮಲ ಭಾವನೆಗಳ
ಯಂತ್ರದ ಕರ್ಕಶ ಧ್ವನಿಯಲ್ಲಿ ಅಡಗಿ ಹೋದರೆ ಯಾರು ಕಾರಣರು? ಇಂಥ ಪರಿಸ್ಥಿ
ಜಗಕ್ಕೆ ಬರುವುದೆಂದರಿತೋ ಏನೋ ರವೀಂದ್ರರು ಅಂದೇ ಈ ರೀತಿ ಬಿಸುಸುಯ್ದಿದ್ದಾರೆ.

**ಬೆಳಕು ಹರಿದಿಹುದು**
**ದೀಪ ಅಳಿದಿಹುದು**
**ನನ್ನ ಕತ್ತಲೆ ಗೂಡಲಿ**
**ಕರೆಬಂದಿಹುದು ಸಖರೆ**
**ಬೀಳ್ಕೊಡಿರೆನ್ನನು**

ರವೀಂದ್ರರು ಪ್ರಕೃತಿ ಪ್ರೇಮಿಯಾಗಿದ್ದಷ್ಟೇ ಅಲ್ಲ ದೇಶಪ್ರೇಮಿಯೂ ಆಗಿದ್ದರು. ಆದ
ಅವರ ದೇಶಪ್ರೇಮ ಎಂದೂ ಕುರುಡಾಗಿರಲಿಲ್ಲ. ಅವರ ದೇಶಪ್ರೇಮ ವರ್ತುಲೋತ್ತರವಾ
ಬೆಳೆಯುತ್ತಾ ವಿಶ್ವಮಾನವೀಯತೆಯತ್ತ ಸಾಗುತ್ತಿತ್ತು. ಅದ್ದರಿಂದ ೧೯೨೦ರಲ್ಲಿ ಗಾಂಧೀ
ಪ್ರಾರಂಭಿಸಿದ್ದ ಅಸಹಕಾರ ಚಳುವಳಿ ಅಂದೋಲನ ರವೀಂದ್ರರಿಗೆ ಇಷ್ಟವಾಗಲಿಲ್ಲ. ಅ
ಅಲ್ಲ ಅದನ್ನು ವಿರೋಧಿಸಿದರೂ ಕೂಡ. ಸ್ವದೇಶಿ ಚಳವಳಿ ಹೇಗೆ ಭಾರತೀಯರ ಮನಸ್ಸ
ಬುದ್ಧಿಯನ್ನು ಮತ್ತು ಹೃದಯವನ್ನು ವಿಶ್ವಸಂಪರ್ಕದಿಂದ ದೂರ ಮಾಡುತ್ತದೆಂಬುದ

ಗಾಂಧೀಜಿಯವರಿಗೆ ತಿಳಿಸಲು ಪ್ರಯತ್ನಿಸಿದರು. ದೇಶದ ಸ್ವಾತಂತ್ರ್ಯದ ಇತಿಹಾಸದಲ್ಲಿ ಅಸಹಕಾರ ಚಳುವಳಿಗೆ ಬಹು ಮಹತ್ವದ ಸ್ಥಾನವಿದೆ. ಈ ಚಳುವಳಿಯ ಪ್ರಭಾವ ದೇಶದ ಇಡೀ ಜನಮಾನಸದ ಮೇಲೆ ಪ್ರಭಾವ ಬೀರುತ್ತ ಚಳುವಳಿಯನ್ನು ಗಾಂಧೀ ಮತ್ತು ರವೀಂದ್ರರು ತಮ್ಮ ತಮ್ಮ ನೆಲೆಯಲ್ಲಿ ಅರ್ಥೈಸಿಕೊಂಡರಾದರೂ ದೇಶದ ಹಿತದ ಪ್ರಶ್ನೆ ಬಂದಾಗ ಅವರಿಬ್ಬರ ವಿಚಾರಗಳ ಪ್ರಯೋಗವುಂಟಾಯಿತು.

ಅಸಹಕಾರ ಚಳುವಳಿಯ ಸಂದರ್ಭದಲ್ಲಿ ಗಾಂಧೀಜಿ ದೇಶದ ಯುವಕರಿಗೆ ಇಂಗ್ಲೀಷರ ಬಹಿಷ್ಕಾರಕ್ಕೆ ಕರೆಕೊಟ್ಟಿದ್ದರು. ಆಗ ಕೆಲವು ವಿದ್ಯಾರ್ಥಿಗಳು ಬಂದು ರವೀಂದ್ರರನ್ನು ಭೇಟಿಮಾಡಿ ಈ ಬಗ್ಗೆ ಅವರ ಅಭಿಪ್ರಾಯವನ್ನು ಕೇಳಿದಾಗ ಟಾಗೋರರು ಶಾಲಾ ಬಹಿಷ್ಕಾರವನ್ನು ವಿರೋಧಿಸಿದ್ದರು. ನಂತರ ಆ ಯುವಕರಿಗೆ ಅನುಮಾನ ಉಂಟಾಗಿದೆ ಎಂದು ಭಾವಿಸಿ ಅವರಿಗೆ ಹೇಳಿದರು. "ಈ ಆಂದೋಲನ ಜನಪ್ರಿಯಗೊಳ್ಳುವ ಎಷ್ಟೋ ಮುಂಚೆ ಒಂದು ಸ್ವದೇಶಿ ಮಳಿಗೆ ಪ್ರಾರಂಭಿಸಲು ೧೦೦೦೦ ರೂಪಾಯಿ ಕೊಟ್ಟಿದ್ದೆ. ಆಗ ನನ್ನದೆಂಬ ೫ ರೂಪಾಯಿ ಸಹ ಇರಲಿಲ್ಲ. ಅದರಿಂದಾಗಿ ನಾನು ಕಡುಬಡತನ ಮತ್ತು ದಿವಾಳಿತನ ಅನುಭವಿಸಿದೆ." ಹೀಗೆ ರವೀಂದ್ರರ ದೇಶಭಕ್ತಿ ಕಾವ್ಯದ ಮೇಲಿನ ಪ್ರೇಮಕ್ಕಿಂತಲೂ ಹೆಚ್ಚಾಗಿತ್ತು. ರವೀಂದ್ರರು ಹೇಳಿದ ಈ ಮಾತುಗಳು ಅವರ ದೇಶಾಭಿಮಾನದ ಕೆಚ್ಚನ್ನು ತೋರುತ್ತದೆ. "ಸ್ವಾವಲಂಬನೆ ಇಲ್ಲದ ಯಾವ ಚಳುವಳಿಯೂ ಅರ್ಥಶೂನ್ಯ. ಬೇಡುವವನು ವ್ಯಕ್ತಿಯಾದರೇನು, ದೇಶವಾದರೇನು? ಬೇಡುವುದು ಭಿಕ್ಷೆಯೇ! ನಮಗೆ ಬೇಕಾದುದನ್ನೆಲ್ಲ ಬ್ರಿಟೀಷರಿಂದ ಪಡೆಯಬಹುದು. ಆದರೆ ಸ್ವಾವಲಂಬನೆಯನ್ನು ಬೇಡುವುದು ಸಾಧ್ಯವೇ?"

ರವೀಂದ್ರರ ಸಾಹಿತ್ಯ ಅವರ ಜೀವಿತ ಕಾಲದಲ್ಲಿಯೇ ಜಗದ್ವಿಖ್ಯಾತವಾಗಿತ್ತು. ಆಗ ಇಟಲಿ ದೇಶದ ಸ್ವಾಧಿಕಾರಿಯೂ ಸಹ ರವೀಂದ್ರರ ಸಾಹಿತ್ಯವನ್ನು ಇಟಲಿ ಭಾಷೆಯಲ್ಲಿಯೇ ಓದಿ ಪ್ರಭಾವಗೊಂಡಿದ್ದ. ರೋಮ್ ನಗರಕ್ಕೆ ರವೀಂದ್ರರು ಬಂದಾಗ ಸ್ವತಃ ಮುಸಲೋನಿಯೇ ಸ್ವಾಗತಿಸಿ ಅವರ ವ್ಯಕ್ತಿತ್ವ ಚಿಂತನೆಗೆ ಮಾರುಹೋಗಿ 'ನಾನೊಬ್ಬ ನಿಮ್ಮ ಇಟಾಲಿಯನ್ ಅಭಿಮಾನಿ' ಎಂದು ಹೇಳಿದ್ದ.

ರವೀಂದ್ರರ ದೇಶಪ್ರೇಮ ಎಷ್ಟು ಗಾಢವಾಗಿತ್ತೆಂದರೆ ೧೯೧೯ರಲ್ಲಿ ಜಲಿಯನ್ ವಾಲಾಬಾಗ್ ಹತ್ಯಾಕಾಂಡ ನಡೆದಿದ್ದರಿಂದ ರವೀಂದ್ರರು ತಮಗೆ ಇಂಗ್ಲೀಷ್ ಸರ್ಕಾರ ಕೊಟ್ಟಿದ್ದ 'ನೈಟ್‌ಹುಡ್' ಪ್ರಶಸ್ತಿಯನ್ನು ಹಿಂದಿರುಗಿಸುತ್ತಾ ಗೌರವ ಪದಕಗಳು ನಾಚಿಕೆಗೀಡಾಗುವ ಕಾಲ ಬಂದಿದೆಯೆಂದೂ, ಎಲ್ಲ ಗೌರವಗಳನ್ನು ತ್ಯಜಿಸಿ ಮೂಕವೇದನೆಯಲ್ಲಿ ನರಳುತ್ತಿರುವ ತಮ್ಮ ದೇಶಬಾಂಧವರೊಂದಿಗೆ ನಿಲ್ಲುವುದಾಗಿಯೂ ವೈಸ್‌ರಾಯ್‌ಗೆ ಬರೆದರು. ಇಂದು ನಮ್ಮ ದೇಶದಲ್ಲಿ ಬಡತನ, ನಿರುದ್ಯೋಗ, ನಿರಕ್ಷರತೆ, ಅಸಮಾನತೆ, ಧರ್ಮಾಂಧತೆ, ಜಾತಿ ವಿದ್ವೇಷ, ಹಿಂಸೆ ಇತ್ಯಾದಿಗಳು ತುಂಬಿರುವಾಗ ಭಾರತರತ್ನ, ಭಾರತಭೂಷಣ, ಭಾರತ ವಿಭೂಷಣ ಪದವಿಗಳು ಎಷ್ಟು ಅರ್ಥವಿಹೀನವೆಂದು ತೋರುತ್ತದೆ. ಆದರೂ ಸಹ ಇಂತಹ ಪದವಿಗಳನ್ನು ಸರ್ಕಾರ ಕೊಡುತ್ತದೆ. ಜನರು ಸ್ವೀಕರಿಸುತ್ತಾರೆ. ಈ ವಿಷಯದಲ್ಲಿ ರವೀಂದ್ರನಾಥ್ ಟಾಗೋರರು ನಮಗೆ ಉತ್ತಮ ಉದಾಹರಣೆಯಾಗಬಲ್ಲರು. ಆದರೆ ಇದನ್ನು ಅರಿಯಬಲ್ಲವರಾರು? ಇದೆಲ್ಲಕ್ಕಿಂತ ಹೆಚ್ಚಾಗಿ ಅವರು ಬರೆದಿರುವ ರಾಷ್ಟ್ರಗೀತೆಯಲ್ಲಿನ ಆಶಯದಂತೆ ದೇಶದ ಸಮಾಜವನ್ನು ರೂಪಿಸಬೇಕಾಗಿದೆ. ಹಾಗೇನಾದರೂ ಸಾಧ್ಯವಾದಲ್ಲಿ ಭಾರತ ಪ್ರಪಂಚದ ಮಹಾನ್ ಶಕ್ತಿಯಾಗಿ ಹೊರಹೊಮ್ಮುವುದರಲ್ಲಿ ಸಂದೇಹವಿಲ್ಲ.

●




# ಕವಿ ರವೀಂದ್ರರೂ ಕರ್ನಾಟಕವೂ

–ಡಾ. ಡಿ.ಎಸ್. ಕರ್ಕಿ

ಬಂಗಾಲದ ರವೀಂದ್ರರು ಭಾರತದ ಕವೀಂದ್ರರು. ಬಂಗಾಲವು ಹೇಗೋ ಹಾಗೆ ಕರ್ನಾಟಕವೂ ಭಾರತ ದೇಶದ ಒಂದು ಅಂಗ. ಸಂಸ್ಕೃತಿಯ ದೃಷ್ಟಿಯಿಂದಂತೂ ಈ ಮಾತು ಇನ್ನೂ ಯಥಾರ್ಥವಾದುದು. ಉತ್ತರ ಭಾರತದಲ್ಲಿರುವ ಬಂಗಾಲದಿಂದ ದಕ್ಷಿಣ ಭಾರತದಲ್ಲಿರುವ ಕರ್ನಾಟಕವು ಒಂದಿಷ್ಟು ದೂರವಾಗಿದ್ದರೂ ಅವೆರಡರಲ್ಲಿ ಭೌಗೋಲಿಕ ಸಾಮ್ಯ ಸಾಕಷ್ಟು ಉಂಟು. ಬಂಗಾಲಕ್ಕೆ ಸಮುದ್ರ ತೀರವಿರುವಂತೆ ಕನ್ನಡನಾಡಿಗೂ ಇದೆ. ವಂಗದೇಶದ ಉತ್ತರದಲ್ಲಿ ಹಿಮಾಲಯ ಪರ್ವತವು ಹರಡಿಕೊಂಡಿದ್ದರೆ ಕನ್ನಡ ನಾಡಿನ ಪಶ್ಚಿಮದಲ್ಲಿ ಸಹ್ಯಾಚಲವು ಚಾಚಿಕೊಂಡಿದೆ. ಗಂಗಾ ಬ್ರಹ್ಮಪುತ್ರಗಳ ಪ್ರವಾಹದಿಂದಾಗಿ ವಂಗದೇಶವು ನದೀವ್ಯೂಹ ಪ್ರದೇಶವಾಗಿರುವಂತೆ ಕೃಷ್ಣಾ ತುಂಗಭದ್ರಾ ಕಾವೇರಿಗಳ ಪ್ರವಾಹದಿಂದಾಗಿ ಕರ್ನಾಟಕವೂ ನದೀವ್ಯೂಹ ಪ್ರದೇಶವಾಗಿದೆ. ಒಂದು ಉತ್ತರದಲ್ಲಿ. ಮತ್ತೊಂದು ದಕ್ಷಿಣದಲ್ಲಿ ಎರಡೂ ಮಾನ್ಸೂನಿನ ವಲಯಗಳಲ್ಲಿ ನೆಲೆಗೊಂಡಿವೆ. ಪ್ರಾಕೃತಿಕ ಪರಿಸರದ ಸಮಾನತೆಗೆ ಇನ್ನು ಏನು ಬೇಕು? ಪ್ರಾಕೃತಿಕ ಪರಿಸರವು ಜನದ ಮನೋಭಾವವನ್ನು ರೂಪಿಸುವ ಅಂಶಗಳಲ್ಲಿ ಒಂದು. ಈ ಸಮಾನವಾದ ಪರಿಸರದ ಪ್ರಭಾವದಿಂದಾಗಿ ಎರಡೂ ನಾಡುಗಳ ಜನ ಪ್ರಾಯಶಃ ಭಾವಜೀವಿಗಳಾದವರು. ಅವರ ಧರ್ಮ ಸಾಮಾನ್ಯವಾಗಿ ಭಕ್ತಿ ಪ್ರಧಾನವಾದುದು. ಎಲ್ಲಕ್ಕೂ ಮಿಗಿಲಾಗಿ ಎರಡೂ ನಾಡುಗಳಲ್ಲಿ ಭಾರತೀಯ ಸಂಸ್ಕೃತಿ ಜೀವನಾಡಿಯಾಗಿ ನುಡಿಯುತ್ತ ಬಂದಿದೆ. ಬಾಲ ರವೀಂದ್ರರನ್ನು ಎತ್ತಿ ಆಡಿಸಿದ ಬಂಗಾಲವು ವಿಶ್ವ ಪ್ರಖ್ಯಾತಿಯಿಂದ ಪ್ರಪಂಚದ ಚಿತ್ತವನ್ನೇ ತನ್ನೆಡೆಗೆ ಸೆಳೆದಾಗ ಭಾರತದ ಉಳಿದ ಪ್ರಾಂತ್ಯಗಳಂತೆ ಕನ್ನಡನಾಡಿನಲ್ಲೂ ಸಂಭ್ರಮದ ಹೊ ತುಳುಕಾಡಿತು.

## ಕಾರವಾರದಲ್ಲಿ ರವೀಂದ್ರರು

ಕವೀಂದ್ರ ರವೀಂದ್ರರಿಗೂ ಕನ್ನಡ ನಾಡಿಗೂ ಮೊತ್ತಮೊದಲು ಸಂಪರ್ಕ ಬಂದುದು ಕಾರವಾರದಲ್ಲಿ! ಕನ್ನಡನಾಡಿನ ಚೆಲುವ ಕಡಲ ತೀರದಲ್ಲಿ. ರವೀಂದ್ರರಿಗೆ ಆಗ ಇಪ್ಪತ್ತೊಂದು ಇಪ್ಪತ್ತೆರಡರ ಪ್ರಾಯ. ಹೊಸ ಉತ್ಸಾಹದ ಕಾರಂಜಿ ಪುಟಿಯುವಾಗ ಕಾರವಾರ ಕವಿಯನ್ನು ಬರಮಾಡಿಕೊಂಡಿತು. ಅಣ್ಣಂದಿರಾದ ಸತ್ಯೇಂದ್ರನಾಥ ಠಾಕೂರರು ನ್ಯಾಯಾಧೀಶ ಸ್ಥಾನದಲ್ಲಿ ಕಾರವಾರಕ್ಕೆ ವರ್ಗವಾಗಿ ಬಂದ ಸಂದರ್ಭದಲ್ಲಿ ಅವರೊಡನೆ ಕನ್ನಡ ನಾಡಿನ ಕಡಲತೀರಕ್ಕೆ ಬರುವ ಸುಯೋಗ ಬಂಗಾಲದ ತರುಣ ಕವಿಗೆ ಒದಗಿತು. ಕಾರವಾರದ ನಿಸರ್ಗ ಸೌಂದರ್ಯ ಕವಿ ಹೃದಯಕ್ಕೆ ರಸಸೇಚನೆಯನ್ನು ಮಾಡಿತು. ಅಲ್ಲಿಯ ಆ ಸೌಂದರ್ಯದ ಸಂದರ್ಶನದಿಂದ ತಮಗಾದ ರಸಾನುಭೂತಿಯನ್ನು ಅವರು ತಮ್ಮ ಜೀವನಸ್ಮೃತಿಯಲ್ಲಿ ಹೀಗೆ ವಿವರಿಸಿದ್ದಾರೆ:

"ಸಂಸ್ಕೃತ ಸಾಹಿತ್ಯದಲ್ಲಿ ಆಗ ವರ್ಣಿತವಾದ ಮಲಯ ಪರ್ವತ ಪ್ರದೇಶದಲ್ಲಿ ಕಾರವಾರವೂ ಒಂದು. ಏಲಕ್ಕಿ, ಚಂದನಗಳ ಸೌರಭವು ಆವರಿಸಿದ ಪ್ರದೇಶವದು. ಜನದಟ್ಟಣೆಯಿಂದ ದೂರವಾಗಿರುವ, ಸದ್ದುಗದ್ದಲ ಸೋಂಕದ ಸನ್ನಿವೇಶದಲ್ಲಿರುವ ಕಾರವಾರವು ಚೆಲುವು ಚೆಲ್ಲುವರಿದಂತಿರುವ ಮಲೆಗಳ ತೋಳತೆಕ್ಕೆಯಲ್ಲಿ ಒರಗಿದೆ. ಮೇರೆಯರಿಯದ ನೀಲಸಾಗರದ ಆಲಿಂಗನಕ್ಕೆ ಹಾತೊರೆಯುವಂತಿರುವ ಬಾಲಚಂದ್ರಾಕೃತಿಯ ಆ ಬಂದರವು ಅನಂತವನ್ನೇ ಆವರಿಸುವ ಭರದಲ್ಲಿದೆ. ಕಾರವಾರದ ತೀರದ ಮಳಲ ದಂಡೆಗುಂಟ ಬೆಳೆದಿರುವ ಗಾಳಿಯ ಗಿಡಗಳು (Casuarina trees) ಕಪ್ಪುನದಿ ಕಡಲನ್ನು ಕೂಡುವ ಸಂಗಮದೆಡೆಯವರೆಗೆ ಸಾಲುಗೊಂಡು ನಿಂತಿವೆ. ಬಗೆಸೆಳೆಯುವ ಆ ಕಾಳೀ ನದಿಗುಂಟ ಒಂದು ಬೆಳುದಿಂಗಳ ಇರುಳಲ್ಲಿ ಕಿರುದೋಣಿಯೇರಿ ಜಲ ಪಯಣಗೈದ ನನ್ನ ನೆನಪು ಮನಕ್ಕೆ ತೂರಿ ಬರುತ್ತದೆ. ಆ ದೋಣಿಯಲ್ಲಿ ಸರಾಗವಾಗಿ ತೇಲಿಹೋಗಿ ದಂಡೆಯ ಒಂದು ಬೆಟ್ಟವನ್ನು ತಲುಪಿದೆವು. ಬೆಟ್ಟವನ್ನು ಏರಿ ಹೋದರೆ ಅಲ್ಲಿ ಒಂದು ಕೋಟೆ. ಕೋಟೆಯಲ್ಲಿ ಒಕ್ಕಲಿಗನೊಬ್ಬನ ಚಿಕ್ಕ ಮನೆ. ಚಿಕ್ಕದಾದರೂ ಚೊಕ್ಕಟವಾದುದು. ಆ ಮನೆಯಲ್ಲಿ ನಾವು ಕಳೆದ ಆ ನಿಮಿಷಗಳನ್ನು ಮತ್ತೆ ಮತ್ತೆ  ಮನಕ್ಕೆ ತರುತ್ತದೆ. ಮನೆಯಂಗಳದಲ್ಲಿ ಆಗ ಬೆಳುದಿಂಗಳು ಲೀಲೆಗೈಯುತ್ತಿದ್ದಿತು. ಅದರ ಸೊಗಸನ್ನು ಅನುಭವಿಸುತ್ತ ನಾವು ನಮ್ಮೊಡನೆ ಒಯ್ದ ಬುತ್ತಿಯನ್ನು ಬಿಚ್ಚಿ ತಿಂದ ನೆನಪು ನನಗೊಂದು ಸವಿನೆನಪು. ಬೆಟ್ಟವಿಳಿದು ಬಂದು ಮರುಪಯಣ ಕೈಕೊಂಡಾಗ ದೋಣಿಗೆ ಹುಟ್ಟು ಹಾಕಬೇಕಿರಲಿಲ್ಲ. ಸಲಿಲ ಪ್ರವಾಹದಲ್ಲಿ ದೋಣಿ ಸಲೀಲವಾಗಿ ನಮ್ಮನ್ನು ಸಂಗಮದೆಡೆಗೆ ತೇಲಿಸಿಕೊಂಡು ಹೋಗುತ್ತಿರುವಾಗ ಧ್ಯಾನಲೀನವಾದ ಇರುಳು ಜಲದ ಅಲೆಗಳ ಮೇಲೆ ಹಾಗು ದೂರದ ಮಲೆಗಳ ಮೇಲೆ ಬೆಳದಿಂಗಳ ಮಾಯೆಯನ್ನು ಹರಡಿತ್ತು. ನಾವೆ ನದಿಯ ಮುಖವನ್ನು ತಲುಪಿದಾಗ ಆಗಲೇ ವಿಲಂಬವಾಗಿತ್ತು. ಆದುದರಿಂದ ಸಮುದ್ರದ ಜಲಮಾರ್ಗವನ್ನು ಬಿಟ್ಟು ತೀರದ ಮಳಲ ದಾರಿಯನ್ನು ತುಳಿದು ಮುನ್ನಡೆದೆವು. ಕಡಲ ತೆರೆಗಳು ಮೌನ ತಾಳಿದ್ದುವು. ಯಾವ ತೊಂದರೆಯಿಂದಲೋ ಯಾವಾಗಲೂ ಮರ್ಮರ ಸ್ವರ ಮಾಡುವ ಗಾಳಿಯ ಮರಗಳು ಆಗ ವಿರಾಮದಲ್ಲಿದ್ದವು. ಆ ಮರಗಳ ತುದಿ ನೆರಳು ಮಳಲತೀರಕ್ಕೆ ಮೇರೆ ಬರವಂತೆ ಸುಮ್ಮನೆ ಒರಗಿತ್ತು.

ಆ ಶುಭ್ರ ಪ್ರಶಾಂತ ಸಾಗರದ ತೀರದಲ್ಲಿ ಹೊಳೆವ ಮಳಲಿನಲ್ಲಿ ಕಿರು ನೆರಳ ಚೆಲ್ಲಿ ನಾವು ಮನೆಯತ್ತ ಹೆಜ್ಜೆ ಚೆಲ್ಲುತ್ತಿದ್ದೆವು. ಮನೆ ಸೇರಿದಾಗ ನನ್ನ ಚಿತ್ತ ನಿದ್ದೆಗಿಂತಲೂ ಆಳವಾದ

ಭಾವಸಮಾಧಿ ಸಂದಿತ್ತು. ಮೌನಮುದ್ರಿತವಾದ ಆ ದೂರ ತೀರದ ಇರುಳಿನಲ್ಲಿ ಬೆರೆದು ಬಂದ ಕವಿತೆಯಿದು:

ಕರಗುವೆನು ನಾ ಮುಳುಗುವೆನು ನಾ ಸರಿ ಇರುಳಿನೀ ಆಳಕೆ-
ಸಿಕ್ಕಲೇತಕೆ ಧರೆಯ ಹಿಡಿತಕೆ? ಏಕೆ ಅಡಿ-ಹುಡಿ ಹಾರಿಕೆ-
ತೆಗೆ ಸಾರುವೆನು ಸ್ವಾತಂತ್ರ್ಯಕೆ
ಓ ತಾರೆಗಳೆ ಚಂದ್ರಿಕೆಯ ನೀಂಟುತ ಮತ್ತರಾದಿರ?-ಆದರೂ
ದೂರದಿಂ ನಿಮ್ಮಕ್ಷಿರಕ್ಷೆಯನಿತ್ತು ಪೊರೆಯಿರಿ ನನ್ನನು.
ಕ್ಷಿತಿಜ ತನ್ನಯ ರೆಕ್ಕೆ ಹರಡಲಿ; ನನಗೆ ನೀಡಲಿ ಮರೆಯನು.

"ಬೇರೆ ಏನದು ಬೇಕು?" ಎಂದಿರ?-ಸಾಂದ್ರ ಚಂದ್ರಿಕೆ ನನ್ನನು
ಸುತ್ತಿ ಆ ಆಗಸವ ಮುತ್ತಲಿ ಸಂತಸದ ಜಗದಲೆಯೊಳು.
ಎಣಿಕೆಯಿಲ್ಲದ ಪಯಣಿಗರು ಏರಿರುವ ನೌಕೆಯ ಜಗವಿದು
ದೂರ ತೀರಕೆ ಸಾಗಿ ಸಾಗರದಾಚೆ ಅದು ಮರೆಯಾಗಲು
ಹುಟ್ಟು ಹಾಕುವ ಅಂಬಿಗರ ಹಾಡೆಲ್ಲೊ ಮೌನದಿ ಮುಳುಗಲು
ಸುಪ್ರಶಾಂತ ಅನಂತ ರಜನಿಯ ಹೃದಯದಾಳಕೆ ಮುಳುಗುತ
ತೊರೆಯುವೆನು ನನ್ನನ್ನೆ ನಾ ಕಿರುಬಿಂದುವಿನ ಕೊನೆ ಸೇರುತ."

-(ಭಾವಾನುವಾದ ಡಿ.ಎಸ್. ಕರ್ಕಿ)

ಸತ್ಯೇಂದ್ರರೊಡನೆ ತರುಣ ರವೀಂದ್ರರು ಕಾರವಾರದಲ್ಲಿದ್ದಾಗ 'ಪ್ರಕೃತಿರ್ ಪರಿಶೋಧ' ಎಂಬ ರೂಪಕವೊಂದನ್ನು ರಚಿಸಿದರು. ಆಶೆ ಆಮಿಷಗಳನ್ನೆಲ್ಲ ಬಿಸುಟು ಆತ್ಮಸಾಕ್ಷಾತ್ಕಾರವನ್ನು ಪಡೆಯಲೆಳಸಿದ ಒಬ್ಬ ಸನ್ಯಾಸಿ ಆ ನಾಟಕದ ನಾಯಕ. ಆದರೆ ಆ ಬಯಲು ಬ್ರಹ್ಮದ ಬೆನ್ನುಹತ್ತಿದ ಸನ್ಯಾಸಿಯನ್ನು ಜೀವನೋತ್ಸವಕ್ಕೆ ಮತ್ತೆ ಕರೆದು ತರುತ್ತಾಳೆ ಬಾಲೆಯೊಬ್ಬಳು ಪ್ರಕೃತಿಯ ಪ್ರತೀಕವಾಗಿ. ಪ್ರಕೃತಿ ಸೌಂದರ್ಯವೆಂಬುದು ಸತ್ವವಿಲ್ಲದ ಕಲ್ಪನೆಯಲ್ಲ; ಅದು ಅನಂತತೆಯ ಆನಂದದ ಅಭಿವ್ಯಕ್ತಿಯೆಂಬುದನ್ನು ಕಾರವಾರದ ರಮ್ಯಪ್ರಕೃತಿ ಕವಿಗೆ ಮನವರಿಕೆ ಮಾಡಿಕೊಟ್ಟಿತು. ಆ ನಾಟಕದ ವಸ್ತು ತಮ್ಮ ಆಗಿನ ಅನುಭವದ ವಸ್ತುವೆಂದು ಕವಿ ತಮ್ಮ ಜೀವನಸ್ಮೃತಿಯಲ್ಲಿ ಹೇಳಿದ್ದಾರೆ: "ಕತ್ತಲೆಯ ಗವಿಯೊಳಗೆಂಬಂತೆ ನನ್ನೊಳಗೆ ನಾನು ಹುದುಗಿಕೊಂಡಿದ್ದೆ. ಬೆಳಕಿನ ಕಿರಣವೊಂದು ಆಗ ಆ ಕತ್ತಲೆಯನ್ನು ಭೇದಿಸಿ ಬಂದಿತು. ಅದರಿಂದಾಗಿ ನಾನು ಮತ್ತೆ ಜೀವನದೊಡನೆ ಸಾಮರಸ್ಯವನ್ನು ಪಡೆದೆ." ಅಂತೂ ಕನ್ನಡ ನಾಡು ಕವೀಂದ್ರ ರವೀಂದ್ರರಿಗೆ ತನ್ನದೇ ಆದ ಸ್ಫೂರ್ತಿಯನ್ನು ನೀಡಿ ಧನ್ಯವಾಯಿತು.

## ರವಿಯ ರಶ್ಮಿ

ಅಂದು ಕನ್ನಡ ನಾಡಿನಲ್ಲಿ ಹೀಗೆ ಸ್ಫುರಣ ಪಡೆದ ಕವಿ ಮುಂದೆ ತಮ್ಮ ಉಜ್ವಲ ವ್ಯಕ್ತಿತ್ವದ ಕಿರಣ ಸೂಸಿ ಈ ನಾಡಿನಲ್ಲಿ ಸತ್ಪ್ರೇರಣೆಯನ್ನು ಉಂಟುಮಾಡಿದ ಸಂಗತಿ ಸ್ಮರಣಾರ್ಹವಾದುದು. ವಂಗ ಸಾಹಿತ್ಯದಲ್ಲಿ ಆಧುನಿಕ ಯುಗವು ರವೀಂದ್ರರ ಪೂರ್ವದಲ್ಲಿ ಪ್ರಾರಂಭವಾಗಿದ್ದರೂ ವಂಗ ಸಾಹಿತ್ಯಕ್ಕೆ ವಿಶ್ವಸಾಹಿತ್ಯದಲ್ಲಿ ಶ್ರೇಷ್ಠವಾದ ಸ್ಥಾನವನ್ನು ಗಳಿಸಿಕೊಟ್ಟ ಶ್ರೇಯಸ್ಸು ಕವೀಂದ್ರ ರವೀಂದ್ರರದು. ಅವರ ಸಾಹಿತ್ಯದಲ್ಲಿ ಮೂಡಿಬಂದ

ಪರಿಶುದ್ಧ ದೇಶಾಭಿಮಾನ ಹಾಗೂ ಪೂರ್ವ ಸಂಸ್ಕೃತಿಯ ಸದಭಿಮಾನ ಅಂಥವೇ ಭಾವಗಳನ್ನು ಎಲ್ಲೆಲ್ಲೂ ಮಿಡಿದವು. ಒಂದು ದಿಕ್ಕಿನಲ್ಲಿ ಮೂಡಿದ ಬೆಳಕು ನಾಲ್ಕೂ ದಿಕ್ಕಿಗೆ ಹರಡಿತು. ನಾಡು ನುಡಿಗಳ ಬಗೆಗೆ ಅನುರಾಗ ಅಲ್ಲಲ್ಲಿ ಅರಳಿತು. ಅದರಂತೆ ಗತವೈಭವ ಸ್ಮರಣೆಯಿಂದ ಕನ್ನಡನಾಡಿನ ಅಂತರಂಗ ತರಂಗಗೊಂಡಿತು. ಹೊಸ ಕನ್ನಡ ಕಾವ್ಯದ ಕಾರಂಜಿ ಮೆಲ್ಲನೆ ಪುಟಿಯಲಾರಂಭಿಸಿತು. ನಮ್ಮ ಈ ಶತಮಾನದ ಎರಡನೆಯ ದಶಕದಲ್ಲಿ ಹೀಗೆ ಹೊಮ್ಮಿದ ನವೋತ್ಸಾಹವನ್ನು ಕನ್ನಡದ ಹಿರಿಯ ಕವಿಯೊಬ್ಬನ ಒಂದು ಕವಿತೆ ಕನ್ನಡಿಸುವಂತಿದೆ. ಅಲ್ಲದೆ ಇಡಿಯ ಭಾರತವೇ ಕಂಡ ನವೋದಯವನ್ನು ಅದು ಸೂಚಿಸುವಂತಿದೆ.

> **ನಾಡಿನ ಪೂರ್ವದ ಪುಣ್ಯ ದಿಗಂತದಿ**
> **ನವ ಅರುಣೋದಯ ಹೊಮ್ಮುತಿದೆ;**
> **ಚಿರ ನೂತನ ಚೇತನದುತ್ಸಾಹದಿ**
> **ನವೀನ ಜೀವನ ಹೊಮ್ಮುತಿದೆ.** –ಕುವೆಂಪು

ಇನ್ನೊಬ್ಬ ಹಿರಿಯ ಕವಿ ಹಾಡಿದ ಹಾಡೂ ಇಂಥದೇ ಭಾವವನ್ನು ಸುಳುಹುಗಾಣಿಸುತ್ತದೆ:

> **ಮೂಡಲ ಮನೆಯ ಮುತ್ತಿನ ನೀರಿನ**
> **ಎರಕವ ಹೊಯ್ದಾ**
> **ನುಣ್ಣನ್ನೆರಕವ ಹೊಯ್ದಾ**
> **ಬಾಗಿಲ ತೆರೆದೂ ಬೆಳಕೂ ಹರಿದೂ**
> **ಜಗವೆಲ್ಲಾ ತೊಯ್ದಾ**
> **ಹೋಯ್ತೋ ಜಗವೆಲ್ಲಾ ತೊಯ್ದಾ** –ಬೇಂದ್ರೆ

ಕವೀಂದ್ರ ರವೀಂದ್ರರ ಮೂರ್ತಿಪ್ರಭೆಯ ಪ್ರಸರಣವೂ ಹೊಸಗನ್ನಡ ಕಾವ್ಯಯುಗದ ಆರಂಭವೂ ಒಂದೇ ಕಾಲಕ್ಕೆ ಆದುದು ಕೇವಲ ಕಾಕತಾಳೀಯವಲ್ಲ. ಆಗ ಅಭಿವ್ಯಕ್ತಿಗಾಗಿ ಕಾಯುತ್ತಿದ್ದ ಕನ್ನಡಕ್ಕೆ ರಸಋಷಿ ರವೀಂದ್ರರ ಪ್ರೇರಣೆ ಸಕಾಲಕ್ಕೆ ಒದಗಿತೆನ್ನಬಹುದು. ಹಾಡಬಲ್ಲ ಹಕ್ಕಿಬಳಗದಲ್ಲಿ ಇಂದಿನಂತೆ ಅಂದೂ ಮುಂದಾಗಿದ್ದ ಕವಿ ಬೇಂದ್ರೆ ಅವರ ಆ ನವೋದಯದಲ್ಲಿ ರಚಿಸಿದ ಒಂದು ಕಂದಪದ್ಯ ಈ ಸಂದರ್ಭದಲ್ಲಿ ಗಮನಾರ್ಹವಾಗಿದೆ. ಆ ಪದ್ಯದ ಅರ್ಥವನ್ನು ಮಾತ್ರ ಇಲ್ಲಿ ಉದ್ಧರಿಸಿದರೆ ಸಾಕು.

> **ಅರಿವೆಂಬ ರವಿಯು ಮೂಡಲು**
> **ಗುರುವೆಂಬಾತ್ಮಾರವಿಂದವರಳಿತು ನನ್ನೊಳ್**

ಕವಿ ಬೇಂದ್ರೆ ಅವರ ಜೀವನದಲ್ಲಿ ಜ್ಞಾನರವಿಯಾಗಿ ಮೂಡಿದವರು ಕವೀಂದ್ರ ರವೀಂದ್ರರೆಂಬುದನ್ನು ಇದರಿಂದ ನಿಚ್ಚಳವಾಗಿ ಕಂಡುಕೊಳ್ಳಬಹುದು. 'ಗುರುದೇವ' ಎಂಬ ಕವನದಲ್ಲಿ ಬೇಂದ್ರೆ ಅವರು ರವೀಂದ್ರರಲ್ಲಿ ಇಟ್ಟ ಭಕ್ತಿ ಹೀಗೆ ಪಡಿಮೂಡಿದೆ.

> **ನುಡಿದು ಬೇಸತ್ತಾಗ ದುಡಿದುಡಿದು ಸತ್ತಾಗ**
> **ಜನಕ ಹಿಗ್ಗಿನ ಹಾಡ ನೀಡಾಂವಾ**
> **ನಿನ್ಹಾಂಗ ಆಡಾಕ ನಿನ್ಹಾಂಗ ಹಾಡಾಕ**
> **ಪಡೆದು ಬಂದಿರಬೇಕೊ ಗುರುದೇವ!**

ಕವಿ ರವೀಂದ್ರರು ಪ್ರಾಮುಖ್ಯವಾಗಿ ಭಾವಗೀತಕಾರರಾದುದರಿಂದ ಅವರ

ಪ್ರಭಾವವು ಪ್ರಾಮುಖ್ಯವಾಗಿ ಕನ್ನಡ ಭಾವವೀಣೆಯ ತಂತಿಗಳ ಮೇಲೆ ಆಡಿಬಂದಿತು. ಭಾವದ ಸಂಸ್ಪರ್ಶದಿಂದ ಭಾವತರಂಗಗೊಂಡರೆ ಅದು ಸ್ವಾಭಾವಿಕ. ಗೀತಾಂಜಲಿಯ ಕೇಂದ್ರಭಾವ ಭಕ್ತಿ. ಹೊಸಗನ್ನಡದಲ್ಲಿ ಮೊದಮೊದಲು ರಚಿತವಾದ ಗೀತಗಳೂ ಹೆಚ್ಚಾಗಿ ಭಕ್ತಿಪ್ರಧಾನವಾದುವುಗಳು. ಜೊತೆಗೆ ರವೀಂದ್ರರ ಕವನಗಳಲ್ಲಿ ಹವಣಾಗಿ ನುಡಿವಡೆದ ದೇಶಾಭಿಮಾನ, ಪ್ರಕೃತಿ ಸೌಂದರ್ಯಪ್ರೇಮ ಇವೇ ಮೊದಲಾದವುಗಳು ಕನ್ನಡ ಕವಿಗಳ ಮೇಲೆ ಸಾಕಷ್ಟು ಪರಿಣಾಮವನ್ನುಂಟುಮಾಡುತ್ತ ಬಂದಿವೆ.

ಯಾವ ಭಾವವಾದರೇನು? ಒಂದಿನಿತೂ ಒರಟು ಸೋಂಕದ ನಯ ರವೀಂದ್ರರ ಭಾವಗೀತಗಳ ರಹಸ್ಯ. ಅವರ 'ಫಲ ಸಂಚಯ' (Fruit Gathering). 'ನಲ್ಲೆಯ ಕಾಣಿಕೆ (Lover's Gift). 'ತೋಟಿಗ' (Gardener). 'ಗೀತಾಂಜಲಿ'– ಯಾವ ಸಂಕಲವನ್ನೇ ಕೈಗೆತ್ತಿಕೊಂಡರೂ ಅದರಲ್ಲಿ ಈ ನಯದ ನಡೆಯನ್ನೇ ಕಾಣುತ್ತೇವೆ. ಈ ನಯವು ಹೊಸಗನ್ನಡ ಭಾವಗೀತಗಳ ಮುಖ್ಯ ಲಕ್ಷಣವಾಗಿ ಇಳಿದು ಬಂದುದು ಒಂದು ಭಾಗ್ಯವಿಶೇಷ.

ಇಲ್ಲಿಯವರೆಗೆ ಹೇಳಿದುದು ಸೂಕ್ಷ್ಮವಾಗಿ ಸುಳಿದುಬಂದ ಪರಿಣಾಮ. ರವೀಂದ್ರರ ಪ್ರಭಾವವು ಕನ್ನಡ ಸಾಹಿತ್ಯದ ಮೇಲೆ ನೇರವಾಗಿಯೂ ಆಗದೆ ಇಲ್ಲ. ರವೀಂದ್ರರ ಕೃತಿಗಳ ಆಂಗ್ಲಾನುವಾದದ ಮೂಲಕ ಈ ಪರಿಣಾಮ ಕನ್ನಡಕ್ಕೆ ಸುಳಿದು ಬಂದಿದೆ. ಕವಿ ಪುಟ್ಟಪ್ಪನವರ 'ಚಿತ್ರಾಂಗದಾ' ಎಂಬ ಸರಳ ರಗಳೆಯ ಖಂಡಕಾವ್ಯ ಈ ಮಾತಿಗೆ ತಕ್ಕ ನಿದರ್ಶನ. ಪೂರ್ವ ಚಿತ್ರಾಂಗದೆಯನ್ನು ಚಿತ್ರಿಸುವ ಸನ್ನಿವೇಶಗಳಿಗೆ ತಮ್ಮ ಕಾವ್ಯವು ರವೀಂದ್ರನಾಥರ 'ಚಿತ್ರಾ' ನಾಟಕಕ್ಕೆ ಋಣಿಯಾಗಿರುವುದಾಗಿ ಪುಟ್ಟಪ್ಪನವರೇ ಹೇಳಿದ್ದಾರೆ. ಕವೀಂದ್ರ ರವೀಂದ್ರರ ಶಿಶು (Crescent Moon) ಎಂಬ ಗೀತಸಂಗ್ರಹವನ್ನು ನೆನಪಿಗೆ ತರುವ 'ಆನಂದಕಂದ'ರ 'ಮುದ್ದಿನ ಮಾತು' ಅಂಥದೇ ಒಂದು ಮುದ್ದಾದ ಶಿಶುಗೀತ ಸಂಕಲನ.

ಇನ್ನು ಕನ್ನಡಕ್ಕೆ ಅನುವಾದವಾಗಿ ಬಂದ ರವೀಂದ್ರಸಾಹಿತ್ಯವನ್ನು ಕುರಿತು ಎರಡು ಮಾತು. 'ಗೀತಾಂಜಲಿ'ಯಲ್ಲಿ ಹಾಗು ರವೀಂದ್ರರ ಇತರ ಭಾವಗೀತ ಸಂಕಲನಗಳಲ್ಲಿ ಸೇರಿದ ಕವಿತೆಗಳನ್ನು ಬಿಡಿ ಬಿಡಿಯಾಗಿ ಅನುವಾದಿಸುವುದರ ಕಡೆಗೆ ನಮ್ಮ ಕವಿಗಳು ಹೆಚ್ಚಾಗಿ ಗಮನ ಪೂರೈಸಿದರೆಂದು ಕಾಣುತ್ತದೆ. ಕಿರಿ ಕವಿಗಳನ್ನು ಮೊದಲು ಮಾಡಿಕೊಂಡು 'ಕುವೆಂಪು'ವಿನವರೆಗೆ ಹಲವಾರು ಕನ್ನಡ ಕವಿಗಳು ಹೀಗೆ ವಿಶ್ವಕವಿಯ ಬಿಡಿ ಭಾವಗೀತಗಳನ್ನು ಕನ್ನಡಿಸಿದ್ದಾರೆ.

**ಶಾಂತಿನಿಕೇತನ**

ರವೀಂದ್ರರ ಸಾಹಿತ್ಯವು ಹೇಗೋ ಹಾಗೆ ಅವರ ಶಾಂತಿನಿಕೇತನವು ನಾಗರಿಕ ಪ್ರಪಂಚದ ಚಿತ್ತವನ್ನು ಆಕರ್ಷಿಸಿತು. ಕರ್ನಾಟಕದ ಗಮನವನ್ನು ಅದು ಇನ್ನೂ ಹೆಚ್ಚಾಗಿ ಸೆಳೆಯಿತು. ಮಹರ್ಷಿ ದೇವೇಂದ್ರನಾಥರ ಅಧ್ಯಾತ್ಮ ಸಾಧನೆಯ ರಂಗವಾಗಿದ್ದ ಅದರ ಪೂರ್ವೇತಿಹಾಸವು ಪವಿತ್ರವಾದುದು. 'ಶಾಂತಿ' ಭಾರತೀಯರಿಗೆ ಅತ್ಯಂತ ಪ್ರಿಯವಾದ ಭಾವನೆ. 'ಶಾಂತಿನಿಕೇತನ'ವು ಆ ಭಾವನೆಯ ಪ್ರತೀಕ. ಸುವಿಶಾಲವಾದ, ಸುಪ್ರಶಾಂತವಾದ, ಚೇತೋಹಾರಿಯಾದ ಸ್ವಚ್ಛ ವಾತಾವರಣವನ್ನು ಅದು ಮನಕ್ಕೆ ಸೂಸುತ್ತದೆ. ತಂದೆ ಧ್ಯಾನಕ್ಕಾಗಿ ಏರ್ಪಡಿಸಿಕೊಂಡ ಶಾಂತಿನಿಕೇತನದ ಪ್ರಶಾಂತ ಆವರಣವನ್ನು ರವೀಂದ್ರರು ಶೈಕ್ಷಣಿಕ ಕಾರ್ಯಕ್ಕಾಗಿ ಬಳಸಿಕೊಂಡರು. ಗುರುದೇವರ ಸಂಪರ್ಕದ ಪರಿಣಾಮವಾಗಿ

ಶಾಂತಿನಿಕೇತನದ ಆವರಣದಲ್ಲಿ ನೂತನ ಸೌರಭವು ಸೂಸುವಂತಾಯಿತು. ಶಿಕ್ಷಣದಲ್ಲಿ ಹಿತವಾದ ಮಿತವಾದ ಸ್ವಾತಂತ್ರ್ಯ ಸಮರಸಗೊಳ್ಳುವಂತಾಯಿತು. ಆನಂದ ಜಿನುಗುವಂತಾಯಿತು. ಕಲೆ ಚಿಗುರುವಂತಾಯಿತು. ಶಾಂತಿ ನಿಕೇತನದಲ್ಲಿಯ ಪ್ರತಿಯೊಂದು ಮಂದಿರ, ಭವನ, ಗುಡಿಸಲು, ತೋಟ ಎಲ್ಲವೂ ಕಲ ವೈಶಿಷ್ಟ್ಯವನ್ನು ಪ್ರದರ್ಶಿಸುವಂತೆ ಏರ್ಪಟ್ಟಿರುವುದಾಗಿ ಹೇಳುತ್ತಾರೆ.

ಭಾರತದ ಕ್ಷಿತಿಜದಲ್ಲಿ 'ವಿಶ್ವಭಾರತಿ' ಮೂಡಿದಾಗ ಶಾಂತಿನಿಕೇತನದ ಆಕರ್ಷಣೆ ಇನ್ನೂ ಹೆಚ್ಚಾಯಿತು. ಕರ್ನಾಟಕದ ಕೆಲವು ಭಾವಜೀವಿಗಳು ಶಾಂತಿನಿಕೇತನದ ಪರಿಶುದ್ಧ ಪರಿಮಳದ ಕರೆಗೆ ಓಗೊಟ್ಟರು.

ಶಾಂತಿನಿಕೇತನಕ್ಕೆ ಹೋಗಿ ಗುರುದೇವನ ಸಂದರ್ಶನವನ್ನು ಪಡೆದ ಇಬ್ಬರು ಹಿರಿಯ ಸಾಹಿತಿಗಳ ಹೆಸರನ್ನು ಈ ಸಂದರ್ಭದಲ್ಲಿ ಹೇಳಬೇಕು. ಅವರಲ್ಲಿ ಒಬ್ಬರು ಶ್ರೀನಿವಾಸ ಎಂಬ ಕಾವ್ಯನಾಮದಿಂದ ಕನ್ನಡಿಗರಿಗೆ ಸುಪರಿಚಿತರಾದ ಮಾಸ್ತಿ ವೆಂಕಟೇಶ ಅಯ್ಯಂಗಾರರು, ಇನ್ನೊಬ್ಬರು ಶ್ರೀ ಮಾಸ್ತಿ ಅವರೊಡನೆ ಸಹಯಾತ್ರಿಕರಾಗಿ ಹೋಗಿಬಂದ ಶ್ರೀ ವಿ. ಸೀತಾರಾಮಯ್ಯನವರು. ವಿ.ಸೀ. ಎಂಬ ಅವರ ಕಾವ್ಯನಾಮವನ್ನು ಕನ್ನಡಿಗರು ಬಲ್ಲರು. ಈ ಇಬ್ಬರು ಕನ್ನಡ ಸಾಹಿತಿಗಳು ಶಾಂತಿನಿಕೇತನದಲ್ಲಿ ಎರಡೇ ದಿನ ಉಳಿದಿದ್ದರೂ ಅವರು ರವೀಂದ್ರರ ಸಂದರ್ಶನ ಪಡೆದು ಅಲ್ಲಿಂದ ತಂದ ಅನುಭವ ಬಹು ಬೆಲೆಯುಳ್ಳದ್ದು. ಅದರ ಪರಿಣಾಮವಾಗಿ ಶ್ರೀ ಮಾಸ್ತಿ ಅವರು ರಚಿಸಿದ 'ರವೀಂದ್ರನಾಥ ಠಾಕೂರರು' ಎಂಬ ಗ್ರಂಥ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಗ್ರಂಥ ಮಾಲೆಯಲ್ಲಿ ೧೯೩೫ರಲ್ಲಿ ಪ್ರಕಟವಾಯಿತು. ದಿವಂಗತ ಬಿ.ಎಂ. ಶ್ರೀಕಂಠಯ್ಯನವರು ಆ ಗ್ರಂಥಕ್ಕೆ ಬರೆದ ತಮ್ಮ ಅಮೋಘವಾದ ಮುನ್ನುಡಿಯಲ್ಲಿ ಹೇಳಿದ ಕೆಳಗಣ ಮಾತುಗಳು ವಿಶ್ವಕವಿ ರವೀಂದ್ರರ ಸ್ವಾರಸ್ಯಮಯ ಜೀವನದಲ್ಲಿ ಸಾರಸರ್ವಸ್ವವನ್ನೇ ಎತ್ತಿ ತೋರುವಂತಿವೆ:

"ರವೀಂದ್ರರ ಅತಿ ಪ್ರಿಯವಾದ ಕಾರ್ಯವೆಂದರೆ ಶಾಂತಿನಿಕೇತನದಲ್ಲಿ ಸ್ಥಾಪಿಸಿರುವ ವಿಶ್ವಭಾರತಿ ಎಂಬ ವಿಶ್ವವಿದ್ಯಾನಿಲಯ. ವಿಶ್ವ, ಭಾರತಿ, ಶಾಂತಿ – ಈ ಮೂರೂ ಮಾತುಗಳು ಇವರ ಬಾಳಿಕೆಯ ರಹಸ್ಯ. ಶಾಂತಿಯಲ್ಲಿ ಸರಸ್ವತಿಯಿಂದ ಜ್ಞಾನವನ್ನು ಪಡೆದು, ವಿದ್ಯೆ ಬುದ್ಧಿಗಳನ್ನು ಶುದ್ಧಿಮಾಡಿ, ಸಮಾಜಗಳನ್ನೆತ್ತಿ, ಲೋಕವನ್ನೆಲ್ಲಾ ಅಣ್ಣ ತಮ್ಮಂದಿರಂತೆ ಒಂದುಗೂಡಿಸಿ, ಧರ್ಮ ಜೀವನದಲ್ಲಿ, ಕಲೋಪಾಸನೆಯಲ್ಲಿ, ಸಾತ್ವಿಕ ಸ್ಪರ್ಧೆಯಲ್ಲಿ, ಪ್ರತಿಯೊಬ್ಬ ಮಾನವನೂ ತನ್ನ ಆತ್ಮವನ್ನು ಪರಿಪೂರ್ಣಗೊಳಿಸಿ ಆನಂದಪಡಬೇಕೆಂಬುದೇ ಇವರ ಬೋಧನೆ–ನಡೆದು ತೋರಿಸಿಕೊಟ್ಟ ಸಂದೇಶ."

(ಲೇಖನದ ಸಂಕ್ಷಿಪ್ತ ರೂಪ. ಕೃಪೆ : ಸಾಹಿತ್ಯ–ಸಂಸ್ಕೃತಿ–ಸ್ಮೃತಿ)

ಈತನೆ ರವೀಂದ್ರ ಇವನೇ ಕವೀಂದ್ರ
ನೋಡಿದೆಯಾ ರೂಪ
ಜ್ಞಾನದ ಜ್ಯೋತಿ ಜಗದ ತಮಸ್ಸಿಗೆ
ಹಿಡಿದಂತಿದೆ ದೀಪ.

– ದ.ರಾ. ಬೇಂದ್ರೆ




ಟಾಗೋರ್ ೧೫೦

# ರವೀಂದ್ರನಾಥ ಟಾಗೋರರ ಕವಿತೆ ಒಂದಕ್ಕಿನ್ನಷ್ಟು ಅನುವಾದ

–ಹರಿಹರಪ್ರಿಯ

"ಪುಸ್ತಕಮನೆ"ಯ ಕೊನೆಯ ಸಂಚಿಕೆಯಾಗಿ, ವಿಶ್ವಕವಿ ರವೀಂದ್ರನಾಥ ಟಾಗೋರರಿಗೆ ಕನ್ನಡ ಕೊಡುಗೆಯೊಂದನ್ನು, ವಿಶಿಷ್ಟವಾಗಿ ನೀಡುವ ಹೆಬ್ಬಯಕೆಯಾಯಿತು. ಅದರಂತೆ, ೧೯೦೧ರಲ್ಲಿ "ನೈವೇದ್ಯ" ಎಂಬ ಬೆಂಗಾಲಿ ಮೂಲ ಸಂಕಲನದಲ್ಲಿ "ಕೊರೊ ಜಾಗರಿತ" (ಪ್ರಾರ್ಥನೆ) ಎಂಬ ಕವಿತೆ ಸೇರ್ಪಡೆಗೊಂಡಿತ್ತು. ಟಾಗೋರರೇ ೧೯೧೨ರಲ್ಲಿ ಇಂಗ್ಲಿಷಿಗೆ ಅನುವಾದಿಸಿದ 'ಗೀತಾಂಜಲಿ' ಸಂಕಲನದಲ್ಲಿ ೩೫ನೇ ಕವಿತೆಯಾಗಿ ಹೊರಮೂಡಿತು ಕೂಡ. ಈ ಕವಿತೆಯನ್ನೇ ೧೭ ಅನುವಾದಕರು ಕನ್ನಡಕ್ಕೆ ತಂದದ್ದನ್ನು 'ಪುಸ್ತಕಮನೆ' ೬೦ನೇ ಸಂಚಿಕೆಯಲ್ಲಿ ಸಂಕಲಿಸಲಾಗಿತ್ತು. ಈಗ ಮತ್ತೆ ೫ ಅನುವಾದಗಳು, 'ಪುಸ್ತಕಮನೆ' ಸಂಗ್ರಹದಲ್ಲಿಯೇ ಕೈಗೆ ಸಿಕ್ಕಿವೆ. ಇದರಿಂದ ಟಾಗೋರರ ಆ ಕವಿತೆಯನ್ನು ಕನ್ನಡಕ್ಕೆ ಮೊಟ್ಟಮೊದಲು ಅನುವಾದಿಸಿದ ಕೀರ್ತಿ, ಯಶಸ್ಸು, ಹೆಗ್ಗಳಿಕೆ, ಎಮ್.ಎನ್. ಕಾಮತ್ ಅವರದಾಗುತ್ತದೆ. ಜೊತೆಗೆ ಜಿ. ರಾಮನಾಥ ಭಟ್ (ಮೈಸೂರು), ಸುಬ್ರಾಯ ಚೊಕ್ಕಾಡಿ (ಸುಳ್ಯ), ಮುರಳೀಧರ ಉಪಾಧ್ಯ (ಹಿರಿಯಡ್ಕ- ಉಡುಪಿ), ಗೆಳೆಯರು ದೂರವಾಣಿಯ ಮೂಲಕ ವಿವರಿಸಿರುವಂತೆ, ಈವರೆಗೂ ದಕ್ಷಿಣಕನ್ನಡದ ಪಾಠಶಾಲೆಗಳಲ್ಲಿ ಪ್ರಾರ್ಥನಾಗೀತೆಯಾಗಿ ಕಾಮತ್ ಅವರ ಅನುವಾದದ ಈ ಗೀತೆಯನ್ನೇ ಉಳಿಸಿಕೊಂಡು ಬಂದಿರುವುದು ವಿಶೇಷ. ಈ ದಿಶೆಯಲ್ಲಿ ಭಟ್‌ರ ನೆರವು ಅಧಿಕ.

ಅಲ್ಲಿಗೆ, ಸದ್ಯ ನನಗೆ ೨೨ ಅನುವಾದಗಳು ಸಿಕ್ಕಿದಂತಾಗಿದೆ. (ಅಂದಾಜಿನಂತೆ ೨೮ ಅನುವಾದಗಳಿವೆ) ಇದರಿಂದ ಒಂದೇ ಕವಿತೆ ಬಹು

ಅನುವಾದಗೊಂಡಿರುವುದು ಬೇರೆ ಇರಲಿಕ್ಕಿಲ್ಲ ಎಂದು ನನ್ನ ತಿಳಿವಳಿಕೆ. ಮುಖ್ಯವಾಗಿ, ಸಾಹಿತ್ಯ ಸಾಂಸ್ಕೃತಿಕ ವಿದ್ಯಾರ್ಥಿಗಳು, ತೌಲನಿಕ ಅಧ್ಯಯನಕ್ಕೆ ಇನ್ನಷ್ಟು ಗಂಭೀರವಾಗಿ ತೊಡಗಲು, ಆ ಮೂಲಕ ಅನೇಕ ಅಧ್ಯಯನ ಶಿಸ್ತುಗಳ ಮೇಲೆ ಬೆಳಕು ಚೆಲ್ಲಲು ಈ ಪ್ರಯತ್ನ ಆಹ್ವಾನಿಸುತ್ತದೆ ಹಾಗೂ ಸವಾಲಾಗಿ ಕೂಡ ಪರಿಣಮಿಸುತ್ತದೆ.

'ಪುಸ್ತಕಮನೆ' ೬೦ನೇ ಸಂಚಿಕೆಯಲ್ಲಿ ಪ್ರಕಟವಾದ ೧೭ ಅನುವಾದದ ಜೊತೆಗೆ, ಇದೀಗ ದೊರಕಿದ ೫ ಅನುವಾದವನ್ನು ಕಾಲಾನುಕ್ರಮಣಿಕೆಯಲ್ಲಿ ಇದೇ 'ಅನ್ವೇಷಣೆ'ಯಲ್ಲಿ ನೀಡಲಾಗಿದೆ. ಇದರ ಜೊತೆಗೆ ರವೀಂದ್ರರೇ ಬೆಂಗಾಲಿಯಿಂದ ಇಂಗ್ಲಿಷ್‌ಗೆ ಅನುವಾದಿಸಿದ ಕವನವನ್ನೂ ಕೆಳಗೆ ಕೊಡಲಾಗಿದೆ.

---

## ಪುಸ್ತಕಮನೆ ಹರಿಹರಪ್ರಿಯ

'ಹರಿಹರಪ್ರಿಯ' ಎಂದೇ ಸಾಹಿತ್ಯ ಲೋಕದಲ್ಲಿ ಹೆಸರಾಗಿರುವ ಇವರು ಸಾತವಳ್ಳಿ ವೆಂಕಟವಿಶ್ವನಾಥ. ಅಪಾರ ಪುಸ್ತಕ ಸಂಗ್ರಹ, ಸಾಹಿತ್ಯ, ಸಾಂಸ್ಕೃತಿಕ ಗೀಳಿನಿಂದಾಗಿ ಇವರು 'ಪುಸ್ತಕಮನೆ ಹರಿಹರಪ್ರಿಯ' ಎಂದೇ ಖ್ಯಾತರು. ಹೋರಾಟಮಯ ಬದುಕು, ಖಡಕ್ ಮಾತು, ಜಗಳಗಂಟಿತನ, ಇದ್ದಕ್ಕಿದ್ದಂತೆ ಪ್ರೀತಿಯ ಮಹಾಪೂರ, ಮತ್ತೆ ಏಕೋ ಮುನಿಸು, ಹಿದಿನ ಕರಾರುವಕ್ಕು ವಿಮರ್ಶೆ, ವ್ಯಾಖ್ಯಾನ, ಮಾಸದ ನೆನಪುಗಳು, ಖಂಡ-ತುಂಡ ಅಭಿಪ್ರಾಯ, ತೆಲುಗು ಭಾಷಾ ಸಾಹಿತ್ಯದಲ್ಲು ಪ್ರಾವೀಣ್ಯತೆ, ಆಂಧ್ರದ ಪ್ರತಿಷ್ಠಿತ ಪಿ.ಆರ್. ನಾರ್ಲ ಪ್ರಶಸ್ತಿ – ಇದಿಷ್ಟು ನಾನು ಕಂಡಷ್ಟು 'ಹರಿಹರಪ್ರಿಯ'.

ಇಂಥ ಈ ವ್ಯಕ್ತಿ ಐದು ವರ್ಷ ಒಂಟಿ ಸಾಹಸಿಯಾಗಿ 'ಪುಸ್ತಕಮನೆ' ಎಂಬ ಸಾಹಿತ್ಯಕ ಕಿರುಪತ್ರಿಕೆ ತಂದು ಸಧ್ಯ ವಿರಾಮ – 'ನಿಲುಗಡೆ' ಮಾಡಿದ್ದಾರೆ. ಆಗಸ್ಟ್ ೨೦೧೧ರ ೬೦ನೇ ಸಂಚಿಕೆಗೆ ನಮನ ಹೇಳಿದ್ದಾರೆ. ಕೊನೆಯ ಸಂಚಿಕೆಯಂತೂ, ರವೀಂದ್ರನಾಥ ಟಾಗೋರ್‌ರಿಗೆ ಗೌರವ ಸಲ್ಲಿಸಬಹುದಾದ ಅಪೂರ್ವ ವಾಹಿನಿ. ಹೊಸತು ಕಿನ್ನರಿಯಲ್ಲಿ, ಹಳೆಯ ಹಾಡನ್ನುಕ್ಕಿಸಿ ಮಧುರವಾಗಿ ನುಡಿಸಿದ ಗಾನಲಹರಿ ಈ ಸಂಚಿಕೆ! 'ಠಾಗೋರರಿಗೆ ನೊಬೆಲ್ ಗೌರವ ತಂದುಕೊಟ್ಟ 'ಗೀತಾಂಜಲಿ' ಕನ್ನಡದಲ್ಲಿ ೨೮ ಲೇಖಕ/ಕವಿಗಳ ಅನುವಾದಕ್ಕೆ ಪಾತ್ರವಾಗಿದೆ. ಅನುವಾದದ ಉತ್ಖನನ ಮಾಡಿದರೆ ಇನ್ನಷ್ಟು ಸಿಕ್ಕಬಹುದು' ಅನ್ನುತ್ತಾರೆ ಹರಿಹರಪ್ರಿಯ. ಸಂಶೋಧಕರಿಗೆ, ವಿಶ್ವವಿದ್ಯಾಲಯದ ಲಕ್ಷಲಕ್ಷ ರೂಪಾಯಿಗಳ ಸಂಬಳ ಎಣಿಸುವ ಹಲಕೆಲ 'ವಿದ್ವಾಂಸಕ'ರಿಗೆ ಸಾಹಿತ್ಯವೇ ಶೂನ್ಯವಾಗುತ್ತಿರುವಾಗ




ಹರಿಹರಪ್ರಿಯರ ಆಸಕ್ತಿ ಕುತೂಹಲ ಹುಟ್ಟಿಸಿದೆ. ಅವರು ನಮ್ಮೊಡನೆ ಜಗಳ ಆಡುತ್ತಲೇ ಮತ್ತೆ 'ಪುಸ್ತಕಮನೆ' ಪ್ರಕಟವಾಗಲು ಕಾರಣವಾಗಲಿ ಎಂದು ಆಶಿಸುತ್ತೇನೆ. ಮುಂದಿನ ಸಂಚಿಕೆಯಲ್ಲಿ ಇವರದ್ದೇ ಇನ್ನೊಂದು 'ಕುವೆಂಪು ಪತ್ರಗಳು' ವಿಶೇಷ ಬರಹ ಪ್ರಕಟವಾಗುತ್ತದೆ. ಠಾಗೋರರು ನಡೆದಾಡಿದ ಉಸಿರಾಡಿದ ಕೊಲ್ಕತ್ತಾದಲ್ಲಿ ಮಾತಾಡಿದ್ದು ಅದು.

–ಸಂಪಾದಕ







## Translated by Rabindranath Tagore

Where the mind is without fear
  and the head is held high
Where knowledge is free
Where the world has not been broken up
  into fragments by narrow domestic walls
Where words come out from the depth of truth
Where tireless striving stretches its arms
  towards perfection
Where the clear stream of reason
  has not lost its way
  into dreary desert sand of dead habit
Where the mind is led forward by thee
  into ever widening thougt and action
Into that heaven of freedom my Father
  let my country awake.

(Geetanjali, 1912)
Courtesy : Govt. of West Bengal

## ಪ್ರಾರ್ಥನೆ

### ೧. ಎಮ್.ಎನ್. ಕಾಮತ್ ಅವರ ಅನುವಾದ

ಎಲ್ಲಿ ಮನಕಳುಕಿರದೊ, ಎಲ್ಲಿ ತಲೆಬಾಗಿರದೊ,
ಎಲ್ಲಿ ತಿಳಿವಿಗೆ ತೊಡಕು ತೋರದಿಹುದಲ್ಲಿ;

ಎಲ್ಲಿ ಮನೆಯಿಕ್ಕಟ್ಟು, ಸಂಸಾರ ನೆಲೆಗಟ್ಟು,
ಧೂಳೊಡೆಯದಿಹುದೊ – ತಾನಾ ನಾಡಿನಲ್ಲಿ;

ಎಲ್ಲಿ ಸತ್ಯದಗಾಧ ನೆಲೆಯಿಂದ ಸವಿಮಾತು,
ಸಲ್ಲಲಿತ ನಡೆಯಿಂದ ಮುಂಬರಿವುದಲ್ಲಿ;

ಎಲ್ಲಿ ದಣಿವಿರದ ಸಾಧನೆಯು ಸಫಲತೆ ಕಡೆಗೆ,
ತೋಳನೀಡಿಹುದೊ ತಾನಾ ನಾಡಿನಲ್ಲಿ;

ಎಲ್ಲಿ ಸುವಿಚಾರ ಜಲದೊಸರು ನಿರ್ಮಲ ಹರಿದು,
ಕಾಳುರೂಢಿಯ ಮರಳೊಳಿಂಗಿ ಕೆಡದಲ್ಲಿ;

ಎಲ್ಲಿ ನೀನೆಮ್ಮ ಚಿಂತನವನುದ್ಯಮದ ಸುವಿ–
ಶಾಲತೆಯ ಪೂರ್ಣತೆಗೆ ಮುನ್ನಡೆಸುವಲ್ಲಿ;

ಅಲ್ಲಿಯಾ ಬಂಧನರಹಿತ ಸುಖದ ಸ್ವರ್ಗದಲಿ,
ಪಾಲಿಸೈ ಪಿತ! ನಮ್ಮ ನಾಡನೆಚ್ಚರಿಸಲಿ.

–ಬೋಧಿನಿ ೧೯೧೭

**ಕೃಪೆ :** ಎಮ್.ಎಸ್. ಕಾಮತ್ ಕೃತಿಗಳು, ಪುಟ ೨೧೩–೨೧೪, ಸಂಪುಟ ೪, ಸಂಪಾದಕರು: ಬಿ. ಲೀಲಾ ಭಟ್, ೧೯೯೫, ಕರ್ನಾಟಕ ಸಂಘ, ಪುತ್ತೂರು–೫೭೪ ೨೦೧.

## ೨. ಎಂ. ಗೋವಿಂದ ಪೈ ಅವರ ಅನುವಾದ

ಮನಸ್ಸೆಲ್ಲಿ ನಿಃಶಂಕವೋ, ತಲೆಯೆಲ್ಲಿ ನೆಟ್ಟನೆ ಮೇಲಕ್ಕೆ
ಎತ್ತಿರುವುದೋ, ಜ್ಞಾನಕ್ಕೆ ತಡಸಿಲ್ಲದ ಸ್ವತಂತ್ರವೆಲ್ಲಿದೆಯೋ,

ಎಲ್ಲಿ ಸಂಸಾರದ ಅರಗೋಡೆಗಳ ಇಟ್ಟಣೆಯಿಂದ ಜಗತ್ತು
ಹೋಳು ಹೋಳಾಗಿ ವಿಂಗಡಿಸಲ್ಪಟ್ಟಿರುವುದಿಲ್ಲವೋ,

ಮಾತುಗಳೆಲ್ಲಿ ನಿಮ್ನವಾದ ಸತ್ಯದಿಂದ ಜಲಕ್ಕನೆದ್ದು
ಮೂಡುವುವೋ,

ಎಲ್ಲಿ ದಣಿವರಿಯದ ಸಾಧನವು ಪೂರ್ಣತೆಯ ಕಡೆಗೆ ತನ್ನ
ಕಯ್ಗಗಳನ್ನು ಚಾಚುತ್ತಿದೆಯೋ,

ಎಲ್ಲಿ ವಿವೇಕದ ನಿರ್ಮಲವಾದ ಪ್ರವಾಹವು ನಿರ್ಜೀವವಾದ
ಕಟ್ಟಳೆಗಳ ಭಯಾನಕವಾದ ಉಸುಬು ಕಾಡಿನಲ್ಲಿ ಹಾದಿಗೆಟ್ಟಿಲ್ಲವೋ,

ಎಲ್ಲಿ ಸದಾ ಹರಡುತ್ತಿರುವ ಆಚಾರವಿಚಾರದಲ್ಲಿ ನೀನೇ

ನಮ್ಮ ಮನಸ್ಸನ್ನು ಮುಂದೊಯ್ಯುತ್ತಲಿರುವೆಯೋ.

ನನ್ನ ತಂದೆಯೇ. ಆ ಸ್ವಾತಂತ್ರ್ಯ ಸ್ವರ್ಗದಲ್ಲಿ ನನ್ನೀ
ಮಾತೃಭೂಮಿಯನ್ನು ಎಚ್ಚರಗೊಳಿಸು!

ಕೃಪೆ : ಗೋವಿಂದ ಪೈ ಸಂಶೋಧನ ಸಂಪುಟ (೧೯೨೫-೨೬ ಕನ್ನಡ ಸಹಕಾರಿ)
ಸಂಪಾದಕರು : ಹೆರಂಜೆ ಕೃಷ್ಣಭಟ್ಟ, ಮುರಳೀಧರ ಉಪಾಧ್ಯ, ಪುಟ ೧೩೫೪, ೧೯೯೫ ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಮಹಾತ್ಮಗಾಂಧಿ ಮೆಮೋರಿಯಲ್ ಕಾಲೇಜ್, ಉಡುಪಿ - ೫೭೬ ೧೦೨.



ವಿಜ್ಞಾನಿ ಐನ್‌ಸ್ಟೈನ್ ಜೊತೆ ಟಾಗೋರ್

## ೩. ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರ ಅನುವಾದ

ಚಿತ್ತವೆಲ್ಲಿ ಭಯ ಶೂನ್ಯ, ಉಚವೆಲ್ಲಿ ಶಿರ,
ಜ್ಞಾನವೆಲ್ಲಿ ಮುಕ್ತ, ಎಲ್ಲಿ ಗೃಹಭಿತ್ತಿಗಳು
ತಮ್ಮ ಪ್ರಾಂಗಣ ತಲದಲ್ಲಿ ಹಗಲಲ್ಲಿ ರಾತ್ರಿಯಲ್ಲಿ
ವಸುಧೆಯನ್ನು ಕ್ಷುದ್ರಖಂಡಗಳಾಗಿ ಮಾಡಿಲ್ಲ,
ಎಲ್ಲಿ ಮಾತು ಹೃದಯದ ಉತ್ಸಮುಖದಿಂದ
ಏಳುವುದು. ಎಲ್ಲಿ ಕರ್ಮಧಾರೆಯ ನಿರ್ವಾರಿತ ಸ್ರೋತ
ದೇಶ ದೇಶದಲ್ಲಿ ದಿಶೆ ದಿಶೆಯಲ್ಲಿ
ಅಜಸ್ರ ಸಹಸ್ರ ವಿಧ ಚರಿತಾರ್ಥಕ್ಕಾಗಿ ಹರಿಯುವುದು.
ಎಲ್ಲಿ ತುಚ್ಛ ಆಚಾರದ ಮರುವಾಲು ರಾಶಿ
ವಿಚಾರದ ಸ್ರೋತಃ ಪಥವನ್ನು ನುಂಗಿ ಮರೆಸಿ,
ಪೌರುಷವನ್ನು ನೂರು ತುಂಡು ಮಾಡಿಲ್ಲ.
ಎಲ್ಲಿ ನಿತ್ಯ ನೀನು ಕರ್ಮಚಿಂತೆಯನ್ನು ಆನಂದಕ್ಕೆ ಒಯ್ಯುವೆ.
ತಂದೆ, ಭಾರತೀಯರು ಆ ಸ್ವರ್ಗದಲ್ಲಿ ಎಚ್ಚರಗೊಳ್ಳುವಂತೆ
ನಿನ್ನ ಹಸ್ತದಿಂದ ನಿರ್ದಯವಾಗಿ ಆಘಾತಮಾಡು.

ಕೃಪೆ : ರವೀಂದ್ರನಾಥ ಠಾಕೂರರು, ಮಾಸ್ತಿ ವೆಂಕಟೇಶ ಅಯ್ಯಂಗಾರ್, ಪುಟ ೬೮, ಮೈಸೂರು ವಿಶ್ವವಿದ್ಯಾನಿಲಯ ಕನ್ನಡ ಗ್ರಂಥಮಾಲೆ, ೬, ಜೀವನ ಕಾರ್ಯಾಲಯ, ಬೆಂಗಳೂರು ೧೯೫೫

## ೪. ಜಿ.ವಿ. ನಾರಾಯಣ ಮೂರ್ತಿ ಅವರ ಅನುವಾದ

ಎಲ್ಲಿ ಮನಕೆ ಭಯವಿಲ್ಲವೋ ಎಲ್ಲಿ
ಶಿರ ಮಣಿಯದಿಹುದೋ,

ಎಲ್ಲಿ ಸ್ವಚ್ಛಂದ ಜ್ಞಾನವಿಹುದೋ,
ಎಲ್ಲಿ ಸಂಕುಚಿತ ರಾಷ್ಟ್ರ-ಕುಡ್ಯಗಳಿಂದ ಲೋಕ
ಹರಿದು ಹಂಚದಿಹುದೋ,

ಎಲ್ಲಿ ಸತ್ಯದ ನಿಗೂಢತೆಯಿಂದ ವಚನ ಉಲಿವುದೋ
ಎಲ್ಲಿ ದಣಿವರಿಯದಿಹ ಹೋರಾಟ ತನ್ನ
ಬಾಹುಗಳನನಂತದೆಡೆಗೆ ಚಾಚಿಹುದೋ,

ಎಲ್ಲಿ ವಿಚಾರದ ಪರಿಶುದ್ಧ ಹೊಳೆ ನಿರ್ಜೀವ
ಮನಃಪ್ರವೃತ್ತಿಯ ಆನಂದಶೂನ್ಯ
ಮರುಭೂಮಿಯ ತನ್ನ ಮಾರ್ಗವನು ತಪ್ಪದಿಹುದೋ,

ಎಲ್ಲಿ ಮನ ಸದಾ ವಿಕಸಿತವಹ ಭಾವ
ಜೀವನದೆಡೆಗೆ ನಿನ್ನಿಂದಲೇ ಚಾಲಿತವಹುದೋ,

ಅಂಥ ಸ್ವಾತಂತ್ರ್ಯ ಸ್ವರ್ಗಕ್ಕೆ, ನನ್ನ
ತಂದೇ, ಎನ್ನ ನಾಡನ್ನೆಚ್ಚರಿಸು.

**ಕೃಪೆ :** ಪ್ರಬುದ್ಧ ಕರ್ನಾಟಕ, ಪುಟ ೧೩೪, ಸಂಪುಟ ೪೩, ಸಂಚಿಕೆ ೧, ರವೀಂದ್ರಾಂಕ, ಮೈಸೂರು ವಿಶ್ವವಿದ್ಯಾಲಯ, ೧೯೬೧,

## ೫. ಗುಂಡ್ಮಿ ಚಂದ್ರಶೇಖರ ಐತಾಳ ಅವರ ಅನುವಾದ

ಎಲ್ಲಿ ಮನ ಹೆದರಿರದೋ, ಎಲ್ಲಿ ಶಿರ ಬಾಗಿರದೋ:
ಎಲ್ಲಿ ಜ್ಞಾನವು ಬಂಧ ಮುಕ್ತವಾಗಿಹುದೋ?
ಎಲ್ಲಿ ಗೃಹಭಿತ್ತಿಗಳು ವಿಸ್ತರದ ವಸುಧೆಯನು
ಕ್ಷುದ್ರಖಂಡಗಳಾಗಿ ಛಿದ್ರಿಸಿರವೋ;
ಎಲ್ಲಿ ನುಡಿ ಸತ್ಯದಾ ಆಳದಿಂದೇಳುವುದೋ:
ಎಲ್ಲಿ ಸಂತತ ಕರ್ಮಯೋಗ ತೋಳನು ಚಾಚಿ,
ಪರಿಪೂರ್ಣತೆಯ ಜಿಡದೆ ತಬ್ಬಿ ಓಡಿಯುವುದೋ:
ಎಲ್ಲಿ ತುಚ್ಛಾಚಾರ - ಮಂಕು ಮರುಭೂಮಿ

ವಿಚಾರವಾಹಿನಿ ಪಥವ ನುಂಗಿ ನೊಣೆದಿರದೋ:
ಎಲ್ಲಿ ನೀ ಚಿತ್ತವನು ಅನಂತ ಆನಂದದಾ ಮುಂದೆ ತಂದಿರುವೆಯೋ:
ಆ ಅದೋ, ಸ್ವಾತಂತ್ರ್ಯ ಸ್ವರ್ಗದಲ್ಲಿ ಭಾರತವು
ಓ ತಂದೆ, ಎಂದೆಂದೂ ಎಚ್ಚತ್ತು ಇರಲಿ.

ಕೃಪೆ : ಪ್ರಬುದ್ಧ ಕರ್ನಾಟಕ, ಪುಟ ೧೬೪, ಸಂಪುಟ ೪೩ ಸಂಚಿಕೆ ೧, ರವೀಂದ್ರಾಂಕ, ೧೯೬೧, ಮೈಸೂರು ವಿಶ್ವವಿದ್ಯಾನಿಲಯ.

---

## ಕವಿ ರವೀಂದ್ರರರನ್ನು ಕುರಿತು



ಚಿಕ್ಕಗಣ್ಣಿನ ಕೆಳಗೆ ಬೆಳ್ಳಿ ಮೋಡದ ಗಡ್ಡ
ಅಲ್ಲಿಂದ ಇಲ್ಲಿನತನಕ ಬೆಳಕಿನ
ನಿಲುವಂಗಿ ತೊಟ್ಟು ನಿಂತವನು,

ಬೈಗು ಬೆಳಗಿನ ಬೆಂಕಿಯೆದೆಯಲ್ಲಿ
ಗಾಳಿ ಕುಂಚವನದ್ದಿ ಸಾವಿರ ಚಿತ್ರ
ಬರೆದವನು,

ಮೂಕ ಹೃದಯದಸಂಖ್ಯ ಭಾವನೆಗಳಿಗೆ
ಬಣ್ಣದಂಗಿಯ ತೊಡಿಸಿ ಗೆಜ್ಜೆಯ ಕಟ್ಟಿ
ಆಡಿಸಿದವನು,

ಮಿರುಗುವಿಬ್ಬನಿಯಿಂದ ಉರಿದ
ಚಿಕ್ಕೆಯತನಕ
ಇರುವ ಬೆರಗಿನ ತಂತಿಯೆಲ್ಲವನು
ಮಿಡಿದವನು,
ಓ ಕವಿವರ್ಯ
ನೀನು ಪ್ರತಿಭೆಯ ಸೂರ್ಯ.

–ಡಾ. ಜಿ.ಎಸ್. ಶಿವರುದ್ರಪ್ಪ




# ಮರುಚಿಂತನೆ ಅಗತ್ಯವಾಗಿರುವ ರವೀಂದ್ರ ರಂಗ

– ಡಾ. ಎಚ್.ಎಸ್. ಶಿವಪ್ರಕಾಶ

ಒಬ್ಬ ಯುಗಪ್ರವರ್ತಕ ಕಲಾಕಾರನಿಗೆ ಅತ್ಯುನ್ನತ ಗೌರವ ಮತ್ತು ಪ್ರತಿಷ್ಠೆಗಳು ದೊರಕಿದ ಮಾತ್ರಕ್ಕೇ ಅವರ ಕೃತಿಗಳ ತಿರುಳು ಎಲ್ಲರನ್ನೂ ಮುಟ್ಟಬಲ್ಲದೇ? ಇಲ್ಲ ಎನ್ನುವುದಕ್ಕೆ ರವೀಂದ್ರನಾಥ ಟ್ಯಾಗೋರರೇ ಸಾಕ್ಷಿ. ರವೀಂದ್ರರು ತಮ್ಮ ಇಳಿವಯಸ್ಸಿನಲ್ಲಿ ಚಿತ್ರಕಲೆಯ ಮೂಲಕ ಸ್ವಯಮಾಭಿವ್ಯಕ್ತಿಯನ್ನು ಶುರು ಮಾಡಿದಾಗ ಅವರ ಅಭಿಮಾನಿಗಳೇ ಅದನ್ನು ಅನುಮಾನದಿಂದ ನೋಡಿದರು. ಯಾಕೆಂದರೆ ರವೀಂದ್ರರು ಯಾವ ಕಲಾತ್ಮಕ ಮೌಲ್ಯಗಳ ಸಂಕೇತವಾಗಿ ಅವರಿಗೆ ಕಂಡಿದ್ದರೋ ಅದಕ್ಕಿಂತ ಭಿನ್ನವಾದ, ವಿರುದ್ಧವಾದ ಅಂಶಗಳು ಅವರ ಚಿತ್ರಕಲೆಯಲ್ಲಿ ಹಾಸುಹೊಕ್ಕಾಗಿದ್ದವು. ಇದೇ ರೀತಿ ನಾಟಕ ಮತ್ತು ರಂಗಭೂಮಿಗಳಿಗೆ ಅವರಿತ್ತ ಅಭೂತಪೂರ್ವ ಕೊಡುಗೆಯೂ ಹಲವು ರೀತಿಯಲ್ಲಿ ಉದಾಸೀನಕ್ಕೊಳಗಾಯಿತು. ಈ ಉದಾಸೀನಕ್ಕೆ ಹಲವು ಕಾರಣಗಳು.

ರವೀಂದ್ರರ ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಕೀರ್ತಿ ೧೯೩೦ರ ಹೊತ್ತಿಗೆ ಪರಾಕಾಷ್ಠೆಯನ್ನು ತಲುಪಿತ್ತು. ಕವಿಯಾಗಿ, ಚಿಂತಕರಾಗಿ ಅವರು ಭಾರತದ ಒಳಗೆ ಮತ್ತು ಹೊರಗೆ ಆದಾಗಲೇ ಒಂದು ದಂತಕತೆಯಾಗಿ ಬೆಳೆದಿದ್ದರು. ಆದರೆ, ಆ ಬಳಿಕ ಅವರು ಒಂದು ಅರ್ಥದಲ್ಲಿ ಮೂಲೆ ಸೇರಿದರು. ಪಡುವಣ ನಾಡುಗಳಲ್ಲಿ ಅವರ ಖ್ಯಾತಿ ಮ್ಲಾನವಾಗತೊಡಗಿತು. ಅವರನ್ನು ಮೆಚ್ಚಿಕೊಂಡವರು, ಉದಾಹರಣೆಗೆ, ಅವರಿಗೆ ನೊಬೆಲ್ ದೊರಕುವಲ್ಲಿ ಮಹತ್ತರ ನೆರವು ನೀಡಿದ ಯೇಟ್ಸ್ ಅವರ ಬಗ್ಗೆ ಭ್ರಮ ನಿರಸನಗೊಳ್ಳತೊಡಗಿದರು. ರವೀಂದ್ರರ ಹಲವು ಮುಖ್ಯ ನಾಟಕಗಳು ರಚನೆಯಾಗಿದ್ದು ಅವರ ಖ್ಯಾತಿ ಮ್ಲಾನವಾಗತೊಡಗಿದ ನಂತರ.

ರವೀಂದ್ರರ ಪ್ರತಿಭೆ ದಿಗ್ಭ್ರಮೆಗೊಳಿಸುವಷ್ಟು ಬಹುಮುಖಿಯಾದುದು ಹಾಗೂ ವಿಕಾಸಶೀಲವಾದುದು. ಅದನ್ನು ಒಂದು ದೃಷ್ಟಿಯಲ್ಲಿ [illegible]



ಮನುಷ್ಯ ಸಾಧ್ಯವಲ್ಲ. ಅವರ ಕಾವ್ಯ ಮತ್ತು ಕಥಾಸಾಹಿ
ಆ ಹೊತ್ತಿಗಾಗಲೇ ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ
ಸ್ವೀಕೃತಿಯನ್ನು ಪಡೆದಿದ್ದವು. ಆದರೆ ರವೀಂದ್ರರು ತಮ
ನಾಟಕಕೃತಿಗಳಲ್ಲಿ ಮಾಡಹೊರಟಿದ್ದು ಅವರು ತಮ
ಇತರ ಪ್ರಕಾರಗಳಲ್ಲಿ ಸಾಧಿಸಿದ್ದಕ್ಕಿಂತ ಭಿನ್ನವಾದದ್ದನ್ನು
ಆದ್ದರಿಂದ ಅವರ ಕಾವ್ಯ, ಕಥಾಸಾಹಿತ್ಯಗಳನ್ನು
ಅರ್ಥಮಾಡಿಕೊಳ್ಳುವುದಕ್ಕಿಂತ ಭಿನ್ನವಾದ ಗ್ರಹಣಕ್ರಮ
ಅವರ ನಾಟಕಗಳನ್ನು ಬೆಲೆಗಟ್ಟುವಲ್ಲಿ ಅಗತ್ಯವಾಗಿತ್ತು
ಇಂಥದೊಂದು ಕ್ರಮವನ್ನು ಕರಗತಗೊಳಿಸಿಕೊಳ್ಳುವ
ರವೀಂದ್ರರ ಅಭಿಮಾನಿಗಳು ಸೋತರು. ರವೀಂ
ಪ್ರತಿಭೆ ಅನಿರೀಕ್ಷಿತ ದಿಕ್ಕುಗಳಲ್ಲಿ ತನ್ನ ಜಾಡನ್ನು
ಬದಲಿಸುತ್ತಿತ್ತು. ಆ ಬದಲಾವಣೆಗಳನ್ನು ಅನುಸರಿಸಿ ಅರ್ಥಮಾಡಿಕೊಳ್ಳುವಷ್ಟು ಭಾವಯ
ಪ್ರತಿಭೆ ಹೊಂದಿದವರು ತೀರಾ ಅಪರೂಪ.

ರವೀಂದ್ರರು ಕಾವ್ಯ, ಕಥನಕಲೆಗಳಲ್ಲಿ ತೋರಿದ ಮಾಂತ್ರಿಕ ಕೈಚಳಕ ಹೊಸತಾದರೂ ಅವುಗಳಿಗೆ ಪೂರ್ವ ಮಾದರಿಗಳಿದ್ದವು. ಉದಾಹರಣೆಗೆ 'ಗೀತಾಂಜಲಿ'ಯ ರಚನೆಗಳು ಸಾಂಪ್ರದಾಯಿಕ ಭಾರತೀಯ ಅನುಭಾವೀ ಕಾವ್ಯದ ತಳಪಾಯವನ್ನು ಬದಲಾಯಿಸಿದವು

**ನನ್ನ ಶಿರವ ನತಗೊಳಿಸು ನಿನ್ನ ಚರಣತಲದಲಿ**
**ಎಲ್ಲ ಅಹಮು ಮುಳುಗಿಸಿ ಬಿಡು ನನ್ನ ಕಣ್ಣ ನೀರಲಿ**
**ಎಲ್ಲರೊಡನೆ ಯುಕ್ತಗೊಳಿಸು**
**ಸಕಲರಿಂದ ಮುಕ್ತಗೊಳಿಸು**
**ಆನಂದಗೊಳಿಸಾನಂದಗೊಳಿಸಾನಂದ**
**ಗೊಳಿಸು ಹೇ**

ಇಂತಹ ಪ್ರಾತಿನಿಧಿಕ ಸಾಲುಗಳು ಅನುಭಾವೀ ಕಾವ್ಯದ ಉಪಮೆ, ಸಂಕೇತಗಳನ್ನು ಸಾಂಘಿಕತೆಯ, ಮತೀಯತೆಯ ಜಡತೆಯಿಂದ, ಜಡ್ಡಿನಿಂದ ಬಿಡುಗಡೆಗೊಳಿಸಿದವು. ಆದರೆ, ಅವುಗಳಲ್ಲಿ ಕಾಣುವ ಅನುಭವತೀವ್ರತೆಗೆ ಬಂಗಾಳಿಯ ವೈಷ್ಣವ ಕಾವ್ಯದಲ್ಲಿ, ಬೌಲ್ ಪರಂಪರೆಯಲ್ಲಿ ಅಷ್ಟೇ ಅಲ್ಲದೆ, ಬಹುತೇಕ ಭಾರತೀಯ ಭಕ್ತಿ/ ಅನುಭಾವೀ ಕಾವ್ಯದಲ್ಲಿ ಪೂರ್ವಮಾದರಿಗಳಿದ್ದವು. ಆದರೆ ಅವರ ನಾಟಕಗಳಿಗೆ ಈ ತೆರನ ಪೂರ್ವ ಮಾದರಿಗಳಿರಲಿಲ್ಲ. ಆದ್ದರಿಂದ ನಾಟಕರಚನೆಯ ಮಾದರಿಗಳನ್ನೂ ನಿರ್ಮಾಣಗೊಳಿಸು ಹೊಣೆ ರವೀಂದ್ರರಿಗಿತ್ತು.

ಸಂಸ್ಕೃತ ರಂಗಭೂಮಿಯ ಸುವರ್ಣಯುಗ ಮೊದಲ ಸಹಸ್ರಮಾನದ ನಂತ ನಶಿಸಿಹೋಗಿತ್ತು. ಆ ನಂತರ ರಚನೆಯಾದ ಜಯದೇವನ 'ಗೀತಗೋವಿಂದ'ವನ್ನು ಒಂದು ರಂಗಕೃತಿಯಾಗಿ ನೋಡುವುದು ಸಾಧ್ಯವಿದೆಯಾದರೂ ಅದು ಸೃಜಿಸಿದ ಸಂಗೀತ ನೃ ಮಾದರಿ ರಂಗಭೂಮಿಯ ಮುಖ್ಯಧಾರೆ ಆಗಲಿಲ್ಲ. ನಮ್ಮ ದೇಶಭಾಷೆಗಳಲ್ಲಿ ಶಿಷ್ಟ ಕಾವ್ಯ, ಕಥನ ಸಾಹಿತ್ಯಗಳಿದ್ದಂತೆ ಹೊರತು ನಾಟಕಕೃತಿಗಳ ಲಿಖಿತ ಪರಂಪರೆ ಇರಲಿಲ್ಲ.

ಪ್ರಯೋಗವಾದರೂ ಅದು ಅಷ್ಟು ಸಮಂಜಸವಾಗಿರಲ್ಲಿಲ. ರವೀಂದ್ರರ ರಂಗಪ್ರತಿ
ಇನ್ನೊಂದು ರಂಗಭೂಮಿಯನ್ನು ಬೇಡುತ್ತಿತ್ತು. ಅದನ್ನು ಅವರೇ ಹುಡುಕಿಕೊಳ್ಳಬೇಕಿತ್ತು
ಜಾತ್ರಾದವರು ರವೀಂದ್ರರ ನಾಟಕಗಳನ್ನು ಎತ್ತಿಕೊಳ್ಳುತ್ತಿರಲಿಲ್ಲ. ಐವತ್ತರ ದಶಕದ
ಉತ್ಪಲದತ್ತರು ಜಾತ್ರಾ ರಂಗಭೂಮಿಗೆ ಹೊಸ ರಾಜಕೀಯ ದಿಕ್ಕನ್ನು ಕೊಡುವ ತನ
ಅದು ಒಂದು ಶ್ರೀಮಂತ ಪಳೆಯುಳಿಕೆಯಾಗಿತ್ತು. ಇತ್ತ ಕಂಪೆನಿಯವರಿಗೂ ರವೀಂದ್ರ
ನಾಟಕಗಳು ಒಗ್ಗುತ್ತಿರಲಿಲ್ಲ. ಸ್ವಾತಂತ್ರ್ಯೋತ್ತರ ಕಾಲದಲ್ಲಿ ಪಶ್ಚಿಮದ ನೆರಳಿನಲ್ಲಿ ಸೃಷ್ಟಿಯಾದ
ರಾಷ್ಟ್ರೀಯ ರಂಗಭೂಮಿಯವರಿಗೂ ರವೀಂದ್ರರ ನಾಟಕಗಳು ಪ್ರಸ್ತುತವಾಗಲಿಲ್ಲ. ಅಲ್ಲದೆ
ಆ ಹೊತ್ತಿಗೆ ರವೀಂದ್ರರ ಜೊತೆಗೆ ನಾವು ಅಲ್ಲ ತಿಳುವಳಿಕೆಯಿಂದ ಜೋಡಿಸಿದ ಸರ
ಆದರ್ಶವಾದಿತ್ವ ಒಂದು ಜೋಕಾಗಿತ್ತು. ನಮ್ಮ ಏಕಮುಖಿ ತಿಳುವಳಿಕೆಗೆ ರವೀಂದ್ರರ ಪ್ರತಿಭ
ವೈವಿಧ್ಯ ಅರ್ಥವಾಗಿರಲಿಲ್ಲ. ಹೀಗಾಗಿ ಆಧುನಿಕ ರಂಗಭೂಮಿಯವರೂ ರವೀಂದ್ರರನ್ನು
ಕಡೆಗಣಿಸಿದರು. ರಾಷ್ಟ್ರೀಯ ರಂಗಶಾಲೆ ಶುರುವಾದ ಮೇಲೆ ಎರಡು ದಶಕಗಳಿಗಿಂತ ಹೆಚ್ಚಿ
ಕಾಲ ಆ ಸಂಸ್ಥೆ ರವೀಂದ್ರ ನಾಟಕಗಳ ತಂಟೆಗೆ ಹೋಗಲಿಲ್ಲ. ಇನ್ನು ಪ್ರಗತಿವಾದಿಗಳು ತಮ
ಪುರೋಗಾಮಿ ಆತುರದಲ್ಲಿ ರವೀಂದ್ರರ ನಾಟಕಗಳನ್ನು ಕ್ಯಾರೆ ಅನ್ನಲ್ಲಿಲ. ಶಂಭುಮಿತ್ರ
ಅವರು ಐವತ್ತರ ದಶಕದ ನಂತರ ತಮ್ಮ 'ರಕ್ತ ಕರೊಬಿ' ಪ್ರಯೋಗದ ಮೂಲಕ ರವೀಂದ್ರ
ನಾಟಕಗಳ ರಂಗಶಕ್ತಿಯನ್ನು ಸಾಬೀತು ಮಾಡಿದರು.

ಈ ಹಿಂದೆ ರವೀಂದ್ರರ ನಾಟಕಗಳ ಪ್ರಯೋಗಗಳು ಬೇಕಾದಷ್ಟು ಭಾರತದಲ್ಲಿ
ಮತ್ತು ಹೊರನಾಡುಗಳಲ್ಲಿ ಆಗಿದ್ದವು. ರವೀಂದ್ರರ ಮನೆಯ ಆವರಣದಲ್ಲಿ. ಆ ನಂತರ
ವಿಶ್ವಭಾರತಿಯಲ್ಲಿ. ಕೋಲ್ಕತ್ತಾದ ವೃತ್ತಿ ರಂಗಭೂಮಿಯಲ್ಲಿ ಪ್ರಯೋಗಗಳಾಗಿದ್ದವು. ೧೯೨೦ಕ
ಮುಂಚೆ ಯೂರೋಪು, ಉತ್ತರ ಅಮೆರಿಕಾ, ಆಸ್ಟ್ರೇಲಿಯಾಗಳಲ್ಲಿ ಪ್ರಯೋಗಗಳಾಗಿ ಅಲ್ಲಿ
ನಿಂತುಹೋದವು. ಅವರ 'ಚಿತ್ರಾ' ನಾಟಕವನ್ನು ಪಡುವಣ ಸಂಸ್ಕೃತಿ ಬಹಳ ಮೆರೆಸಿತು
ಕೆಲವು ಪತ್ರಿಕಾ ವಿಮರ್ಶೆಗಳಂತೂ ಇಂತಹ ಸ್ತ್ರೀವಾದಿ ದೃಷ್ಟಿಯ ನಾಟಕಕಾರ ಭಾರತದಲ್ಲಿ
ಹುಟ್ಟುವುದಕ್ಕೆ ಬದಲಾಗಿ ಯೂರೋಪಿನಲ್ಲಿ ಹುಟ್ಟಬೇಕಿತ್ತು ಎಂದವು. ಡಬ್ಲಿನ್‌ನ ಅ
ಥಿಯೇಟರ್‌ನಲ್ಲಿ ಯೇಟ್ಸ್ ಮತ್ತು ಲೇಡಿ ಗ್ರೆಗೊರಿ ರವೀಂದ್ರರ ನಾಟಕವನ್ನು ಪ್ರದರ್ಶಿಸಿದ್ದರು
ನಾಝಿಗಳ ಕಾಲದಲ್ಲಿ ಯಹೂದಿಗಳನ್ನು ಗ್ಯಾಸ್ ಚೇಂಬರ್‌ಗೆ ಕಳಿಸುತ್ತಿದ್ದ ಹೊತ್ತಿನಲ್ಲಿ
ಪೋಲೆಂಡಿನ ಒಬ್ಬ ಯಹೂದಿ ನಿರ್ದೇಶಕ ರವೀಂದ್ರರ 'ಪೋಸ್ಟ್ ಆಫೀಸ್' ನಾಟಕವನ್ನು
ಯಹೂದಿ ಮಕ್ಕಳ ಕೈಲಿ ಆಡಿಸುತ್ತಿದ್ದ. ಇಂದಲ್ಲ ನಾಳೆ ಗ್ಯಾಸ್ ಚೇಂಬರ್‌ನಲ್ಲಿ ಸಾವಿ
ಬಲಿಯಾಗಲಿದ್ದ ಮಕ್ಕಳನ್ನು ಈ ನಾಟಕದ ಮೂಲಕ ಅವರ ಅನಿವಾರ್ಯವಾದ ಸಾವಿ
ತಯಾರು ಮಾಡುತ್ತಿದ್ದ. ನಾಝಿ ಹಿಂಸೆಯ ಪ್ರತೀಕವಾಗಿ ಈ ನಾಟಕ ಯೂರೋಪಿನಲ್ಲಿ
ಒಂದು ಚರಿತ್ರಾರ್ಹ ಪಾತ್ರ ವಹಿಸಿತು. ನ್ಯೂಯಾರ್ಕಿನಲ್ಲಿ ಕೂಡ ಕೃಷ್ಣ ಶಾಹ ಎನ್ನುವವರು
'ಚಿತ್ರಾ' ದ ಭರ್ಜರಿ ಪ್ರಯೋಗ ಮಾಡಿದ್ದರು. ರವೀಂದ್ರರ ನಾಟಕಗಳ ಬಗೆಗಿನ ಈ ಅತೀವ
ಉತ್ಸಾಹ ೨೦ರ ನಂತರ ಪಶ್ಚಿಮದಲ್ಲಿ ಇಳಿಮುಖವಾಗಿ ೩೦ರ ನಂತರ ಅಡಗಿಹೋಯಿತು
ಆ ಮುಂದೆ ರವೀಂದ್ರರ ನಾಟಕಗಳ ಇಂಗ್ಲಿಷ್ ಅನುವಾದವನ್ನು ಮ್ಯಾಕ್‌ಮಿಲನ್
ಪ್ರಕಟಿಸುತ್ತಲೇ ಹೋಯಿತು. ಆದರೆ ಪ್ರಯೋಗಗಳಾಗಲಿಲ್ಲ. ಅಲ್ಲದೆ, ರವೀಂದ್ರ ನಾಟಕಗಳ
ಬಗ್ಗೆ ಕಟುವಾದ ಟೀಕೆ, ವಿಮರ್ಶೆ ಬರತೊಡಗಿದವು. ಆ ಅನುವಾದಗಳ ದೌರ್ಬಲ್ಯ
ಇದಕ್ಕೆ ಕಾರಣವಾಯಿತು. ಈ ಹೊತ್ತಿಗೆ ರವೀಂದ್ರರು ಬೇರೆ ಆಗ ಯೂರೋಪಿನ

ಜನಪ್ರಿಯವಾಗಿದ್ದ ರಾಷ್ಟ್ರೀಯತಾ ವಾದವನ್ನು ಟೀಕಿಸಿ ಇಡೀ ಯೂರೋಪಿಗೆ ಮುಜುಗರ ಉಂಟುಮಾಡಿದ್ದರು. ಇವೆಲ್ಲಕ್ಕಿಂತ ಹೆಚ್ಚಿನ ಕಾರಣ ಪಶ್ಚಿಮದವರು ತಮ್ಮ ಮಾದರಿಗಳಿಗನುಗುಣವಾಗಿ ರವೀಂದ್ರರ ನಾಟಕಗಳನ್ನು ಓದಿದ್ದು. ಈತ ಮೂಲಭೂತವಾಗಿ ಕವಿ, ನಾಟಕಕಾರನಲ್ಲ ಎಂದು ಘೋಷಿಸಿದವು. ಪುರೋಹಿತರ ನಂಜಿ ಪಶ್ಚಿಮಬುದ್ಧಿಯಾದ ನಮ್ಮ ಪ್ರಗತಿವಾದಿ, ಪ್ರಯೋಗವಾದಿ ರಂಗಕರ್ಮಿಗಳೂ ಪಶ್ಚಿಮದವರ ಅಭಿಪ್ರಾಯವನ್ನೇ ಗಿಳಿಪಾಠ ಒಪ್ಪಿಸಿದರು.

ಭಾರತ ರಂಗಭೂಮಿಗೆ ರವೀಂದ್ರರ ಕೊಡುಗೆಯನ್ನು ಅರ್ಥ ಮಾಡಿಕೊಳ್ಳಬೇಕಾದರೆ ಅವರನ್ನು ಯೂರೋಪಿನ ಇಬ್ಬರು ಮಹಾನ್ ಆಧುನಿಕ ನಾಟಕಕಾರರಾದ ಇಬ್ಸನ್ ಮತ್ತು ಸ್ಟ್ರಿಂಡ್‌ಬರ್ಗರ ಜೊತೆ ಹೋಲಿಸಿ ನೋಡಬೇಕು.

ಇಬ್ಸನ್‌ನ ಆಧುನಿಕ ವಸ್ತು ಮತ್ತು ಶೈಲಿಗಳ ಸ್ಪಷ್ಟತೆಯ ಕಾರಣ ಆತನ ಪ್ರಭಾವ ಇಡೀ ಜಗತ್ತಿನ ರಂಗಭೂಮಿಯ ಮೇಲೆ ಆಯಿತು. ಇಬ್ಸನ್ನನಿಗಿಂತ ಹೆಚ್ಚು ಪ್ರತಿಭಾಶಾಲಿಯಾದ ಸ್ಟ್ರಿಂಡ್‌ಬರ್ಗನ ಪ್ರಭಾವ ಆ ಮಟ್ಟಿಗೆ ಆಗಲಿಲ್ಲ. ಯಾಕೆಂದರೆ ಸ್ಟ್ರಿಂಡ್‌ಬರ್ಗ್ ಅನುಭವ ತೀವ್ರತೆಯ ನಾಟಕಕಾರನೇ ಹೊರತು ವಿಚಾರಗಳ ವಕೀಲನಾಗಿರಲಿಲ್ಲ. ಅಲ್ಲದೆ, ತನ್ನ ಶೈಲಿಯನ್ನು ಅನುಭವ ಬದಲಾದ ಹಾಗೆ ಬದಲಾಯಿಸುತ್ತಿದ್ದ. ರವೀಂದ್ರರು ಹಾಗೆ. ಅವರ ನಾಟಕಗಳನ್ನು ಸಿದ್ಧವಸ್ತುವಾಗಿ ನೋಡುತ್ತಿರಲ್ಲಿಲ. ಹೊಸ ಪ್ರಯೋಗಗಳಿಗನುಸಾರ ಅವನ್ನು ಬದಲಾಯಿಸುತ್ತಿದ್ದರು. ಒಂದೊಂದು ಸಲ ಇಡೀ ನಾಟಕವನ್ನೇ ಮತ್ತೆ ಮತ್ತೆ ಬರೆಯುತ್ತಿದ್ದರು. ಅವರ 'ತಪತಿ' ನಾಟಕ ಹಿಂದೆ ಅವರು ರಚಿಸಿದ 'ರಾಜಾ ಓ ರಾಣಿ' ನಾಟಕದ ಪುನಾರಚನೆ. ಸ್ಟ್ರಿಂಡ್‌ಬರ್ಗನ ಪ್ರೌಢನಾಟಕಗಳಂತೆ ರವೀಂದ್ರ ನಾಟಕಗಳು ವಾಸ್ತವತಾವಾದಿ ರಚನೆಗಳಿಗೆ ಹೊರತು. ಅಲ್ಲಿ ನೇರವಾದ ವಿನ್ಯಾಸವಿಲ್ಲ ಅಥವಾ ದೇಶಕಾಲೈಕ್ಯವಿಲ್ಲ. ಅವುಗಳು ಉಪಮೆ ಸಂಕೇತಗಳ ಮೂಲಕ ರಂಗದ ಮೇಲೆ ಸೃಜಿಸುವ ಲೋಕ ಒಂದು ಸ್ವಪ್ನಲೋಕ. ಉದಾಹರಣೆಗೆ, ಅವರ ಅತ್ಯಂತ ರಾಜಕೀಯ ಮಹತ್ವದ ನಾಟಕಗಳಾದ 'ಮುಕ್ತಧಾರಾ' ಅಥವಾ 'ರಕ್ತಕೊರಜಿ' ಆಗುವುದು ಒಂದು ತೆರನ ಕನಸಿನಲ್ಲಿ. ಅಲ್ಲಿನ ಪಾತ್ರಗಳು ಪಾತ್ರಗಳಲ್ಲ. ಅವು ಅನುಭವ ಸಾಧ್ಯತೆಯ ರೂಹುಗಳು. ಆದರೂ ಇಂಥಾ ಸ್ವಪ್ನ ಸನ್ನಿವೇಶ, ಪಾತ್ರಗಳು ಭಾವಾನುಭವ ತೀವ್ರತೆಯಿಂದಾಗಿ ನಿಜಕ್ಕಿಂತಲೂ ನಿಜವಾಗಿರುತ್ತವೆ. ಈ ಕಾರಣದಿಂದಲೇ 'ಪೋಸ್ಟಾಫೀಸ್' ನ ಬಾಲಕ ಸ್ವಪ್ನಜೀವಿಯಾದರೂ ಅವನು ಪೋಲೆಂಡಿನ ನಾಜಿಯುಗದಲ್ಲಿ ಒಂದು ಸ್ಪಷ್ಟ ಚಾರಿತ್ರಿಕ ಸನ್ನಿವೇಶದ ರೂಪಕವಾದ. ಇದೇ ನಾಟಕವನ್ನು ಈಚೆಗೆ ಮಣಿಪುರದ ಕನ್ಹಯ್ಯಲಾಲ್ ಅವರು ಪ್ರಯೋಗಿಸಿದಾಗ ಅದೇ ನಾಟಕ ಮಣಿಪುರದ ಹಿಂಸ್ರ ವಾತಾವರಣದ ಮೇಲಿನ ಟಿಪ್ಪಣಿಯಾಯಿತು. ಹೀಗೆ ಒಂದು ಚಾರಿತ್ರಿಕ ಸನ್ನಿವೇಶದ ಶಿಶುವಾಗಲು ನಿರಾಕರಿಸುವ ರವೀಂದ್ರರ ನಾಟಕಗಳು ಚರಿತ್ರೆಯ ಹಲವು ಕೊಂಡಗಳನ್ನು ಹಾಯುವಲ್ಲಿ ನೆರವಾಗಬಲ್ಲವು.

ರವೀಂದ್ರರ ನೂರಾ ಐವತ್ತನೇ ಹುಟ್ಟುಹಬ್ಬದ ಆಚರಣೆಯ ಸಂದರ್ಭದಲ್ಲಿ ಅವರ ಚಿತ್ರಕಲೆಯ ಬಗೆ ಪುನರಾಲೋಚನೆ ನಡೆಯುತ್ತಿರುವಾಗ ಅವರ ನಾಟಕಗಳ ಬಗೆಗಿನ ಮರುಚಿಂತನೆ, ಅವುಗಳ ಮರುಪ್ರಯೋಗಗಳು ಅಗತ್ಯವಾಗಿವೆ.

*

# ಎಂ.ಎಫ್. ಹುಸೇನ್



ಹುಸೇನ್ ವಿವಾದಾತ್ಮಕ ಅಂತಾರಾಷ್ಟ್ರೀಯ ಕಲಾವಿದ. ಸದಾ ಪಾದರಸದಂತೆ ಚುರುಕಿನಿಂದ ಓಡಾಡುತ್ತ, ದೇಶ-ವಿದೇಶಗಳಲ್ಲಿ ಹೆಜ್ಜೆಗುರುತು ಮೂಡಿಸಿದ ಕ್ರಿಯಾಶೀಲ. ನಾಗಾಲೋಟದಲ್ಲಿ ಓಡುವ, ಕೆರಳುವ ನೆಗೆವ – ಬಣ್ಣದಲ್ಲಿ 'ಗೆಲ್ಲುವ ಕುದುರೆ'ಗಳಿವು ಎನ್ನುವ ತಕ್ಕೆ ಒತ್ತಿ ತಮ್ಮ ಕಲಾಕೃತಿಗೊಂದು ಛಾಪು ಮೂಡಿಸಿದ ಈ ಕಲಾವಿದನಿಗೆ ಬೆಂಗಳೂರು ಅಚ್ಚುಮೆಚ್ಚು. ಸಮಕಾಲೀನ ಚಿತ್ರಕಲೆಯ ಬಗ್ಗೆ ಇಲ್ಲಿನ ಸೃಜನಶೀಲ ಕಲಾವಿದರ ಜೊತೆ ಸಂಪರ್ಕವಿತ್ತು. 'ಕಲಾಮೇಳ'ದಂಥ ಕಾರ್ಯಕ್ರಮದಲ್ಲಿ ಭಾಗಿಯಾಗಿದ್ದರು. ಹುಸೇನರ ಆರ್ಟ್ ಗ್ಯಾಲರಿ ಪ್ರತಿಷ್ಠಿತ ಕೋರಮಂಗಲ ಬಡಾವಣೆಯಲ್ಲಿತ್ತು. ನಮ್ಮ ನಡುವಿದ್ದ ಖ್ಯಾತ ಕಲಾವಿದ ಜಿ.ಎಸ್. ಶೆಣೈ ಅವರ ನಿಕಟ ಮಿತ್ರನಂತಿದ್ದ ಈ ಹಿರಿಯ ಚೇತನ ತೊಂಬತ್ತರ ದಶಕದ ಆರಂಭದಲ್ಲಿ (ಈಗಿನಷ್ಟು ಬೆಂಗಳೂರು ಟ್ರಾಫಿಕ್ ಇಲ್ಲದ ಕಾಲ) ವಿಜಯನಗರದಲ್ಲಿದ್ದ ಕಲಾವಿದ ಶೆಣೈ ಮನೆ ಒಳಗೊಂಡ ಶೃಂಗಾರ ಆರ್ಟ್ ಸ್ಟುಡಿಯೋಗೆ ಬೆಳ್ಳಾನೆ ಬೆಳಗ್ಗೆ ಬರಿಗಾಲಲ್ಲೇ ನಡೆದು ಬಂದಿದ್ದನ್ನು ಕಂಡಿದ್ದೆ. (ಬಹುವರ್ಷ ನಾಗರಬಾವಿ ರಸ್ತೆಯಲ್ಲಿದ್ದ ನನ್ನ ಮನೆಯ ಹಿಂದಿನ ರಸ್ತೆಯಲ್ಲೇ ಶೆಣೈ ಮನೆ!) ನೋವಿನ ಸಂಗತಿಯೆಂದರೆ ಸಾವು ಬಹುಬೇಗ ಶೆಣೈ ಅವರನ್ನು ಹಿಂಬಾಲಿಸಿ ಬಂತು. ನಂತರ ಅವರ ಮಗ ಕಲಾವಿದ ಗುರುದಾಸ ಶೆಣೈ ತನ್ನ ತಂದೆಯ ಸ್ಟುಡಿಯೋ ಹಾಗೂ ಎಂ.ಎಫ್. ಹುಸೇನ್ ಆರ್ಟ್ ಗ್ಯಾಲರಿಗೆ ಕ್ಯುರೇಟರ್ ಆಗಿ ನೇಮಕವಾದರು.

ಹುಸೇನ್ ಬೆಂಗಳೂರಿಗೆ ಬಂದಾಗ ಶೆಣೈ ಕುಟುಂಬದ ಜೊತೆ ಬೆರೆತು ತಾನೊಬ್ಬ ಅಂತಾರಾಷ್ಟ್ರೀಯ ಕಲಾವಿದ ಎನ್ನುವುದನ್ನು ಮರೆಯುತ್ತಿದ್ದರು. ತರುಣ ಗುರುದಾಸನನ್ನು ಜತೆ ಹಾಕಿಕೊಂಡು ದೇಶ-ವಿದೇಶ ಸುತ್ತಿದ್ದರು. ಅಂಥ ವಿಶೇಷ ಅನುಭವದ ಹಿನ್ನೆಲೆಯಲ್ಲಿ ಗುರುದಾಸ್ ಶೆಣೈ ಕೆಲವು ನೆನಪುಗಳನ್ನು ಆಗಸ್ಟ್ 'ಮಯೂರ'ದಲ್ಲಿ ದಾಖಲಿಸಿದ್ದಾರೆ. ಈ ಬರಹವನ್ನು ಕೃತಜ್ಞತಾಪೂರ್ವಕವಾಗಿ ಸ್ಮರಿಸುತ್ತ ಓದುಗರಿಗೆ ಇಲ್ಲಿ ನೀಡಿದ್ದೇನೆ. ಜತೆಗೆ ಹಿರಿಯ ಕಲಾವಿದ, ಕಲಾವಿಮರ್ಶಕ ಚಿ.ಸು. ಕೃಷ್ಣಸೆಟ್ಟಿ ಅವರು ಹುಸೇನ್ ಕಲಾಕೃತಿ ಬಗ್ಗೆ ಗಟ್ಟಿ ಆಲೋಚನೆ ದಾಖಲಿಸಿದ್ದಾರೆ.

–ಸಂಪಾದಕ

ತಂದೆಯೂ ಅವರ ಜೊತೆಗೇ ಎಂದು ಹೇಳಬೇಕಿಲ್ಲ. ಕೆಲವೊಮ್ಮೆ ಸೀದಾ ಚಿತ್ರಮಂದಿರ
ಹೋಗಿ ವರನಟ ಡಾ. ರಾಜ್‌ಕುಮಾರ್ ಅವರ ಯಾವುದಾದರೂ ಸಿನಿಮಾ ನೋಡುವು
ಇಬ್ಬರಿಗೂ ಹುರುಪಿನ ಸಂಗತಿಯಾಗಿತ್ತು.

ಕಲಾಮೇಳಕ್ಕೆ ಬಂದಾಗ ವಿಜಯನಗರದ ನಮ್ಮ ಮನೆಗೂ ಬಂದು, ನನ್ನ ತಾ
ಮಾಡುತ್ತಿದ್ದ ತಿಂಡಿ ಕಾಫಿ ಸವಿಯುತ್ತಿದ್ದರು. ಅಲ್ಲದೆ ಇಬ್ಬರೂ ಬೆಂಗಳೂರಿನ ಏರ್‌ಲೈ
ಹೋಟೆಲ್, ಎಂ.ಟಿ.ಆರ್‌ಗಳಿಗೆ ಹೋಗಿ ಬೇಕಾದ ತಿಂಡಿ ತಿನ್ನುತ್ತಿದ್ದರು. ಇಲ್ಲಾಂದ
ಸಣ್ಣಪುಟ್ಟ ದರ್ಶಿನಿಗಳಲ್ಲಿ ಇಡ್ಲಿ ವಡೆ ಹೊಡೆಯುತ್ತಿದ್ದರು. ಹೀರೊ ಜೈಕನ್ನು ಗಿ
ಅಡ್ಡವಾಗಿದ್ದ ನನ್ನ ತಂದೆ ಓಡಿಸುತ್ತಿದ್ದರೆ, ಅವರ ಹಿಂದೆ ಕೂತಿರುವ ಸಣ್ಣಗೆ ಉದ್ದ
ಉದ್ದವಿದ್ದ ಹುಸೇನ್‌ರನ್ನು ತಣ್ಣಗೆ ನೋಡತಕ್ಕದ್ದೆ ಒಂದು ದೃಶ್ಯವಾಗಿರುತ್ತಿತ್ತು!

ರಾಮಕೃಷ್ಣ ಹೆಗಡೆ ಅವರು ಮುಖ್ಯಮಂತ್ರಿಯಾದಾಗ ಅವರಿಗೆ ದೇಶದ ಶ್ರೇಷ್ಠ ಕಲಾವಿದ
ಕರ್ನಾಟಕದ ಜೊತೆ ನಿರಂತರ ಸಂಬಂಧ ಇಟ್ಟುಕೊಂಡು, ಇದನ್ನೂ ತಮ್ಮ ಕಾರ್ಯಕ್ಷೇ
ಮಾಡಿಕೊಳ್ಳಬೇಕೆಂಬ ಮಹದಾಸೆಯಿತ್ತು. ಆದ್ದರಿಂದಲೇ ಅವರು ವಿಶೇಷ ಕೋಟಾದ
ಅನೇಕರಿಗೆ ಕೊಟ್ಟಹಾಗೆ ಹುಸೇನ್ ಅವರಿಗೂ ಕೋರಮಂಗಲದಲ್ಲಿ ನಿವೇಶನ ಕೊಟ್ಟರು
ಅದನ್ನು ಹಣ ಕೊಟ್ಟು ಖರೀದಿಸಿದ ಹುಸೇನ್ ದೊಡ್ಡ ಮ್ಯೂಸಿಯಂ ನಿರ್ಮಿಸಿದರು
ಅವರ ಬೆಂಗಳೂರು ಕೇಂದ್ರವಾಗಿ ಇದು ಬೆಳೆಯಿತು. 'ಹುಸೇನ್ ಸಂಕಲನ' ಎಂದ
ಇದಕ್ಕೆ ಹೆಸರಿಟ್ಟರು. ನಾನು ಆಗತಾನೆ ಬರೋಡದಲ್ಲಿ ಕಲಾಭ್ಯಾಸ ಮುಗಿಸಿ ಬೆಂಗಳೂರಿ
ಬಂದಿದ್ದೆ. ಪೇಂಟಿಂಗ್ ಮಾಡುವುದನ್ನು ಬಿಡಬಾರದು ಎಂಬ ಷರತ್ತು ಹಾಕಿ ನನ್ನನ್ನ
ಅದಕ್ಕೆ ಕ್ಯುರೇಟರ್ ಮಾಡಿದರು. 'ಹುಸೇನ್ ಸಂಕಲನ'ಕ್ಕೆ ದೇಶವಿದೇಶಗಳಿಂದ ಕಲಾವಿದ
ಬರುತ್ತಿದ್ದರು.

ನನ್ನ ತಂದೆ ತೀರಿಕೊಂಡ ನಂತರವೂ ಹುಸೇನ್ ನನ್ನ ಮೇಲೆ ಎಂದಿನ ಮಮತೆಯನ
ತೋರುತ್ತಿದ್ದರು. ನಾನು ಅವರಿಗೆ ಇನ್ನಷ್ಟು ಹತ್ತಿರವಾದೆ. ಅವರ ಮಕ್ಕಳು ಕರೆಯುತ್ತಿದ್ದ ಹಾ
ನಾನೂ ಅವರನ್ನು 'ಬಾಬಾ' ಎಂದೇ ಕರೆಯುತ್ತಿದ್ದೆ. ಮುಂದಿನ ದಿನಗಳಲ್ಲಿ ನಾನು, ನ
ಹೆಂಡತಿ ಅಮಿತಾ ಇಬ್ಬರೂ ಹುಸೇನ್ ಸಂಕಲನದಲ್ಲಿ ಹೆಚ್ಚು ಚಟುವಟಿಕೆಗಳನ್ನು ನಡೆಸಿದೆವು
ಹುಸೇನರು 'ಗಜಗಾಮಿನಿ' ಚಿತ್ರ ಮಾಡಿದ ನಂತರ 'ಹುಸೇನ್ ಸಂಕಲನ'ದಲ್ಲಿ 'ಗಜಗಾಮಿ
ಆರ್ಟ್ ಕ್ಲಬ್' ಮಾಡಿ ಅದರ ಮೂಲಕ ಕಾರ್ಯಕ್ರಮಗಳನ್ನು ಮಾಡಲಾರಂಭಿಸಿದೆವು
ಅದರಲ್ಲಿ ಹಿಂದೂಸ್ತಾನಿ ಸಂಗೀತ, ಮಕ್ಕಳ ಚಿತ್ರ ಸ್ಪರ್ಧೆ, ಕಲಾವಿದರ ಶಿಬಿರ, ಚಿತ್ರ ಪ್ರದರ್ಶನ
ಬುಕ್ ರೀಡಿಂಗ್ ಮುಂತಾದವು ನಡೆದವು.

ಹುಸೇನ್ ಅವರಿಗೆ ದೇಶದ ಅನೇಕ ನಗರಗಳಲ್ಲಿ ಮತ್ತು ಹೊರ ದೇಶಗಳ
ಸ್ಟುಡಿಯೋಗಳಿದ್ದುವು. ಎಲ್ಲಿದ್ದರೂ ಅವರು ಪೇಂಟಿಂಗ್ ಮಾಡುತ್ತಿದ್ದರು. ಬೆಂಗಳೂರಿ
ಸಂಕಲನದಲ್ಲಿ ನಾನು ಮೂರು ದಿನ ಪೇಂಟಿಂಗ್ ಮಾಡುತ್ತೇನೆ, ಯಾರು ಬೇಕಾದರ
ಬಂದು ನೋಡಬಹುದು ಎಂದು ಒಮ್ಮೆ ಅವರು ತಾವೇ ಪತ್ರಿಕಾಲಯಕ್ಕೆ ಹೋಗಿ ಪ್ರಕಟ
ಕೊಟ್ಟರು. ನಂತರ ಆ ಮೂರು ದಿನ ಅವರು ಕೆಲಸ ಮಾಡುವುದನ್ನು ನೋಡಬಂ
ಜನರನ್ನು ನಿಯಂತ್ರಿಸುವುದೇ ನಮಗೆ ಕಷ್ಟವಾಯಿತು. 'ಹುಸೇನ್ ಸಂಕಲನ'ದಲ್ಲಿ ಒಮ
ಕೆಳಗೆ ಬಿದ್ದು ಗಾಸಿಗೊಂಡಿದ್ದ ಅವರ ಒಂದು ದೊಡ್ಡ ಕಲಾಕೃತಿಯನ್ನು ನಾನು ರಿಸ್ಟೋ
ಮಾಡಿದೆ. ಆ ಕೆಲಸವನ್ನು ಮೆಚ್ಚಿಕೊಂಡರು. ಎಲ್ಲ ಸ್ಟುಡಿಯೊ, ಮ್ಯೂಸಿಯಂಗಳಲ್ಲಿ ಮಾಡು
ಹಾಗೆ ಇಲ್ಲೂ ಕೆಲಸಗಾರರೆಲ್ಲ ಸೇರಿಕೊಂಡು ಆಯುಧಪೂಜೆ, ವಿಜಯದಶಮಿ ಹಬ್ಬ
ಶುರುಮಾಡಿದೆವು. ಇದನ್ನು ತಿಳಿದ ಹುಸೇನ್ ನಿಜಕ್ಕೂ ಸಂತೋಷಪಟ್ಟರು. ಅಷ್ಟೇ ಅ

'ಕೆಲಸಗಾರರಿಗೆ ಬೋನಸ್ ಕೊಡು' ಅಂದರು. ನನಗೆ ಸಮುರಾಯ್ ಬೈಕ್ ತೊಗೋ ಅಂತ ಮುಂಬೈನಿಂದ ೪೫ ಸಾವಿರ ರೂಪಾಯಿ ಚೆಕ್ ಕಳಿಸಿದರು. ನಮ್ಮೆಲ್ಲರನ್ನೂ ಮಕ್ಕಳ ಹಾಗೆ ನೋಡಿಕೊಂಡರು. ಅವರ ಮುಂಬೈ ಮನೆಗೊಮ್ಮೆ ಹೋದಾಗ, ನಾನು 'ಹಮ್ ಆಪ್ ಕೆ ಹೈ ಕೌನ್' ಸಿನಿಮಾ ನೋಡಿಲ್ಲ ಅಂತ ಮುನಿಸುಗೊಂಡು ನನಗೆ ಅದನ್ನು ತೋರಿಸಿದರು. ಅಷ್ಟರ ವೇಳೆಗೆ ಅವರು ಆ ಚಿತ್ರವನ್ನು ೪೫ ಬಾರಿ ನೋಡಿಯಾಗಿತ್ತು!

ಹುಸೇನ್ ಅವರಷ್ಟು ಜಗತ್ತಿನ ಸಂಚಾರ ಮಾಡುತ್ತಿದ್ದ ಇನ್ನೊಬ್ಬ ಕಲಾವಿದನನ್ನು ನಾನು ಕಂಡಿಲ್ಲ. ಆದರೆ ವರ್ಷಕ್ಕೆ ಎರಡು ಬಾರಿಯಾದರೂ ಅವರು ಬೆಂಗಳೂರಿಗೆ ಬರುತ್ತಿದ್ದರು. ನನ್ನ ತಂದೆ ತೀರಿಕೊಂಡ ನಂತರ ಅವರೊಂದಿಗೆ ಬೆಂಗಳೂರು ಸುತ್ತುವ ಖುಷಿ ನನ್ನದಾಯಿತು. ಅವರಿಗೆ ಎಂ.ಜಿ. ರಸ್ತೆ, ಬ್ರಿಗೇಡ್ ರಸ್ತೆ ಸುತ್ತುವುದೆಂದರೆ ತುಂಬಾ ಆನಂದ. ಕಾಫಿ ಹೌಸ್‌ನಲ್ಲಿ ಒಳ್ಳೆಯ ಕಾಫಿ ಕುಡಿಯುವುದು, ಫುಟ್‌ಪಾತ್ ಮೇಲೆ ಸುಟ್ಟುಕೊಡುವ ಮುಸುಕಿನ ಜೋಳ ತಿನ್ನುವುದು ಮಾಡುತ್ತಿದ್ದರು. ಉಪ್ಪಿಟ್ಟು ತಿನ್ನುವುದೂ ಅವರಿಗೆ ಬಹಳ ಇಷ್ಟ. ಒಮ್ಮೆ ಬೆಂಗಳೂರಿಂದ ಹೊರಟು ಹಳೆಯ ವಿಮಾನನಿಲ್ದಾಣದ ಹತ್ತಿರಕ್ಕೆ ಬಂದಾಗ ಇದ್ದಕ್ಕಿದ್ದಂತೆ 'ಛೇ, ಕಾರು ವಾಪಸ್ ತಿರುಗಿಸು' ಅಂದರು. ಏಕೆ ಗೊತ್ತೇ? ಎಂ.ಟಿ.ಆರ್.ನಲ್ಲಿ ತಿಂಡಿ ತಿನ್ನುವುದು ಮರೆತುಹೋಯಿತಂತೆ. ಸರಿ, ಆ ಫ್ಲೈಟ್‌ನ ಟಿಕೆಟ್‌ಗೆ ಗೋವಿಂದ ಹೇಳಿ ಎಂ.ಟಿ.ಆರ್.ಗೆ ಬಂದೆವು.

ಇನ್ನೊಮ್ಮೆ ಅವರನ್ನು ವಿಮಾನ ನಿಲ್ದಾಣದಲ್ಲಿ ಬಿಟ್ಟು, ಬೋರ್ಡಿಂಗ್ ಪಾಸ್ ಕೂಡ ತೆಗೆಸಿಕೊಟ್ಟು ಬಂದಿದ್ದೆ. ನಾನು ಮ್ಯೂರೆಲ್ ಮಾಡುತ್ತಿದ್ದ ಇಂದಿರಾನಗರಕ್ಕೆ ಹೋಗಿ ಎಂ.ಜಿ. ರೋಡ್‌ಗೆ ಬಂದರೆ ಅಲ್ಲಿ ಹುಸೇನ್ ಓಡಾಡುತ್ತಿದ್ದಾರೆ! ನನ್ನ ಕಣ್ಣುಗಳನ್ನು ನಾನೇ ನಂಬದಾದೆ. 'ಬಾಬಾ' ಇದೇನಿದು ಅಂತ ಕೇಳಿದರೆ ಓಂದಿಯಲ್ಲಿ 'ಹಾಗೆ ಸುಮ್ಮನೆ' ಅಂತ ನಕ್ಕರು. ಇಬ್ಬರೂ ಗೆಳೆಯರಂತೆ ಇನ್ನಷ್ಟು ಗಂಟೆ ಸುತ್ತಿದೆವು.

ಬೆಂಗಳೂರಿನಲ್ಲಿ ನಾವೊಮ್ಮೆ ಕಾರಿನಲ್ಲಿ ಸುತ್ತುತ್ತಿದ್ದಾಗ, ರಶೀದ್‌ಖಾನ್ ಸಂಗೀತ ಹಾಕಿದ್ದೆ. ಮನೋಹರವಾದ ಪೂರಿಯಾಧನಶ್ರೀ ರಾಗವನ್ನು ಗಂಟೆಗಟ್ಟಲೆ ಕೇಳಿದರು. ಮತ್ತೆ





ಎಲ್ಲಿದೆ ವಿಷಾದ? ಅರೆ, ಅಲ್ಲಾಹ್!

ಬ್ರಿಗೇಡ್ ರಸ್ತೆಗೆ ಹೋಗಲು ಹೇಳಿದರು. ಕ್ಯಾಸೆಟ್, ಸಿ.ಡಿ. ಮಾರುವ ಅಂಗಡಿಗೆ ನುಗ್ಗಿ ಅಲ್ಲಿ ಲಭ್ಯವಿದ್ದ ರಶೀದ್‌ಖಾನ್ ಅವರ ಹತ್ತಾರು ಸಿ.ಡಿ.ಗಳನ್ನು ಖರೀದಿಸಿದರು. ಹದಿನೈದು ದಿನ ಕಳೆಯಿತು. ಅವರಿಂದ ಫೋನ್ ಬಂತು. 'ಗುರೂ ನಾನು ಎಲ್ಲಿದ್ದೇನೆ ಗೊತ್ತಾ? ಕೊಲ್ಕತ್ತಾವಲ್ಲಿ ಇದ್ದೇನೆ. ರಶೀದ್‌ಖಾನ್ ಅವರನ್ನು ಹುಡುಕಿಕೊಂಡು ಬಂದೆ. ಈಗ ಅವರ ಜೊತೆ ಕೂತು ಮಾತನಾಡ್ತಾ ಇದ್ದೇನೆ' ಅಂದರು. ಇದು ನಿಜವಾದ ಹುಸೇನ್!

ಹುಸೇನ್ ಭಾರತದಿಂದ ಆಚೆ ನೆಲೆಸಿದ ಮೇಲೆ ಕೋರಮಂಗಲದ 'ಹುಸೇನ್ ಸಂಕಲನ' ಮುಚ್ಚಿ ಅದರಲ್ಲಿದ್ದ ಕಲಾಕೃತಿಗಳನ್ನೆಲ್ಲ ಮುಂಬೈಗೆ ಸಾಗಿಸಿದೆವು. ಆದರೆ ಅವರ ನಿರ್ವಾಜ್ಯ ಪ್ರೀತಿ ಮುಂದುವರೆಯಿತು. ನಾನು ಅವರನ್ನು ನೋಡಲು ಲಂಡನ್, ದುಬೈಗೂ ಹೋಗಿದ್ದೇನೆ. ದುಬೈನಲ್ಲಿ ಅವರಿಗೆ ಹಲವಾರು ಮನೆಗಳಿದ್ದವು. ಕೆಲವು ಅವರ ಸ್ಟುಡಿಯೋಗಳಾಗಿದ್ದವು. ಅವರ ಬಳಿ ಅತ್ಯಂತ ದುಬಾರಿ ಕಾರುಗಳಿದ್ದವು. ವಿಮಾನನಿಲ್ದಾಣಕ್ಕೆ ಬಂದು ನನ್ನ ಸಂಸಾರವನ್ನು ಕರೆದುಕೊಂಡು ಹೋಗುವುದಲ್ಲದೆ. ನಂತರ ಊರೆಲ್ಲಾ ಸುತ್ತುಹಾಕಿಸುತ್ತಿದ್ದರು. ಅದ್ದೂರಿ ಹೋಟೆಲ್‌ಗಳಲ್ಲಿ ಊಟ ಹಾಕಿಸುತ್ತಿದ್ದರು. ಲಂಡನ್‌ನಲ್ಲಿ ಹೈಡ್ ಪಾರ್ಕ್ ಎದುರೇ ಅವರ ಸ್ಟುಡಿಯೊ ಇತ್ತು. ಒಮ್ಮೆ ನನ್ನ ತಾವೇ ಆಕ್ಸ್‌ಫರ್ಡ್‌ಗೆ ಕರೆದುಕೊಂಡು ಹೋದರು.

ಹುಸೇನ್ ಅವರ ಗೆಳೆಯ ಗೆಳತಿಯರ ಪರಿವಾರ ಜಗತ್ತಿನಾದ್ಯಂತ ಹರಡಿಕೊಂಡಿದೆ. ಅವರಿಂದ ಕಲಿತ, ಉಪಕೃತವಾದವರ ಸಂಖ್ಯೆಯೂ ದೊಡ್ಡದು. ಅವರಿಗೆ ಜಾತಿ ಮತ ಧರ್ಮಗಳ ಹಂಗಿರಲಿಲ್ಲ. ಗೆಳೆತನಕ್ಕೆ ಪ್ರೀತಿಗೆ ಎಷ್ಟು ಸಾರಿ ಬೇಕಾದರೂ ಸಾಯುತ್ತಿದ್ದ ನಿರ್ಮಲ ಮನಸ್ಸಿನ ಮನುಷ್ಯ ಅವರು. ಕೊನೆಯ ವರ್ಷಗಳಲ್ಲಿ ಅವರು ಹುಟ್ಟಿದ ದೇಶದಿಂದ ದೂರ ಇದ್ದು ನೋವು ಅನುಭವಿಸುವಂತಾದದ್ದು ದುರದೃಷ್ಟಕರ. ಆದದ್ದು ಆಗಿಹೋಯಿತು. ಇರಲಿ. ಹುಸೇನ್ ಬೆಂಗಳೂರಿಗಷ್ಟೇ ಅಲ್ಲ. ಜಗತ್ತಿಗೆ ಸೇರಿದ ಕಲಾವಿದ.

●





ಎಂ.ಎಫ್. ಹುಸೇನ್ ಸ್ಮರಣೆ

# ಹುಸೇನ್ ಹೆಸರಿನಲ್ಲಿ ಒಂದಷ್ಟು ಕಲಾಲಹರಿ

– ಚಿ.ಸು. ಕೃಷ್ಣ ಸೆಟ್ಟಿ

Art is never chaste. It ought to forbidden to ignorant innocents, never allowed in to contact with those not sufficiently prepared. Yes, art is dangerous. where it is chaste, it is not art.

-Pablo Picasso

ಲಂಡನ್ನಿನ ರಾಯಲ್ ಬ್ರಾಂಪ್ಟನ್ ಆಸ್ಪತ್ರೆಯಲ್ಲಿ ೨೦೧೧ ಜೂನ್ ೯ರಂದು ತೀರಿಕೊಂಡ ಎಂ.ಎಫ್. ಹುಸೇನ್ ಬಗೆಗೆ ನಡೆದಷ್ಟು ಚರ್ಚೆಗಳು, ಪ್ರಚಾರಗಳು, ವಿವಾದಗಳು ಭಾರತದ ಸಾಂಸ್ಕೃತಿಕ ಸಂದರ್ಭಗಳಲ್ಲಿ ಬೇರಾರ ಬಗೆಗೂ ನಡೆದಿಲ್ಲ. ನಡೆಯುವ ಸಾಧ್ಯತೆಯೂ ವಿರಳ ಎಂದುಕೊಂಡಾಗ ಅವರ ವ್ಯಕ್ತಿತ್ವದ ಅಗಾಧ ಹರವುಗಳ ಕಲ್ಪನೆ ಬಂದೀತು. ಅತ್ಯಂತ ಕ್ರಿಯಾತ್ಮಕ, ಅಪ್ರತಿಮ ಕಲಾವಿದರೆನಿಸಿದ್ದ ಇವರನ್ನು ಬಹಳಷ್ಟು ಜನ ಸಂತನೆಂಬಂತೆ ನೋಡಿದರೆ; ಮತ್ತೆ ಬಹಳಷ್ಟು ಜನ ಸೈತಾನನಂತೆಯೇ ನೋಡಿದ್ದಾರೆ. ಬಹುಭಾಷೆ, ಬಹುಸಂಸ್ಕೃತಿಯ ಬಹುಳತ್ವವಿರುವ ಭಾರತದಂತಹ ವಿಶಾಲ ಹೃದಯವುಳ್ಳ ದೇಶದಲ್ಲಿ ಇದು ಸ್ವಾಭಾವಿಕವೇ. ಆದರೆ ನಿಜವಾಗಿ ವಿಮರ್ಶಾತ್ಮಕ ದೃಷ್ಟಿಯಿಂದ, ವಸ್ತುನಿಷ್ಠ ನೆಲೆಯಲ್ಲಿ ನೋಡಿದರೆ ಅವರದ್ದು ಅತ್ತ ಸಂತನದೂ ಅಲ್ಲದ, ಇತ್ತ ಸೈತಾನನದೂ ಅಲ್ಲದ ಅನೂಹ್ಯ, ವಿಕ್ಷಿಪ್ತ ವ್ಯಕ್ತಿತ್ವವೆಂಬುದರ ಅರಿವಾಗದಿರದು. ಹುಸೇನರನ್ನು ನಮ್ಮ ಹಲವು ಮಾಧ್ಯಮಗಳು, ಇತಿಹಾಸಕಾರರು 'ಭಾರತೀಯ ಪಿಕಾಸೋ' ಎಂಬುದಾಗಿ ಕರೆಯುತ್ತಿರುವುದರ ಹಿಂದೆಯೂ ಇದೇ ಅಂಶ ಅಡಗಿದೆ ಎಂದೇ ನನಗನ್ನಿಸುತ್ತದೆ. ಏಕೆಂದರೆ ಅತ್ಯಂತ ಕ್ರಿಯಾತ್ಮಕ, ಅಪ್ರತಿಮ ಕಲಾವಿದನೆನಿಸಿದ್ದ ಪಿಕಾಸೋ ಕೂಡ ನಿಜ ಜೀವನದಲ್ಲಿ ಬಹುತೇಕ ಹುಸೇನರ ಹಾಗೆಯೇ ಇದ್ದವನು. ವಿವಾದಗಳಿಗೆ ತುತ್ತಾದವನು. (ನನಗೆ

ತಕ್ಷಣಕ್ಕೆ ಹೇಳಬಹುದಾದ ಒಂದು ಅಪವಾದವೆಂದರೆ ಹುಸೇನರದ್ದು ತುಂಬ ಸರಳ ವ್ಯಕ್ತಿತ್ವ. ಪಿಕಾಸೋ ಹಾಗಿರಲಿಲ್ಲ. ಅದೇನೇ ಇರಲಿ, ಹುಸೇನರಂತೆಯೇ ಪಿಕಾಸೊನ ವಿಕ್ಷಿಪ್ತ, ವಿವಾದಾತ್ಮಕ ವ್ಯಕ್ತಿತ್ವದ ಬಗ್ಗೆ ಲೇಡಿ ಹಫಿಂಗ್ಟನ್ ಬರೆದಿರುವ 'ಪಿಕಾಸೊ-ಕ್ರಿಯೇಟರ್ ಅಂಡ್ ಡೆಸ್ಟ್ರಾಯರ್' ಹಾಗೂ ಜಾನ್ ಬರ್ಗರ್ ಬರೆದಿರುವ 'ಸಕ್ಸೆಸ್ ಅಂಡ್ ಫೈಲ್ಯೂರ್ ಆಫ್ ಪಿಕಾಸೊ' ಪುಸ್ತಕಗಳನ್ನು ಓದಿದರೆ ಈ ಅಂಶ ಅರ್ಥವಾಗುತ್ತದೆ. ಆದರೆ ಯಾವುದೇ ಯಶಸ್ವಿ ವ್ಯಕ್ತಿಯ ಹಿಂದಿನ ನಕಾರಾತ್ಮಕ ಅಂಶಗಳಿಗೆ ಯಾವುದೇ ಸಮಾಜ ಅಷ್ಟಾಗಿ ಒತ್ತಾಸೆ ನೀಡುವುದಿಲ್ಲ ಎನ್ನುವುದಂತೂ ವರ್ತಮಾನದ ಸತ್ಯ.) ಕ್ರಿಯಾತ್ಮಕತೆಯೂ ಸೇರಿದಂತೆ 'ವರ್ಣರಂಜಿತ' ವ್ಯಕ್ತಿತ್ವದ ದೃಷ್ಟಿಯಿಂದ ಪಿಕಾಸೊ ಹಾಗೂ ಹುಸೇನರಲ್ಲಿ ಹಲವು ಸಾಮ್ಯತೆಗಳಿದ್ದು ಆ ಕುರಿತು ಬೇರೆಡೆಗೆ ಚರ್ಚಿಸಬಹುದಾಗಿದೆ.

ಬದುಕಿದ್ದಾಗಲೇ ದಂತಕಥೆಯೆನಿಸಿದ್ದ ಹುಸೇನ್ ಅವರದ್ದು ಕೂಡಾ ತುಂಬ ವಿಚಿತ್ರ, ವಿಲಕ್ಷಣ ವ್ಯಕ್ತಿತ್ವ. ಒಮ್ಮೆ ದಂತಗೋಪುರದ ಮೇಲಿರುವ ನಿಲುಕದಂತಹ ವ್ಯಕ್ತಿ ಎಂದೆನಿಸಿದರೆ, ಮತ್ತೊಮ್ಮೆ ನಮ್ಮ ನಡುವೆ ಸಂತೆಯಲ್ಲಿಯೋ ಕಾಕಾ ಹೋಟೆಲ್‌ನಲ್ಲಿ ಕುಳಿತು ಚಹಾ ಕುಡಿಯುತ್ತಿರುವಂತಹ ವ್ಯಕ್ತಿಯೆನಿಸುತ್ತದೆ. ಅವರು ಬಹುದೊಡ್ಡ ಶ್ರೀಮಂತರು. ಕಾರ್ಪೋರೇಟ್ ಸಂಸ್ಕೃತಿಯವರ ಜೊತೆ ಅವರಿಗೆ ಸಮಾನವಾಗಿ ವರ್ತಿಸಿದರೆ, ಸಾಮಾನ್ಯರ ಜೊತೆ ಬೆರೆತಾಗ ಅಷ್ಟೇ ಸಾಮಾನ್ಯರಂತೆ ವರ್ತಿಸುತ್ತಿದ್ದರು. ಹೀಗೆ ಅವರ ಸಂಪರ್ಕಕ್ಕೆ ಬಂದವರೆಲ್ಲರಿಗೂ 'ನನಗೆ ಹುಸೇನ್ ತುಂಬ ಆತ್ಮೀಯರು. ಅವರು ನನಗೆ ಚೆನ್ನಾಗಿ ಗೊತ್ತು' ಎಂದೆನಿಸುವಂತೆ ವರ್ತಿಸುತ್ತಿದ್ದ ಚುಂಬಕ ಶಕ್ತಿ ಅವರದು. ಇಲ್ಲಿ ನನ್ನದೇ ಒಂದು ಉದಾಹರಣೆ ಹೇಳಲು ಬಯಸುತ್ತೇನೆ. ಹುಸೇನರನ್ನು ಹಲವಾರು ಸಲ ಭೇಟಿ ಮಾಡಿದಾಗ, ಅವರೊಂದಿಗೆ ಓಡಾಡಿದಾಗಲೆಲ್ಲ ಅವರು ನನ್ನ ಸ್ನೇಹಿತನೆಂಬ ಭಾವನೆಯೇ ನನ್ನಲ್ಲಿ ಮೂಡುತ್ತಿತ್ತು. ಅವರು ಬೆಂಗಳೂರಿಗೆ ಬಂದಾಗ ನಡೆದ ಒಂದು ಪ್ರಸಂಗ ಹೀಗಿದೆ:

ಕಲಾಮೇಳಕ್ಕೆ ಬಂದು ಭಾಗವಹಿಸಿದವರಿಗೆಲ್ಲ ಸಾಮಾನ್ಯ ಬಗಲಿನ ಚೀಲವೊಂದನ್ನು ನಾವು ಸ್ಮರಣಿಕೆಯಾಗಿ ನೀಡುತ್ತಿದ್ದೆವು. ನಾನು ಕೂಡ ಅದರಲ್ಲೊಂದು ಚೀಲವನ್ನು ಹಾಕಿಕೊಂಡು ಓಡಾಡುತ್ತಿದ್ದೆ. ಅದನ್ನು ನೋಡಿ ಅವರು ಅದೇನೆಂದು ಕೇಳಿದರು. ಏಕೆಂದರೆ ಎಲ್ಲರ ಬಗಲಲ್ಲಿ ಕರ್ನಾಟಕ ಕಲಾಮೇಳದ ಚಿಹ್ನೆಯುಳ್ಳ ಚೀಲಗಳಿದ್ದವು. ಆಗ ನಾನು ಕಲಾಮೇಳಕ್ಕೆ ಬಂದು ಭಾಗವಹಿಸಿ ಕಲಾಕೃತಿ ರಚಿಸಿದವರಿಗೆ ಸ್ಮರಣಿಕೆಯಾಗಿ ಅದನ್ನು ನೀಡುತ್ತಿದ್ದೇವೆ ಎಂದೆನಲ್ಲದೆ, ಹುಸೇನರಂತಹ ಶ್ರೀಮಂತ ವ್ಯಕ್ತಿ ಆ ಸಾಮಾನ್ಯ ಕೈಚೀಲದ ಬಗ್ಗೆ ಆಸಕ್ತಿ ವಹಿಸಲಿಕ್ಕಿಲ್ಲವೆಂದು ಅವರಿಗೆ ಕೈಚೀಲ ಕೊಡಲಿಲ್ಲ. ತಕ್ಷಣ ಅವರು ಹೇಳಿದ್ದು "ಇಲ್ಲಿಗೆ ಬಂದು ಕಲಾಕೃತಿ ರಚಿಸಿದವರಿಗೆಲ್ಲ ಚೀಲ ಕೊಡುತ್ತಿರುವುದಾದರೆ,

---

ಎಂ.ಎಫ್. ಹುಸೇನ್ ಒಬ್ಬ ಕ್ರಿಯಾಶೀಲ ಕಲಾವಿದ. ಅವರನ್ನು ಕುರಿತು ಈ ಹಿಂದೆ ಹಲವೆಡೆ ಬರೆದಿದ್ದೇನೆ, ಒಂದಷ್ಟು ಕಡೆ ಮಾತನಾಡಿದ್ದೇನೆ. ಹಾಗಿದ್ದರೂ ಪ್ರತಿ ಬಾರಿ ಯೋಚಿಸಿದಾಗಲೂ ಅವರೊಳಗೆ ಅಡಗಿದ್ದ ವಿಭಿನ್ನ ವ್ಯಕ್ತಿತ್ವಗಳು ಕಂಡುಬರುತ್ತವೆ. ಕುರುಡರು ಕಂಡ ಆನೆಯಂತೆ ಪ್ರತಿಯೊಬ್ಬರಿಗೂ ಅವರು ಬೇರೆಬೇರೆಯಾಗಿಯೇ ಕಾಣಿಸುತ್ತಾರೆ. ಹೀಗಾಗಿ ಮತ್ತಷ್ಟು ಮಾಹಿತಿಯ ಚಿಂತನೆ ಈ ಬರಹದಲ್ಲಿ ಸೇರಿದೆ.

–ಲೇಖಕ

ನಾನು ಕೂಡ ನಿನ್ನ ಕಲಾಕೃತಿ ರಚಿಸಿರಲಿಲ್ಲವೇ? ನನಗೂ ಕೊಡಬೇಕಲ್ಲವೇ?" ಎಂದಾಗ ತಕ್ಷಣ ಒಂದು ಚೀಲ ತರಿಸಿಕೊಟ್ಟೆ. ಆ ಚೀಲವನ್ನು ಚಿಕ್ಕ ಮಗುವಿನಂತೆ ಧರಿಸಿ ಕಲಾಮೇಳ ಮುಗಿಯುವವರೆಗೆ ಹಾಕಿಕೊಂಡೇ ಓಡಾಡಿಕೊಂಡಿದ್ದರು. ಹೀಗೆ ಅವರ ಸಂಪರ್ಕಕ್ಕೆ ಬಂದ ಪ್ರತಿಯೊಬ್ಬರಲ್ಲಿಯೂ ಈ ಬಗೆಯ ಸರಳತನದ ಹಲವು ಉದಾಹರಣೆಗಳಿರುತ್ತವೆ. ಜೀವನದಲ್ಲಿ ಶ್ರೀಮಂತಿಕೆಯ ತುತ್ತ ತುದಿಗೇರಿದರೂ ನಮ್ಮಲ್ಲಿ ಹಲವರಿಗೆ ಆಗುವ ಹಾಗೆ ಶ್ರೀಮಂತಿಕೆಯ ಪಿತ್ತ ಅವರ ನೆತ್ತಿಗೆಂದೂ ಏರಲಿಲ್ಲ. ತಮ್ಮ ಮೂಲದ ಬಗ್ಗೆ, ತಮ್ಮ ಕಷ್ಟದ ದಿನಗಳ ಬಗ್ಗೆ ಅವರ ಮನಸ್ಸು ಸದಾ ಜಾಗೃತವಾಗಿತ್ತು.

ಹುಸೇನರು ವಿವಾದಗಳನ್ನು ಇಷ್ಟಪಡುತ್ತಿದ್ದ ವ್ಯಕ್ತಿಯಷ್ಟೇ ಅಲ್ಲ. ಉಳಿದವುಗಳೊಂದಿಗೆ ವಿವಾದಗಳ ಮೂಲಕವೂ ಬದುಕಲು ಬಯಸಿದ ವ್ಯಕ್ತಿತ್ವ ಅವರದು ಎಂದೇ ನನಗನ್ನಿಸುತ್ತದೆ. ಏಕೆಂದರೆ ಸುಮಾರು ಏಳು ದಶಕಗಳಿಗೂ ಹೆಚ್ಚಿನ ಅವರ ಕಲಾ ಜೀವನದಲ್ಲಿ ವಿವಾದಗಳಿಗೆ ಅವರು ಗುರಿಯಾದಷ್ಟು ಬೇರಾವ ಕಲಾವಿದರೂ ಆಗಲಿಲ್ಲ. ಅಷ್ಟೇ ಅಲ್ಲ, ಯಾವುದೇ ವಿವಾದಗಳಿಗೆ ಸೊಪ್ಪು ಹಾಕದೆ ಮತ್ತೆ ಮತ್ತೆ ಅದೇ ನೆಲೆಯ ಕೃತಿಗಳನ್ನು ರಚಿಸುತ್ತಿದ್ದುದು ಒಂದೆಡೆ ಅವರ ಬದ್ಧತೆಯನ್ನು ಸ್ಪಷ್ಟಪಡಿಸಿದರೆ, ಇನ್ನೊಂದೆಡೆ ವಿವಾದಗಳನ್ನು ಪೋಷಿಸುವಂತಿತ್ತು.

ಏಕೆಂದರೆ ನಮ್ಮಲ್ಲಿನ ಹಲವು ಪ್ರಸಿದ್ಧ ಕಲಾವಿದರೊಂದಿಗೆ ಹೋಲಿಸಿದರೆ ಹುಸೇನರು ಮೂಲತಃ ಚಿಂತನಶೀಲತೆಯುಳ್ಳ, ಸಾಹಿತ್ಯ ಕುರಿತಂತೆ ಆಳವಾದ ಅರಿವುಳ್ಳ ಭಿನ್ನ ವ್ಯಕ್ತಿತ್ವ



ಕುದುರೆ – 'ಮುಖವಾಡ' ಇಲ್ಲದ ಗಜ ಹುಸೇನ ಕಲೆ

ಹೊಂದಿದ್ದರು. ಹಾಗಿದ್ದರೂ ವಿವಾದಗಳ ಸಂದರ್ಭದಲ್ಲಿ ಅವರು ತಮ್ಮ ನಿಲುವನ್ನು ಸ್ಪಷ್ಟಪಡಿಸಿದ, ಸಮರ್ಥಿಸಿದ ಉದಾಹರಣೆಗಳು ತುಂಬ ವಿರಳ. ಅವರ ಪ್ರತಿಕ್ರಿಯೆಗಾಗಿ ವಿವಾದಗಳ ಸಂದರ್ಭದಲ್ಲಿ ಮಾಧ್ಯಮಗಳವರು ತಹತಹಿಸಿದ್ದರೂ ಪ್ರತಿಕ್ರಿಯೆಗಳನ್ನು ನೀಡದೆ, ವಿವಾದಗಳನ್ನು ಎಂಜಾಯ್ ಮಾಡುತ್ತಿದ್ದರು ಎಂದೇ ನನಗನ್ನಿಸುತ್ತದೆ. ತುರ್ತು ಪರಿಸ್ಥಿತಿಯ ಸಂದರ್ಭದಲ್ಲಿ ಇಡಿಯ ದೇಶವೇ, ಅದರಲ್ಲಿಯೂ ಸಾಂಸ್ಕೃತಿಕ ಕ್ಷೇತ್ರವೇ ಅದನ್ನು ವಿರೋಧಿಸುತ್ತಿದ್ದಾಗ ಇಂದಿರಾ ಗಾಂಧಿಯವರನ್ನು ದುರ್ಗೆಗೆ ಹೋಲಿಸಿ ಚಿತ್ರ ರಚಿಸಿದ್ದೂ ಕೂಡ ವಿವಾದ ಹುಟ್ಟುಹಾಕುವ ಆಶಯದಿಂದ ಇದ್ದಿರಬಹುದು. ಹೀಗಾಗಿ ವಿವಾದಗಳು ಹತ್ತಾರು ವರ್ಷಗಳು ಜೀವಂತವಾಗಿದ್ದರೂ, ಒಂದೆರಡು ಸಂದರ್ಭಗಳಲ್ಲಿಯಷ್ಟೇ ಅವರು ಸಮಜಾಯಿಷಿ ನೀಡಲು ಪ್ರಯತ್ನಿಸಿದ್ದುಂಟು ಎನ್ನುವುದು ಕೂಡ ನನ್ನ ನಂಬಿಕೆಯನ್ನು ದೃಢಪಡಿಸುತ್ತದೆ.

ವಿವಾದಗಳನ್ನು ಅವರೆಂದೂ ಗಂಭೀರವಾಗಿ ಪರಿಗಣಿಸಲಿಲ್ಲ ಎಂಬುದಕ್ಕೆ ಇನ್ನೂ ಒಂದು ಉದಾಹರಣೆ ನೀಡಬಹುದು. ಹುಸೇನರು ಭಾರತ ಬಿಟ್ಟು ಹೊರಟು ಖತಾರ್ ದೇಶದ ಪೌರತ್ವ ಸ್ವೀಕರಿಸಿದ ಮೇಲೂ, ಅಲ್ಲಿಯೂ ವಿವಾದಗಳನ್ನು ಸೃಷ್ಟಿಸಿದರು. ಅಲ್ಲಿನ ಷೇಕ್‌ರನ್ನು ಕುರಿತಂತೆ ವಿಡಂಬಿಸಲು, ಲಿಯೊನಾರ್ಡೊ ಡ ವಿಂಚಿಯ ಪ್ರಸಿದ್ಧ 'ವಿಟ್ರೂವಿಯನ್ ಮ್ಯಾನ್' ಕೃತಿಯನ್ನು 'ದಿ ನ್ಯೂಡ್ ಡ್ಯೂಡ್' ಎಂಬ ಶೀರ್ಷಿಕೆಯಲ್ಲಿ ಪುನರ್ರಚಿಸಿ, ನಗ್ನ ವ್ಯಕ್ತಿಗೆ ಷೇಕ್‌ರ ರುಮಾಲು ತೊಡಿಸಿ ಚಿತ್ರಿಸಿದಾಗ ಅಲ್ಲಿನ ಅರಬ್ ಸಮುದಾಯ ಪ್ರತಿಭಟಿಸಿತು. (ಅವರು ಕೇವಲ ಹಿಂದೂ ದೇವ-ದೇವತೆಗಳ ಚಿತ್ರಗಳನ್ನಷ್ಟೇ ನಗ್ನವಾಗಿಸಿದರೇ ಹೊರತು, ಮುಸ್ಲಿಮರನ್ನು ಹಾಗೆಂದೂ ಚಿತ್ರಿಸಲಿಲ್ಲ ಎನ್ನುವ ಆರೋಪವನ್ನು ಕೊನೆ ಗಳಿಗೆಯಲ್ಲಾದರೂ ಸುಳ್ಳಾಗಿಸಿದರು.)

ಖತಾರ್‌ನಲ್ಲಿ ಆಸಮ್ ಅರಬ್ ಅಸೋಸಿಯೇಷನ್ ಎಂಬ ಸಂಘಟನೆಯ ನೇತೃತ್ವದಲ್ಲಿ ವ್ಯಾಪಕ ಪ್ರತಿಭಟನೆ ನಡೆದಾಗ ಹುಸೇನ್ ಅದಕ್ಕೆ ಸಮಜಾಯಿಷಿಯನ್ನು ನೀಡಿದರು: "ಚಿತ್ರದಲ್ಲಿ ನಗ್ನತೆಯಿಲ್ಲ. ಯಾರೇ ಆದರೂ ಸರಿಯಾದ ದೃಷ್ಟಿಕೋನದಿಂದ (ಅದನ್ನು) ನೋಡಬೇಕು. ಪಾಶ್ಚಾತ್ಯ ವಿಶ್ವ ಮತ್ತು ಅರಬ್ ವಿಶ್ವವು ಒಂದಾಗಿರಬೇಕೆಂಬ ಸಂದೇಶ ಹೊರಡಿಸಲು ನಾನು ಪ್ರಯತ್ನಿಸಿದ್ದು. ವಾಸ್ತವದಲ್ಲಿ ಅದು (ನಗ್ನತೆಯು) ಸುಂದರವಾಗಿ ಕಾಣುತ್ತದೆ. ಜನರು ಸಂದೇಶದೆಡೆಗೆ ಗಮನ ಕೇಂದ್ರೀಕರಿಸಬೇಕೇ ಹೊರತು, ಮಾಧ್ಯಮದ ಬಗ್ಗೆ ಸಿಡುಕುಗೊಳ್ಳಬಾರದು." ಹೀಗೆ ಕೆಲವೊಮ್ಮೆ ಮಾತ್ರವೇ, ಕೇವಲ ಸಂಕ್ಷಿಪ್ತವಾಗಿ ಸಮಜಾಯಿಷಿ ನೀಡಿರುವುದು ಕೂಡ ವಿವಾದಗಳ ಬಗೆಗಿನ ಅವರ ನಿಲುವಿನ ಬಗ್ಗೆ ನಮ್ಮ ಅನುಮಾನಗಳನ್ನು ಸ್ಪಷ್ಟವಾಗಿಸುತ್ತವೆ.

ಹಾಗೆ ನೋಡಿದರೆ ಕಲೆಯ ಬಗ್ಗೆ, ಅದರಲ್ಲಿಯೂ ಸೃಜನಶೀಲ ಕಲೆಯ ಬಗ್ಗೆ ಜನರ ನಿರೀಕ್ಷೆಗಳು, ಬಹುಸಂಖ್ಯಾತ ಸಮಾಜದ ನಿರೀಕ್ಷೆಗಳು ಕಲಾವಲಯದವರಿಂದ ಬೇರೆಯದೇ ಆಗಿರುತ್ತವೆ. ಕಲೆಯಲ್ಲಿಯೂ ಕೂಡ ಕಾಲ ಬದಲಾದಂತೆ, ಅಭಿವ್ಯಕ್ತಿ ವಿಧಾನಗಳು ಬದಲಾದಂತೆ ಧೋರಣೆಗಳು ಬದಲಾಗುತ್ತವೆ. ಬಹುತ್ವವಿರುವ ಈ ದೇಶದಲ್ಲಂತೂ ಕಾಲದಿಂದ ಕಾಲಕ್ಕೆ ಮಾತ್ರವೇ ಅಲ್ಲ, ಏಕಕಾಲದಲ್ಲಿಯೇ ಕಲೆಯ ಕುರಿತಂತೆ ಹಲವು ಬಗೆಯ ಅಭಿಪ್ರಾಯಗಳು ಇರುವುದು ಸಹಜವೇ. ಅಂಥೋಣಿ ಜೂಲಿಯಸ್ ತನ್ನ 'ಟ್ರಾನ್ಸ್‌ಗ್ರೆಶನ್ಸ್, ದಿ ಅಫೆನ್ಸಸ್ ಆಫ್ ಆರ್ಟ್' ಪುಸ್ತಕದಲ್ಲಿ ಹೇಳುವಂತೆ "First, that it is the job of the art to shock us into grasping some truth about

ನಿಲುವುಗಳಿಗೂ ಸಾಂಸ್ಕೃತಿಕ ಕ್ಷೇತ್ರದ ನಿಲುವುಗಳಿಗೂ ವ್ಯತ್ಯಾಸವಿದೆ. ಅಷ್ಟೇಕೆ, ಕಲೆಯ ವಲಯದಲ್ಲಿಯೇ ನಗ್ನತೆಯ ಕುರಿತಂತೆ, ಅದರಲ್ಲಿಯ ದೇವತೆಗಳ ನಗ್ನತೆ ಕುರಿತಂತೆ ವಿಭಿನ್ನ ನಿಲುವುಗಳಿವೆ.

ಗೊಮ್ಮಟೇಶ್ವರನಿಂದ ಹಿಡಿದು ಖಜುರಾಹೋ ಶಿಲ್ಪಗಳೂ ಸೇರಿದಂತೆ ನೂರಾರು, ಅಷ್ಟೇಕೆ ಸಾವಿರಾರು ಉದಾಹರಣೆಗಳು ನಮ್ಮ ನಡುವೆಯೇ ಇಂದಿಗೂ ಜೀವಂತವಾಗಿದ್ದರೂ ಅವುಗಳನ್ನು ಒಪ್ಪಿಕೊಂಡು ಮೌನವಹಿಸುವ ನಾವು ವರ್ತಮಾನದ ಚಿತ್ರ, ಶಿಲ್ಪಗಳಲ್ಲಿನ ನಗ್ನತೆಯನ್ನು ವಿರೋಧಿಸುತ್ತೇವೆ. (ಈ ಕುರಿತು ನನ್ನ 'ಚಿತ್ರಚಿತ್ತ' ಪುಸ್ತಕದಲ್ಲಿ ನಗ್ನತೆ-ಭೂತ ವರ್ತಮಾನಗಳ ದ್ವಂದ್ವ' ಎಂಬ ದೀರ್ಘ ಲೇಖನವಿದ್ದು ಈ ಕುರಿತ ಸ್ಪಷ್ಟತೆಗೆ ಆ ಲೇಖನ ನೋಡಬಹುದು.) ಅದರಲ್ಲಿಯೂ ಹಿಂದೂ ದೇವ-ದೇವತೆಗಳ ಚಿತ್ರಗಳನ್ನಂತೂ ಹಾಗೆ ಚಿತ್ರಿಸಲೇಬಾರದು ಎನ್ನುವುದು ಬಹುಸಂಖ್ಯಾತರ ನಿಲುವು. ಈ ಬಹುಸಂಖ್ಯಾತರಲ್ಲಿ ಹಿಂದೂಗಳು ಮಾತ್ರವೇ ಅಲ್ಲ, ಕ್ರಿಶ್ಚಿಯನ್ನರೂ, ಮುಸ್ಲಿಮರೂ ಸೇರಿದ್ದಾರೆ. ಹಾಗೆ ನೋಡಿದರೆ ನಮ್ಮಲ್ಲಿ ಸರಸ್ವತಿಯೂ ಸೇರಿದಂತೆ ಸಾಕಷ್ಟು ದೇವ-ದೇವತೆಗಳ ನಗ್ನಚಿತ್ರಗಳು, ಶಿಲ್ಪಗಳು ಶತಮಾನದಿಂದಲೂ ಇವೆ. ಶೈವರು, ವೀರಶೈವರು ಪೂಜಿಸುವ ಲಿಂಗವಂತೂ ಪುರುಷ ಮತ್ತು ಸ್ತ್ರೀ ಜನನಾಂಗಗಳ ಸಂಯೋಗ ರೂಪ. ಹಾಗಿದ್ದರೂ ಅವುಗಳನ್ನೆಲ್ಲ ಪ್ರಶ್ನಿಸದೆ ಗೌರವಿಸುವ ನಾವು ಹುಸೇನರನ್ನು ಮಾತ್ರ ಪ್ರಶ್ನಿಸುತ್ತೇವೆ.

ಇದಕ್ಕೆ ಇನ್ನೊಂದು ಕಾರಣವೆಂದರೆ ಹುಸೇನರು ಮುಸಲ್ಮಾನರಾಗಿರುವುದು. ಮುಸಲ್ಮಾನ ಕಲಾವಿದನೊಬ್ಬ ಹಿಂದೂ ದೇವತೆಗಳನ್ನು ನಗ್ನವಾಗಿ ಚಿತ್ರಿಸುವುದು ಎಷ್ಟು ಸರಿ? ಅವರು ಮುಸಲ್ಮಾನ್, ಕ್ರಿಶ್ಚಿಯನ್ ಕುರಿತ ವಸ್ತುಗಳನ್ನು ಚಿತ್ರಿಸುವಾಗ ಬಟ್ಟೆ ತೊಡಿಸಿ ಚಿತ್ರಿಸುತ್ತಾರೆ. ಆದರೆ ಹಿಂದೂಗಳ ಸಂದರ್ಭದಲ್ಲಿ ಮಾತ್ರ ನಗ್ನವಾಗಿ ಚಿತ್ರಿಸುತ್ತಾರೆ ಎನ್ನುವುದು ಅನೇಕರ ಆರೋಪ. (ಈ ಕುರಿತ ಹೋಲಿಕೆಯ ಅನೇಕ ಚಿತ್ರಗಳು, ಅಭಿಪ್ರಾಯಗಳು ಇಂಟರ್‌ನೆಟ್‌ನಲ್ಲಿ ಈಗಲೂ ಓಡಾಡುತ್ತಿವೆ. ಬೇಕಿದ್ದವರು http://arjunpuri.wordpress.comನಲ್ಲಿ ನೋಡಬಹುದು.) ಅಂತಿಮ ಸಂದರ್ಭ ಹೊರತು ಪಡಿಸಿದರೆ ಅವರು ಹಾಗೆ ಮಾಡಿರುವುದೇ ಹೆಚ್ಚು. ಹಿಂದೂ ಧರ್ಮದಲ್ಲಿರುವ ಸಹಿಷ್ಣುತೆ ಇದಕ್ಕೆ ಒಂದು ಕಾರಣವಾದರೆ, ಇನ್ನೊಂದೆಡೆ ಅವರಿಗೆ ಹಿಂದೂಗಳಿಗಿಂತಲೂ ಮುಸಲ್ಮಾನರ ಬಗ್ಗೆಯೇ ಹೆಚ್ಚಿನ ಭಯ ಇತ್ತೇನೋ ಎಂದೆನಿಸುತ್ತದೆ. ಏಕೆಂದರೆ ಮುಸ್ಲಿಂ ವಲಯದಲ್ಲಿ ಈ ಕುರಿತ ಚರ್ಚೆಗಳು ಬೇರೆಯದೇ ಸಂದರ್ಭದಲ್ಲಿ ಬಂದಾಗ ಹುಸೇನರು ತುಟಿಪಿಟಕ್ಕೆನ್ನಲಿಲ್ಲ. ಅಭಿವ್ಯಕ್ತಿ ಸ್ವಾತಂತ್ರ್ಯದ ಬಗ್ಗೆ ಸೈದ್ಧಾಂತಿಕ ಬದ್ಧತೆಯಿದ್ದರೆ ಅವರು ಹಾಗೆ ಮಾಡಬಹುದಿತ್ತಲ್ಲವೇ?

ಅಷ್ಟೇಕೆ, 'ಮೀನಾಕ್ಷಿ – ಎ ಟೇಲ್ ಆಫ್ ತ್ರೀ ಸಿಟೀಸ್' ಚಲನಚಿತ್ರವನ್ನು ಹುಸೇನ್ ನಿರ್ಮಿಸಿದಾಗ ಅದರಲ್ಲಿ ಕುರಾನ್ ಕುರಿತಂತೆ ತಪ್ಪಾಗಿ ಉಲ್ಲೇಖಿಸಲಾಗಿದೆ ಎಂದು ಮುಸಲ್ಮಾನರು ಆರೋಪಿಸಿದಾಗ, ಹುಸೇನರು ಆ ಚಲನಚಿತ್ರವನ್ನು ಹಿಂತೆಗೆದುಕೊಂಡರು. ಅವರಿಗೆ ತಮ್ಮ ನಿಲುವಿನ ಬಗ್ಗೆ ಬದ್ಧತೆಯಿದ್ದರೆ ಅದನ್ನು ಹಿಂದೆ ಪಡೆಯಬಾರದಿತ್ತಲ್ಲವೇ? ಅದೇ ಕೆಲಸವನ್ನು ಹಿಂದೂಗಳಿಗೆ ಸಂಬಂಧಿಸಿದ ಚಿತ್ರಗಳ ಸಂದರ್ಭದಲ್ಲಿಯೂ ಹಾಗೆ ಮಾಡಬಹುದಿತ್ತಲ್ಲವೇ? ಈ ಪ್ರಶ್ನೆಗಳಿಗೆ ಉತ್ತರಗಳನ್ನು ಹುಡುಕಲು ಹೊರಟರೆ ಹುಸೇನ ಸೈದ್ಧಾಂತಿಕ ನಿಲುವುಗಳ ಬಗ್ಗೆ ನಿಜಕ್ಕೂ ಅನುಮಾನಗಳು ಏಳುತ್ತವೆ.

ಅದೇನೇ ಇರಲಿ, ಈ ನಗ್ನ ಚಿತ್ರಗಳ ಸಂದರ್ಭದಲ್ಲಿ ನಮ್ಮ ದೇಶದ ಬುದ್ಧಿ ಜೀವಿಗಳು, ಸಂಸ್ಕೃತಿ ಚಿಂತಕರು, ಕಲಾವಿದರು ಹುಸೇನರಿಗೆ ಕೇವಲ ಭಾವನಾತ್ಮಕ ಬೆಂಬಲವನ್ನಷ್ಟೇ

**ಕೊಟ್ಟರಲ್ಲದೆ, ಧೃಡನಿಶ್ಚಯದಿಂದ ಕ್ರಿಯಾತ್ಮಕ ಹೋರಾಟ ನಡೆಸಲಿಲ್ಲ.** ನಮ್ಮ ಸಮೂಹ ಮಾಧ್ಯಮಗಳು ಕೂಡ ಈ ದೆಸೆಯಲ್ಲಿ ತಮ್ಮ ಜವಾಬ್ದಾರಿಯನ್ನು ಮರೆಯಲಿಲ್ಲ. ಓಗೆ ಒಟ್ಟಾರೆಯಾಗಿ ಹುಸೇನರನ್ನು ವಿರೋಧಿಸುವವರಿಗೆ ಸೂಕ್ತ ಉತ್ತರವನ್ನು ನೀಡುವ ಕೆಲಸವನ್ನು ನಮ್ಮ ಜಾಗೃತ ಸಮಾಜ ಮಾಡಲಿಲ್ಲ. ಹಾಗಿದ್ದರೂ ಹುಸೇನರನ್ನು ಬಹುಸಂಖ್ಯಾತರು ವಿರೋಧಿಸಿದರಾದರೂ, ಕೆಲವರು ಮೊಕದ್ದಮೆಗಳನ್ನು ಹೂಡಿದರಾದರೂ ಅವರ ಜೀವಕ್ಕೆ ಭಯವಿತ್ತು ಎಂಬುದನ್ನೂ ಒಪ್ಪುವುದು ಸ್ವಲ್ಪ ಕಷ್ಟವೇ. ಏಕೆಂದರೆ ಮುಸ್ಲಿಂ ಮೌಲ್ವಿಗಳು, ಮುಲ್ಲಾಗಳು ಫತ್ವಾ ಹೊರಡಿಸಿದರೆ ಯಾವ ಗಂಭೀರತೆ ಇರುತ್ತದೋ ಆ ಬಗೆಯ ಭಯ ಹಿಂದೂಗಳ ಸಂದರ್ಭದಲ್ಲಿ ಇರುವುದು ಅಪರೂಪ. ಆಕಸ್ಮಾತ್ ಇದ್ದರೂ ಅದಕ್ಕೆ ರಕ್ಷಣೆ ಪಡೆಯಲು ನಮ್ಮ ಪ್ರಜಾಪ್ರಭುತ್ವದಲ್ಲಿ ಹಲವಾರು ದಾರಿಗಳಿವೆ. ಹೀಗಿರುವಾಗ ಹುಸೇನರು ಭಾರತ ಬಿಡುವ ಅವಶ್ಯಕತೆ ಇರಲಿಲ್ಲ.

ಜೀವಮಾನವೆಲ್ಲ ಭಾರತೀಯ ಸಂಸ್ಕೃತಿಗಾಗಿ ತಹತಹಿಸಿದ ವ್ಯಕ್ತಿ ತನ್ನ ಕೊನೆಗಾಲದಲ್ಲಿ ಖತಾರ್‌ನ ಪೌರತ್ವ ಸ್ವೀಕರಿಸುವಂತಹ ಅಗತ್ಯವಂತೂ ಇರಲಿಲ್ಲ. ಹೀಗೆಯೇ ಸ್ಪೇನಿನ ಸರ್ವಾಧಿಕಾರಿ ಜನರಲ್ ಫ್ರಾಂಕೋವಿನೊಂದಿಗಿನ ಭಿನ್ನಾಭಿಪ್ರಾಯದಿಂದಾಗಿ ಪಿಕಾಸೊ ಕೂಡ ತನ್ನ ಸ್ವಂತ ದೇಶ ಸ್ಪೇನನ್ನು ತೊರೆದಿದ್ದ. ಐರ್ಲೆಂಡಿನ ಜೇಮ್ಸ್ ಜಾಯ್ಸ್ 'ಯೂಲಿಸಿಸ್' ಬರೆದಾಗ ಅಲ್ಲಿನ ಕ್ಯಾಥೋಲಿಕ್ ಚರ್ಚ್ ವಿರೋಧಿಸಿದಾಗ ಐರ್ಲೆಂಡ್ ತೊರೆದಿದ್ದನಾದರೂ ಬೇರೆ ದೇಶದ ಪೌರತ್ವ ಸ್ವೀಕರಿಸಲಿಲ್ಲ. ಪಿಕಾಸೊವಿಗೆ ಸ್ಪೇನಿನ ಬಗ್ಗೆ ಅದೆಷ್ಟು ಗೌರವವಿತ್ತೆಂದರೆ, ಗೆರ್ನಿಕಾ ಕೃತಿ ಸ್ಪೇನಿನಲ್ಲಿ ಪ್ರದರ್ಶಿತವಾಗುವ ಭಾರೀ ಹಂಬಲ ಇಟ್ಟುಕೊಂಡು, ಅದರಲ್ಲಿ ಕೊನೆಗೆ ಯಶಸ್ವಿಯೂ ಆದ. ದೇಶ ತೊರೆಯಲು ಜೀವಭಯವೇ ಕಾರಣವೆನ್ನುವುದಾದರೆ, ತಸ್ಲೀಮಾ ನಸ್ರೀನ್ ಸೇರಿದಂತೆ ಅದೆಷ್ಟು ಜನರಿಗೆ ನಮ್ಮ ದೇಶ ಆಶ್ರಯ ನೀಡಿದೆ.

ಅಷ್ಟೇಕೆ, ನಮ್ಮ ನಡುವೆ 'ಝೆಡ್' ಕೆಟಗರಿಯ ರಕ್ಷಣೆ ಪಡೆದು ಅವರೆಲ್ಲ ಈ ದೇಶದಲ್ಲಿಯೇ ಸುರಕ್ಷಿತವಾಗಿರುವಾಗ ಹುಸೇನರಿಗೆ ರಕ್ಷಣೆ ಕೊಡುವುದು ಕಷ್ಟದ ಮಾತೇನೂ ಆಗಿರಲಿಲ್ಲ. ಹುಸೇನ್ ಕೂಡ ಭಾರತ ಸರ್ಕಾರದ ರಕ್ಷಣೆ ಕೋರಿ ಇಲ್ಲಿಯೇ ಉಳಿಯಬಹುದಿತ್ತು.

ಹುಸೇನರು ದೇಶ ಬಿಡುವ ಯೋಚನೆ ಮಾಡಿದಾಗ ನಮ್ಮ ಕಲಾವಲಯ ಅವರ ನೆರವಿಗೆ ಬರಲಿಲ್ಲ ಎಂಬುದು ವಾಸ್ತವ. ಇಂತಹ ಸಂದರ್ಭದಲ್ಲಿ ಹುಸೇನರು ಆಗಾಗ ~~ಹೇಳುತ್ತಿದ್ದ ಉರ್ದು ದ್ವಿಪದಿಯೊಂದು~~ ನೆನಪಿಗೆ ಬರುತ್ತದೆ. "ಜಿನ್ ಕೊ ಅಪ್ನಾ ಕಹತಾ ಹೈ ಕಬ್ ಯೆ ತೇರಿ ಸಾಥಿ ಹೈ; ಕಬ್ರಾ ಹೈ ತೇರಿ ಮಾಜಿಲ್ ಔರ್ ಯೆ ಬಾರಾತಿ ಹೈ ಲಾಕೆ ಕಬ್ರಾ ಮೆ ತುಜ್‌ಕೊ ಉರ್‌ದಾ ಪಕ್ ದಾಲೇಂಗೆ ಅಪನೆ ಹಾತೊಂಸೆ ತೇರೆ ಮುಹ್ ಪೆ ಖಿಕ್ ದಾಲೇಂಗೆ."

**(ನಿಮ್ಮದೇ ಸ್ವಂತ ಜನ ಎಂದು ನೀನು ಕರೆಯುವವರು ಒಂದು ದಿನ ನಿನ್ನನ್ನು ತೊರೆಯುತ್ತಾರೆ; ನಿನ್ನನ್ನು ಸ್ಮಶಾನದಲ್ಲಿ ಹೂತು, ನಿನ್ನ ಮುಖವನ್ನು ಹಿಡಿಮಣ್ಣಿಂದ ಮುಚ್ಚುತ್ತಾರೆ.)**

ಓಗೆ ನಮ್ಮ ದೇಶವೇ ಅವರಿಗೆ ಕೈಕೊಟ್ಟಿತು. ನಮ್ಮ ಕೇಂದ್ರ ಸರ್ಕಾರವೂ ಅಗತ್ಯ ಭರವಸೆ ನೀಡಲಿಲ್ಲ. ಕೊನೆಯಪಕ್ಷ ಹುಸೇನರು ಸತ್ತ ನಂತರ ಕ್ಲೀಷೆಯ ಮಾತುಗಳಿಂದ ಅವರಿಗೆ ನೆಪಮಾತ್ರದ ಗೌರವವನ್ನು ಸಲ್ಲಿಸಿದೆವೇ ಹೊರತು ಅವರ ದೇಹವನ್ನು ಭಾರತದಲ್ಲಿ ಮಣ್ಣು ಮಾಡಿ ಭಾರೀ ಸ್ಮಾರಕವೊಂದನ್ನು ನಿರ್ಮಿಸುವಲ್ಲಿಯೂ ಸೋತದ್ದು ಬರಿಯ ಕಲಾವಲಯವಲ್ಲ, ಭಾರತ ದೇಶ. ಹಾಗಿದ್ದರೂ ಹುಸೇನರಿಗೆ ಸ್ವಲ್ಪವಾದರೂ ಸಾಂತ್ವನ

ನೀಡುವಲ್ಲಿ ನೆರವಾದುದು ನಮ್ಮ ನ್ಯಾಯಾಂಗವೇ.

೨೦೦೮ರಲ್ಲಿ ದೆಹಲಿ ಹೈಕೋರ್ಟ್ "ಹುಸೇನರ ಕೃತಿಗಳು ಅಸಭ್ಯ ಎನ್ನುವುದು ಆಧಾರರಹಿತ. ಚಿತ್ರಗಾರರು ಹೊಸದೊಂದು ದೃಷ್ಟಿಕೋನದಿಂದ ನೋಡುತ್ತಾರಲ್ಲದೆ, ಅ ದೃಷ್ಟಿಕೋನದಿಂದ ಭಿನ್ನತೆಯು ಅವರ ಮೇಲೆ ಕ್ರಿಮಿನಲ್ ಮೊಕದ್ದಮೆ ಹೂಡುವುದಕ್ಕೆ ಕಾರಣವಾಗಬಾರದು" ಎಂದಿತು. ಮುಂದೆ ಅದು ಹೇಳಿದ್ದು ಹೀಗೆ : "In India, a nev puritanism is being carried out in the name of cultural purity anc host of Ignorant people are vandalising art and pushing us toward a pre-renaissance era. A painter at 90 deserves to be sitting in hi home and painting his canvas. Frivolous and vexatious complaint should be scrutinised strictly at the magisterial level".

ಹೀಗೆ ನಮ್ಮ ನ್ಯಾಯಾಂಗವು ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಎತ್ತಿ ಹಿಡಿಯಿತು. ಅಷ್ಟೇ ಕೊನೆಗೆ ಹುಸೇನರ ಮೇಲಿನ ಮೊಕದ್ದಮೆ ರದ್ದು ಪಡಿಸಿದಾಗ ಸುಪ್ರೀಂಕೋರ್ಟ್ ತೀರ್ಪಿನಲ್ಲಿ ನೀಡಿದ ಹೇಳಿಕೆಗಳು ಸದ್ಯದಲ್ಲಿ ಕಲಾವಿದರಿಗೆ ಬೈಬಲ್‌ನಂತಿವೆ. ಅದು ಹೀಗಿದೆ. "Ther are so many such subjects, photographs and publications. wi you file cases against all of them? What about temple structures Hussain's work is art. If you don't want to see it, don't see it. Ther are so many such art forms in temple structures". ನಿಮಗೆ ಅವುಗಳನ್ನು ನೋಡಲು ಇಷ್ಟವಿಲ್ಲದಿದ್ದರೆ ನೋಡಬೇಡಿ ಎನ್ನುವ ಬುದ್ಧಿವಾದದ ಮಾತುಗಳನ್ನು ಕೂ ನಗ್ನತೆಯ ವಿರೋಧಿಗಳಿಗೆ ಸುಪ್ರೀಂಕೋರ್ಟ್ ಹೇಳಿತು. ನ್ಯಾಯಾಂಗದಲ್ಲಿ ನಮ ನಂಬಿಕೆಯಿದೆ ಎನ್ನುವುದಕ್ಕೆ ಇದೇ ಉದಾಹರಣೆ ಸಾಕು.

ಈಗ ನಮ್ಮ ದೇಶದಲ್ಲಿ ಕಲೆಗೆ ಆಗಬಾರದ್ದೆಲ್ಲ ಆಗಿದೆ. ಈ ದೇಶದ ಕಲಾವಿದರಿ ಪ್ರತಿಷ್ಠೆ ಗಳಿಸಿಕೊಟ್ಟ, ಮಾರುಕಟ್ಟೆಯನ್ನು ನಿರ್ಮಿಸಿಕೊಟ್ಟ. ಭಾರತೀಯ ಸಮಕಾಲೀ ಕಲೆಗೆ ಅಂತಾರಾಷ್ಟ್ರೀಯ ಮಾನ್ಯತೆ ದೊರೆಯುವಲ್ಲಿ ಕಾರಣವಾದ ಹುಸೇನರು ನಮ್ಮನ್ನ ತೊರೆದಿದ್ದಾರೆ. ಅವರಿಗೆ ನಾವು ಮಾಡಿದ ಅನ್ಯಾಯವನ್ನು ಸರಿಪಡಿಸಲು ನಾವು ಹೀ ಮಾಡಬಹುದಾಗಿದೆ. ಅದರಲ್ಲಿ ಮೊದಲನೆಯದೆಂದರೆ **ದೆಹಲಿ ಹೈಕೋರ್ಟು ಮತ್ತು ಸುಪ್ರೀ ಕೋರ್ಟುಗಳ ತೀರ್ಪುಗಳನ್ನು ಮುಂದಿಟ್ಟುಕೊಂಡು ನಮ್ಮ ಬಹುಸಂಖ್ಯಾತ ಸಮುದಾಯದ ಸಮಕಾಲೀನ ಕಲೆಯ ಬಗೆಗೆ ಇರುವ ಅಪನಂಬಿಕೆಗಳನ್ನು ತೊಡೆದು ಹಾಕುವ ಪ್ರಯ ಮಾಡುವುದು.**

**ಎರಡನೆಯದೆಂದರೆ ಚಿತ್ರಕಲೆಯ ಕ್ಷೇತ್ರಕ್ಕೆ 'ಭಾರತರತ್ನ' ಇನ್ನೂ ಸಂದಿಲ್ಲ. ಜೀವಮಾನವಿಡೀ ಕಲೆಗಾಗಿ ದುಡಿದು, ಭಾರತದಲ್ಲಿ ಬೇರಾರೂ ರಚಿಸದಷ್ಟು ಸಂಖ್ಯೆಯಲ್ಲಿ ಕಲಾಕೃತಿಗಳನ್ನ ವಿಶಿಷ್ಟ ರೀತಿಯಲ್ಲಿ ರಚಿಸಿ, ಕಲೆಯನ್ನೇ ಉಸಿರಾಗಿಸಿಕೊಂಡ ಹುಸೇನರಿಗೆ 'ಭಾರತ ರ ನೀಡುವಂತೆ ಭಾರತ ಸರ್ಕಾರವನ್ನು ಒತ್ತಾಯಿಸುವುದು.** ಹಾಗಾದಾಗ, ಹಾಗೆ ಮಾಡಿದಾ ನಾವು ಹುಸೇನರಿಗೆ ಮಾಡಿದ ತಪ್ಪುಗಳಿಗೆ ಪಶ್ಚಾತ್ತಾಪ ಪಟ್ಟಂತಾಗುತ್ತದಲ್ಲದೆ. ಅವ ಸಲ್ಲಬೇಕಾದ ಗೌರವವನ್ನು ಸಲ್ಲಿಸಿದಂತಾಗುತ್ತದೆ.



# ಕಿ.ರಂ. ನೆನಪು: ಮರೆತೆನೆಂದರೂ ಮರೆಯಲಿ ಹ್ಯಾಂಗ

–ಡಾ. ಎಚ್.ಎಲ್. ಪುಷ್ಪ

'ಜವರಾಯ ಬಂದರೆ ಬರಿಗ್ಗೈಲಿ ಬರುವಾನೆ. ಒಳ್ಳೊಳ್ಳೆ ಮರನಾ ಕಡಿಬಂದ' – ಈ ಮಾತು ಈಗಾಗಲೇ ಬಳಕೆಯಾಗಿ ಜೀರ್ಣವಾದ ಸಾಲುಗಳಿಂದ ಕೂಡಿದೆ. ಯಾರೂ ನಿರೀಕ್ಷಿಸಿದ ರೀತಿಯಲ್ಲಿ ಕಿ.ರಂ. ನಾಗರಾಜ ಮೇಷ್ಟ್ರು ನಮ್ಮನ್ನು ಅಗಲಿ ಹೋಗಿ ಒಂದು ವರ್ಷವಾಗಿದೆ. (ನಿಧನ ೭-೮-೨೦೧೦) ಪ್ರೊ. ಕಿ.ರಂ. ಜೊತೆ ಸಂಪರ್ಕವಿದ್ದವರು ಒಂದೊಂದು ರೀತಿಯ ಆತ್ಮೀಯತೆ, ಸ್ನೇಹ, ಶಿಷ್ಯತ್ವದ ಬಳಗಕ್ಕೆ ಸೇರಿದವರು. ಈ ಯಾವ ಬಳಗಕ್ಕೆ ಸೇರದ ಸಾಹಿತ್ಯಲೋಕದ ಯುವಜನಾಂಗಕ್ಕೆ ಮೇಷ್ಟ್ರು ಒಂದು ರೀತಿಯ ಕೌತುಕ. ಮತ್ತೊಂದು ರೀತಿಯಲ್ಲಿ ಕೇಳಿ ಕೇಳಿ ನೋಡದೆಯೇ ಉಂಟಾದ ಧನ್ಯತಾಭಾವ. ಇಷ್ಟೊಂದು ಪ್ರೀತಿ, ಆತ್ಮೀಯತೆ, ಧನ್ಯತೆ ಕೆಲವರ ಪಾಲಿಗಷ್ಟೇ ದಕ್ಕುವುದು–ಇದು ಒಂದು ರೀತಿಯ ಅದೃಷ್ಟ. ಈ ಅದೃಷ್ಟಶಾಲಿಗಳಲ್ಲಿ ನಾನೂ ಒಬ್ಬಳು.

ಎಂಬತ್ತರ ದಶಕದಲ್ಲಿ ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ವಿಭಾಗ ಹಲವು ರೀತಿಯಲ್ಲಿ ಬಹುಪ್ರಸಿದ್ಧವಾದ ಕೇಂದ್ರವಾಗಿತ್ತು. ಡಾ.ಜಿ.ಎಸ್. ಶಿವರುದ್ರಪ್ಪ ಕೇಂದ್ರದ ನಿರ್ದೇಶಕರಾಗಿದ್ದರೆ, ಅವರೊಂದಿಗೆ ಎಂ. ಚಿದಾನಂದಮೂರ್ತಿ, ಚಂದ್ರಶೇಖರ ಕಂಬಾರ, ಕೆ. ಮರುಳಸಿದ್ದಪ್ಪ, ಕಿ.ರಂ. ನಾಗರಾಜ, ಡಿ.ಆರ್. ನಾಗರಾಜ, ಲಕ್ಷ್ಮೀನಾರಾಯಣಭಟ್ಟ, ಬರಗೂರು ರಾಮಚಂದ್ರಪ್ಪ, ಸಿದ್ಧಲಿಂಗಯ್ಯ, ಕಾರ್ಲೋಸ್, ಕೆ.ವಿ. ನಾರಾಯಣ, ಸುಮತೀಂದ್ರ ನಾಡಿಗ್, ಕಲ್ಗುಡಿ ಮುಂತಾದ ಹಲವು ರೀತಿಯ

ಪ್ರಸಿದ್ಧರು ಇದ್ದರು. ಹೆಚ್ಚು ವಿದ್ಯಾರ್ಥಿಗಳನ್ನು ಸಂಪರ್ಕದಲ್ಲಿಟ್ಟುಕೊಂಡು ಅವರೊಂದಿಗೆ ಆತ್ಮೀಯತೆಯಿಂದ ವರ್ತಿಸುವಲ್ಲಿ ಕಿ.ರಂ. ನಾಗರಾಜ ಹಾಗೂ ಬರಗೂರು ರಾಮಚಂದ್ರಪ್ಪ ಕಣ್ಸೆಳೆಯುತ್ತಿದ್ದರು.

ಕಿ.ರಂ. ಅವರಿಂದ ತರಗತಿಯ ಒಳಗಿಗಿಂತ ಹೊರಗೆ ಕಲಿತಿದ್ದು ಹೆಚ್ಚು. ನಾನು ಪ್ರಥಮ ವರ್ಷದ ಎಂ.ಎ. ವಿದ್ಯಾರ್ಥಿಯಾಗಿದ್ದಾಗ ವಿಚಾರಸಂಕಿರಣಕ್ಕೆಂದು ಗಂಗಾಧರ ಚಿತ್ತಾಲರ 'ಸಂಪರ್ಕ' ಸಂಕಲನವನ್ನು ಆರಿಸಿಕೊಂಡಾಗ ಮೇಷ್ಟ್ರನ್ನು ಹತ್ತಿರದಿಂದ ನೋಡುವಂತಾಗಿ ಹೆಚ್ಚು ಹೆಚ್ಚು ಸಂಪರ್ಕ ಒದಗಿತು. ಎರಡನೇ ವರ್ಷದಲ್ಲಿ ಕಾಮು 'ಕಾಲಿಗುಲ' ಆರಿಸಿಕೊಂಡಾಗ ಅದು ಇನ್ನಷ್ಟು ಬೆಳೆಯಿತು. ನಾನು, ನನ್ನ ಸೀನಿಯರ್ ಜಿ. ಆನಂದಮೂರ್ತಿ, ಚಂದ್ರಿಕಾ ಪುರಾಣಿಕ್, ವೆಂಕಟೇಶ್, ಎಲ್.ಎನ್. ಮುಕುಂದರಾಜ್ ಮತ್ತಿತರರು ಮತ್ತೆಮತ್ತೆ ಅವರ ಚೇಂಬರಿಗೆ ಹೋಗುತ್ತಿದ್ದುದು, ವಿಷಯಗಳನ್ನು ಕೆದಕಿ ಕೆದಕಿ ಚರ್ಚೆ ಮಾಡುತ್ತಿದ್ದ ನೆನಪುಗಳು ಈಗಲೂ ಹಸಿರಾಗಿವೆ. ಮತ್ತೆ ಮತ್ತೆ ಮನಸ್ಸು ಕಳೆದ ಆ ದಿನಗಳ ಕಡೆ ಓಡುತ್ತಿದೆ. ಮೇಷ್ಟ್ರು ಈಗಿಲ್ಲವೆಂದರೂ ನಾನು ಖಂಡಿತಾ ಒಪ್ಪುವುದಿಲ್ಲ. ಭೌತಿಕವಾಗಿ ಇಲ್ಲದಿರಬಹುದು. ಆದರೆ ಸಾಹಿತ್ಯ, ಸಂಸ್ಕೃತಿ, ಚಿಂತನೆಯ ನೆನಪುಗಳ ಇನ್ನೂ ಹಚ್ಚ ಹಸುರಾಗಿ ನಮ್ಮಲ್ಲಿ ಜೀವಂತವಾಗಿವೆ.

ಮೇಷ್ಟ್ರು ನೋಡುವುದಕ್ಕೆ ಸಂಕೀರ್ಣವೆನಿಸಿದರೂ ಬಿಚ್ಚಿಕೊಂಡರೆ ಸರಳ ಮತ್ತು ಸಲೀಸು ಸಾಯುವ ಸ್ವಲ್ಪ ಕಾಲದವರೆಗೂ ಅವರ ಮಾತಿಗೆ ತೊಡಗುವವರೆಗೂ ನನ್ನಲ್ಲಿ ಅವರ ಬಗ್ಗೆ ಅಗೋಚರವಾಗಿದ್ದ ಭಯವಿದ್ದೇ ಇತ್ತು. ಅವರು ಮಾತಾಡಲು ಆರಂಭಿಸಿದಾಗ ನಮಗೆ ಸುಲಭವಾಗಿ ದಕ್ಕುತ್ತಿದ್ದರು. ಮೇಷ್ಟ್ರು ಮೊದಲಿಂದಲೂ ತಮ್ಮನ್ನು ಗುರುತಿಸಿಕೊಳ್ಳುತ್ತಿದ್ದುದು ಯುವಜನಾಂಗದ ಹೊಸ ವಿಚಾರಗಳೊಂದಿಗೆ. ನಿಂತ ನಿಂತಲ್ಲೇ ಕುಮಾರವ್ಯಾಸನನ್ನು ಪಂಪನನ್ನು ಸುಲಿದ ಬಾಳೆಯ ಹಣ್ಣಾಗಿಸುವ ರೀತಿ ಗೌರವ ಮೂಡಿಸುತ್ತಿತ್ತು. ನಿರಂತರ ಅಧ್ಯಯನದಿಂದ ದಕ್ಕಿಸಿಕೊಂಡ ಪ್ರೌಢಿಮೆ ಅವರದಾಗಿತ್ತು. ಅನಗತ್ಯವಾದ ಚರ್ಚೆಗಳ ಭಾಗವಹಿಸದ, ಚರ್ಚೆಗಳನ್ನು ಬೆಳೆಯಗೊಡದ ಅವರು ಅಂತಹ ಸಂದರ್ಭಗಳನ್ನು ದಿಟ್ಟವಾಗಿಯೇ ಖಂಡಿಸುತ್ತಿದ್ದರು. ಜಾತಿ ಪಂಗಡ ಧ್ರುವೀಕರಣಕ್ಕೆ ಒಳಗಾಗುತ್ತಿರುವ ಇಂದಿನ ಸಂದರ್ಭದಲ್ಲಿ ಯಾವುದನ್ನೂ ಪ್ರೋತ್ಸಾಹಿಸದ, ಪ್ರತಿಭೆಯನ್ನು ಮಾತ್ರ ಗುರ್ತಿಸುವ ದಿಟ್ಟತನ ಅವರಲ್ಲಿತ್ತು. ನಮ್ಮ ತಲೆಮಾರನ್ನು ಒಳಗೊಂಡಂತೆ ನಮ್ಮ ನಂತರದ ತಲೆಮಾರು ಒಂದಲ್ಲಾ ಒಂದು ರೀತಿಯಲ್ಲಿ ಅವರಿಂದ ಉಪಕೃತಗೊಂಡಿತ್ತು. ಪ್ರಭಾವಕ್ಕೆ ಒಳಗಾಗಿತ್ತು. ಕೇವಲ ಸಾಹಿತ್ಯದ ಓದು, ಚರ್ಚೆಗಳಿಂದ ಬಹುದೊಡ್ಡ ವಲಯವನ್ನು ಕಟ್ಟಿದವರು ಬಹು ವಿರಳರಾಗಿದ್ದು ಈ ಗುಂಪಿನಲ್ಲೇ ಕಿ.ರಂ. ಬರುತ್ತಾರೆ. ಇವರಷ್ಟೇ ದೈತ್ಯ ಪ್ರತಿಭೆ ಹೊಂದಿದ್ದ ಮತ್ತೊಬ್ಬ ವ್ಯಕ್ತಿ ರಂಗಜಂಗಮ ಎಂದು ಕರೆಸಿಕೊಂಡ ರಂಗ ಸಂಘಟಕ, ನಿರ್ದೇಶಕ ಪ್ರೊ.ಸಿ.ಜಿ. ಕೃಷ್ಣಸ್ವಾಮಿ. ಸಿಜಿಕೆ ಎಂದು ಖ್ಯಾತರಾಗಿದ್ದ ಇವರು ಗಾಂಧಿ ಭವನ ನಿರ್ದೇಶಕರಾಗಿದ್ದ ಸಂದರ್ಭದಲ್ಲಿ ಕಿ.ರಂ. ಅವರ ಜೊತೆಯಲ್ಲಿ ನಡೆಸಿದ ಹಲವಾರು ಸಾಹಿತ್ಯ ಹಾಗೂ ರಂಗ ಚಟುವಟಿಕೆಗಳು ಇಂದಿಗೂ ಸ್ಮರಣಾರ್ಹ.

ಈ ಇಬ್ಬರೂ ಸ್ಮರಣೀಯರ ಜೋಡಿ ಕನ್ನಡ ಸಂಸ್ಕೃತಿ ಇಲಾಖೆಯಿಂದ ಏರ್ಪಡಿಸಿದ ಪಂಪ ಹಾಗೂ ಕುಮಾರವ್ಯಾಸನ ಕಾವ್ಯಾನುಸಂಧಾನಗಳು ಹಾಗೂ ತನ್ಮೂಲಕ ಹುಟ್ಟಿದ ಹೊಸ ರಂಗಪಠ್ಯಗಳು, ನಾಟಕಕಾರರು ಇಂದಿಗೂ ಗಮನಾರ್ಹ ಸಾಧನೆಗಳಾಗಿವೆ. ಕಿ.ರಂ. ನಿರಂತರ ಕನಸುಗಾರ. ನಾಳೆಯ ಕನಸನ್ನು ಯುವ ಜನಾಂಗದ ಮೂಲಕ ಕಾಣುವ ಅದನ್ನು ಆಗು ಮಾಡಿಸುವ ಹಂಬಲ ಅವರಿಗಿತ್ತು. ಒಬ್ಬೊಬ್ಬರ ಬಳಿಯೇ ಹಂಚಿಕೊಂ

ಆದರೆ ಆಗದೆ ಉಳಿದ ಹಲವು ಕನಸುಗಳು ಹಾಗೇ ಉಳಿದಿವೆ. ನಿರಂತರ ಅಧ್ಯಯನ, ಶೋಧನೆ, ಕನಸು ಕಂಡು ಹಂಚುವ ಪ್ರವೃತ್ತಿಗಳ ಸಂಗಮವೇ ಕಿ.ರಂ.

ಕಾವ್ಯದ ಅಪಾರ ಮೋಹಿ ಕಿ.ರಂ. ತಮ್ಮ ಬಗಲ ಚೀಲದಲ್ಲಿ ಕಾವ್ಯವನ್ನು ಎಲ್ಲ ಕಡೆಗೂ ಹೊತ್ತೊಯ್ಯುವರು. ನೀಲಗಾರರು ಹಾಗೂ ಆ ಪರಂಪರೆಯ ಮಂಟೆಸ್ವಾಮಿಯ ಬಗ್ಗೆ ಕಪ್ಪಡಿಯ ಜಾತ್ರೆ, ರಾಚಪ್ಪಾಜಿಯ ಪರಂಪರೆಯ ಬಗ್ಗೆ ತಮ್ಮ ಹೆಗಲ ಚೀಲವನ್ನು ಹೊತ್ತೊಯ್ದು ಅಲ್ಲಿನ ಹಾಡುಗಾರಿಕೆ, ಸುರೆಯ ವಾತಾವರಣದಲ್ಲಿ ಮೈ ಮರೆತು ಮುಳುಗಿದ್ದನ್ನು ಅವರ ಜೊತೆ ಇದ್ದವರು ನೆನಪಿಸಿಕೊಳ್ಳುತ್ತಾರೆ. ಕಾವ್ಯ ಕುರಿತಾದ ಚರ್ಚೆಯಲ್ಲಿ ನೀಲಗಾರರ ಬಗ್ಗೆ ಮಾತನಾಡುತ್ತಾ 'ಬರ್ತೀರೇನ್ರಿ ಕಪ್ಪಡಿ ಜಾತ್ರೆಗೆ? ಅಲ್ಲಿ ನಿಜವಾದ ಕಾವ್ಯ ಜೀವನವಿದೆ' ಎಂದು ನನ್ನನ್ನು ಆಹ್ವಾನಿಸಿದ್ದುಂಟು. ನಾನೂ ಹೋಗಬೇಕೆಂದು ಅಂದುಕೊಳ್ಳುತ್ತಾ ಕಾಲ ತಳ್ಳುವಷ್ಟರಲ್ಲಿ ಆ ಸಂದರ್ಭ ಒದಗಿಯೇ ಬರಲಿಲ್ಲ.

ಕಾವ್ಯವನ್ನು ಪೋಷಿಸಿದ ಕಿ.ರಂ. ಒಮ್ಮೆ ಅಡಿಗರನ್ನು ಕುರಿತು ನಾನು ಬರೆದ "ಹೊಗೆಯಲ್ಲಿ ಗಿಲಕಿ ಕಣ್ಣ ಗೊಂಚೆ" ಕಾವ್ಯ ವಾಚಿಸುವಾಗ (ಮಿಥಿಕ್ ಸೊಸೈಟಿಯಲ್ಲಿ ನಡೆದ ಕವಿಗೋಷ್ಠಿ) ಆ ಕೊಲಾಜ್ ರಚನೆಯನ್ನು ಮೆಚ್ಚಿ 'ಒನ್ಸ್ ಮೋರ್' ಎಂದು ಕಾವ್ಯವನ್ನು ಮತ್ತೆ ಮತ್ತೆ ಓದಿಸಿದ ನೆನಪು ಇನ್ನೂ ರೋಮಾಂಚಕ. ಎಲ್ಲಾ ಪೂರ್ವಾಗ್ರಹಗಳನ್ನು ಬದಿಗೊತ್ತಿ ಕೇವಲ ಕಾವ್ಯದ 'ಗುಣ'ವನ್ನು ಪ್ರೋತ್ಸಾಹಿಸಿದ, ಬೆಳೆಸಿದ ವ್ಯಕ್ತಿಗಳಲ್ಲಿ ಕಿ.ರಂ. ಹಾಗೂ ಜಿ. ಶ್ರೀನಿವಾಸರಾಜು ಇಂದಿಗೂ ಸ್ಮರಣೀಯರೇ.

ಇದ್ದಕ್ಕಿದ್ದಂತೆ ಕಾವ್ಯ ಕುರಿತು ಅವರು ಹಾಕುತ್ತಿದ್ದ ಪ್ರಶ್ನೆಗಳು ತಬ್ಬಿಬ್ಬಾಗಿಸುತ್ತಿದ್ದವು. ಒಂದು ದಿನ ಕಾವ್ಯ ಕುರಿತ ಚರ್ಚೆಯಲ್ಲಿ ನನ್ನೆಡೆಗೆ ತಿರುಗಿ, ಕಾವ್ಯ ಯಾವಾಗ್ರಿ ಹೊರಗೆ ಬರುತ್ತೆ? ಎಂದು ಪ್ರಶ್ನಿಸಿದರು. ತಕ್ಷಣ ಉತ್ತರ ಕೊಡಲಾಗದ ನಾನು ಆ ಪ್ರಶ್ನೆಗೆ ಉತ್ತರ ರೂಪದಲ್ಲಿ 'ಗುರುವು ತೋರಿದ ಕವಿತೆ'ಯನ್ನು ಬರೆದು ತೋರಿಸಿದೆ. ಅವರು ಮೆಚ್ಚಿಕೊಂಡರು ಸಹ. ಪ್ರತಿ ಚರ್ಚೆಯಲ್ಲಿ ಜಗತ್ತಿನ ಭಿನ್ನ ಭಿನ್ನ ಕಾವ್ಯಗಳನ್ನು ಓದುವಂತೆ ಪ್ರೇರೇಪಿಸುತ್ತಿದ್ದ ಮೇಷ್ಟ್ರು ಒಮ್ಮೆ ಫ್ರೆಂಚ್‌ನ ಅಸಂಗತ ಕಾವ್ಯದ ಕವಿ ಆರ್ಥರ್ ರಿಂಬಾವ್‌ನ ಕವಿತೆಗಳ ಕಡೆಗೆ ಗಮನ ಸೆಳೆದರು. ಕವಿಯೊಬ್ಬ ಅಕ್ಷರಗಳ ಜೊತೆ ಹೇಗೆ ಆಟವಾಡಬಹುದು. ಕವಿತೆ ಕಟ್ಟಬಹುದು ಎಂಬುದಕ್ಕೆ 'ವೋವೆಲ್ಸ್' ಎಂಬ ಪದ್ಯವನ್ನು ವಿವರಿಸಿದರು. ಈ ವೋವೆಲ್ಸ್ ಒಂದು ದಿನ 'ಅಕ್ಷರಗಳ ಗರ್ಭವನ್ನು' ಭೇದಿಸುವ ಒಂದು ಚಿಂತನೆ ಕವಿತೆಯಲ್ಲಿತ್ತು. ಮೇಷ್ಟ್ರು ಹೊರದೇಶದಿಂದ ತರಿಸಿದ ಅಪರೂಪದ ರಿಂಬಾವ್‌ನ ಸಂಪೂರ್ಣ ಕವಿತೆಗಳ ಸಂಕಲನವನ್ನು ಕೊಟ್ಟು ಕೆಲವು ಆಯ್ದ ಕವಿತೆಗಳ ಅನುವಾದ ಮಾಡುವ ಹೋಂವರ್ಕ್ ಕೊಟ್ಟರು. ಕೆಲವು ಕವಿತೆಗಳನ್ನು ತಾವೇ ಅನುವಾದಿಸುವುದಾಗಿಯೂ ಹೇಳಿದ್ದರು. ಈ ಒಪ್ಪಂದ ಕಾರಣಾಂತರಗಳಿಂದ ನೆರವೇರಲೇ ಇಲ್ಲ. ಹಾಗೆಯೇ ಉಳಿದು ಹೋಯಿತು.

ಕಿ.ರಂ. ವೇದಿಕೆ ಮೇಲಿರಲಿ, ಕೆಳಗಿರಲಿ ಎಂದೂ ಸಂಗತವಲ್ಲದ ಸಂಗತಿಗಳನ್ನು ಒಪ್ಪಿದವರೇ ಅಲ್ಲ. ಒಮ್ಮೆ ಪ್ರಸಿದ್ಧ ಪ್ರಕಾಶನದ ಒಂದು ಮಾಲಿಕೆಗಾಗಿ ಸಂಪಾದಕಳಾಗಿ ಕೆಲಸ ನಿರ್ವಹಿಸಿದೆ. ಆ ಮಾಲಿಕೆಯ ಒಂದು ಕವನ ಸಂಕಲನದ ಬಿಡುಗಡೆಯ ಸಂದರ್ಭದಲ್ಲಿ, ಪ್ರಕಾಶಕರ ಪರವಾಗಿ ಬಂದಿದ್ದ ಒಬ್ಬ ಲೇಖಕ, ಪ್ರಕಾಶಕರ ತಪ್ಪು ಒಪ್ಪುಗಳನ್ನು ಸಮರ್ಥಿಸಿಕೊಳ್ಳಲು ವೇದಿಕೆಯಲ್ಲಿ ಪ್ರಯತ್ನಿಸಿದರು. ಇದನ್ನು ನೇರವಾಗಿಯೇ ತಮ್ಮ ಭಾಷಣದಲ್ಲಿ ಖಂಡಿಸಿದ ಮೇಷ್ಟ್ರು ಪ್ರಕಾಶನ ವ್ಯವಹಾರ, ಅವ್ಯವಹಾರ ನಮಗೆ ಮುಖ್ಯವಲ್ಲ. ನಮಗೆ ಮುಖ್ಯವಾದದ್ದು ಕವಿತೆ – ಎಂದು ಖಂಡತುಂಡವಾಗಿ ನುಡಿದರು. ಹೀಗೆ ಅನಿಸಿದ್ದನ್ನು ನೇರವಾಗಿ ಹೇಳುವ.

ಮತ್ತೊಮ್ಮೆ ಪ್ರತಿಕ್ರಿಯಿಸದೆ ನಿರ್ಲಿಪ್ತರಾಗಿಯೂ ಉಳಿಯಬಲ್ಲ ದ್ವಂದ್ವ ಅವರಲ್ಲಿತ್ತು. ಅವ
ಭಾಷಣಗಳು ಆರಂಭದಲ್ಲಿ ತೀರ ಸಾಧಾರಣವೆನ್ನುವಂತೆ ಆರಂಭವಾಗಿ ನಿಧಾನವಾಗಿ ಎಲ್ಲ
ಗಮನ ಕೇಂದ್ರೀಕೃತವಾಗುತ್ತಿದ್ದಂತೆ ಮೇಲಕ್ಕೇರುವ, ನಾನಾ ದಿಕ್ಕುಗಳನ್ನು ಯಥೇಚ್ಛವಾ
ಉಣಬಡಿಸುವಂಥದ್ದು ಆಗಿತ್ತು.

ಮಾತಿನಲ್ಲಿ ಪರಿಣಾಮಕಾರಿಯಾಗಿದ್ದಷ್ಟು, ಮಾಹಿತಿಪೂರ್ಣವಾದಷ್ಟು ಅವ
ಚಿಂತನೆಗಳು ಬರಹದಲ್ಲಿ ಪರಿಣಾಮಕಾರಿಯಾಗುತ್ತಿರಲಿಲ್ಲ. ಕಿ.ರಂ. ಮಾತನಾಡಿ
ಬಹಳ, ಬರೆದದ್ದು ಕಡಿಮೆ. ಅಪಾರವಾದ ಸಂಗೀತಜ್ಞಾನ, ಜಗತ್ತಿನ ಎಲ್ಲಾ ಸಾಹಿತ್ಯವನ
ಅರಗಿಸಿಕೊಂಡ ಪ್ರಬುದ್ಧತೆ, ತಮ್ಮ ವಿಚಾರಲಹರಿಗೆ ತೊಡಕನ್ನು ಒಡ್ಡುವ ಮಾಧ್ಯಮಗ
ಜೊತೆ ಬದುಕಿದ ಕಿ.ರಂ. ಈಗ ಒಂದು ದಂತಕಥೆ. ಒಂದು ಕಾಲದಲ್ಲಿ ತಾವೇ ಮಂಡಿಸಿ
ವಿಚಾರವನ್ನು ಮತ್ತೊಂದು ಕಾಲಧರ್ಮದಲ್ಲಿ ಮುರಿದು ಮತ್ತೆ ಹೊಸಕ್ರಮದಲ್ಲಿ ಕಟ್ಟು
ರೀತಿ ಅವರ ವೈಚಾರಿಕ ದಿಟ್ಟತನ, ಸ್ವಂತಿಕೆಗೆ ಸಾಕ್ಷಿಯಾಗಿತ್ತು. ಯಾವುದೇ ಸ್ಥಾವರ ಸ್ಥಿ
ನಿಲುಕದ ಜಂಗಮವನ್ನು ಇಷ್ಟಪಡುತ್ತಿದ್ದ ಕಿ.ರಂ. ಶೈಲಿಶಾಸ್ತ್ರದ Deviation ಪದವ
ಹೆಚ್ಚು ವಿಶ್ಲೇಷಿಸುತ್ತಿದ್ದರು. ಹೊಸ ಕಾಲದ ಎಲ್ಲಾ ಮಾರ್ಗಾಂತರಗಳಿಗೂ, ಚಲನಶೀಲತೆಗ
ತಮ್ಮನ್ನು ತೆರೆದುಕೊಂಡಿದ್ದರು. ಒಂದು ರೀತಿಯ ಅಪಾರ ಶಿಷ್ಯ ಬಳಗ ಹೊಂದಿದ
ಕನ್ನಡದ 'ಸಾಕ್ರಟಿಸ್' ಕಿ.ರಂ. ಬದುಕಿನುದ್ದಕ್ಕೂ, ಅಂತಿಮ ಗಳಿಗೆಯಲ್ಲೂ ಶಿಷ್ಯರೊಂದಿ
ಕಾಲ ವ್ಯಯಿಸಿದರು– ನಮ್ಮ ಪ್ರೀತಿಯ ಮೇಷ್ಟ್ರು 'ಕಿ.ರಂ.' ತಮಗೆ ಪ್ರಿಯವಾದ ಬೇಂ
'ಜೋಗಿ' ಕಾವ್ಯದ ವಿಶ್ಲೇಷಣೆ ಮಾಡುತ್ತಲೇ ತಮ್ಮ ಅಂತಿಮ ಗಳಿಗೆಯನ್ನು ಕಂಡ ಅದ್ಭು
ಜೀವಿ ಕಿ.ರಂ. ಅವರು ನಮ್ಮ ಜೊತೆಗಿಲ್ಲವೆಂದರೂ ಅಂತರಂಗದ ಭಾವದಲ್ಲಿ ನಮ್ಮೊಳಗೆ
ಇದ್ದಾರೆ ಎಂಬುದು ಮರೆಯಲಾಗದ ಸತ್ಯ.



## ಕ್ರಿಯಾಶೀಲ ವೀಣಾ ಕಣ್ಮರೆ

ಇತ್ತೀಚೆಗಷ್ಟೇ ತೀರಿಹೋದ ಧಾರವಾಡದಲ್ಲಿ ನೆಲೆ ನಿಂತಿದ್ದ ಲೇಖಕಿ, ಉಪನ್ಯಾಸ
**ವೀಣಾ ಕುಲಕರ್ಣಿ** ಮತ್ತೆ ಮತ್ತೆ ನೆನಪಾಗುತ್ತಾರೆ. ವೀಣಾ ಅಷ್ಟು ಸುಲಭವಾಗಿ
ಮರೆತುಹೋಗುವ ಸಾಮಾನ್ಯ ಚೇತನವಲ್ಲ. ಹಾಗೆಂದು ಅದ್ಭುತವೆನ್ನುವ ವ್ಯಕ್ತಿತ್ವ
ಅಲ್ಲ. ಸ್ನೇಹದಿಂದ, ಪ್ರೀತಿಯಿಂದ ಕಾಣಬಲ್ಲವರಿಗಷ್ಟೇ ವೀಣಾರವರ ಸ್ನೇಹಪರತೆ
ಅರ್ಥವಾಗಬಲ್ಲುದು. ಧಾರವಾಡದ ಸಾಹಿತ್ಯಕ ಹಾಗೂ ಸಾಂಸ್ಕೃತಿಕ ಜೀವನ
ಅನಿವಾರ್ಯವಾದ ಒಂದು ಕೊಂಡಿ ಎನ್ನಿಸಿಕೊಂಡಿದ್ದವರು. ಅಲ್ಲಿನ ಲೇಖಕಿಯರ ಸಂ
ವಿದ್ಯಾವರ್ಧಕ ಸಂಘ, ಆಕಾಶವಾಣಿಯ ಹಲವು ಕಾರ್ಯಕ್ರಮಗಳು, ಹಲವು ಸಂ
ಸಂಸ್ಥೆಗಳೊಂದಿಗೆ ಹುಮ್ಮಸ್ಸಿನಿಂದ ತೊಡಗಿಸಿಕೊಂಡಿದ್ದವರು.

ಮಂದಿ ನನ್ನನ್ನು ಕಂಡರೆ ಒಂಥರಾ ಹಿಂಜರಿತಾರ್ರೀ' ಎಂದು ಸಂಕೋಚದಿಂದಲೇ ಹೇಳಿಕೊಂಡಿದ್ದರು. ಪಮೇಲಾ ತನ್ನ ಯೌವನದಿಂದ ಹಣ ಮತ್ತು ಪುರುಷರನ್ನು ದೇಶವಿದೇಶಗಳಲ್ಲಿ ಬೇಟೆಯಾಡಿದ ವಿಕ್ಷಿಪ್ತ ವ್ಯಕ್ತಿತ್ವ. ನಾನೂ ಸಹ ಅಮೃತಮತಿಯ ಬಗ್ಗೆ ಬರೆದರೆ ಅಮೃತಮಯನ್ನಾಗಿಯೇ. ನಿಷೇಧಿತ ವ್ಯಕ್ತಿತ್ವಗಳ ಬಗ್ಗೆ ಬರೆದರೆ ಈ ಅಂಶಗಳನ್ನು ಲೇಖಕಿಯರ ವೈಯಕ್ತಿಕ ಬದುಕಿನಲ್ಲಿ ಹುಡುಕುವ ಜನಸಾಮಾನ್ಯ ಪ್ರವೃತ್ತಿಯ ಬಗ್ಗೆ ಹೇಳಿ ಸಮಾಧಾನ ಪಡಿಸಿದ್ದೆ.

ಧಾರವಾಡದಲ್ಲಿ ನೆಲೆಸಿರುವ ಪ್ರಸಿದ್ಧ ಕತೆಗಾರ್ತಿ ವೀಣಾ ಶಾಂತೇಶ್ವರ. ಮಾಲತಿ ಪಟ್ಟಣಶೆಟ್ಟಿ ಅವರೊಂದಿಗೆ ಆಪ್ತವಾಗಿದ್ದ ವೀಣಾ ಆರಿಸಿಕೊಳ್ಳುತ್ತಿದ್ದ ಬಹುತೇಕ ವಿಷಯಗಳು ಸ್ತ್ರೀ ಸಂಬಂಧಿತವಾಗಿಯೇ ಇರುತ್ತಿದ್ದವು. ತೋರಿಕೆಯ ಅಹಂನ್ನು ದೂರವೇ ಇಟ್ಟಿದ್ದ ಬರಹವನ್ನು ಸಾಕಷ್ಟು ಗಂಭೀರವಾಗಿಯೇ ತೆಗೆದುಕೊಂಡಿದ್ದರು. ಚಿಕ್ಕ ವಯಸ್ಸಿನಲ್ಲಿಯೇ ಸಾಕಷ್ಟು. ಇನ್ನಷ್ಟು ಸಾಧನೆಯನ್ನು ಮಾಡುವ ಶ್ರಮ ಹಾಗೂ ಬದ್ಧತೆ ಎರಡನ್ನೂ ಉಳ್ಳ ವೀಣಾ ಇನ್ನಷ್ಟು ದಿನ ಬದುಕಬಹುದಿತ್ತು. ವೀಣಾ ಮಾನಸಿಕವಾಗಿ ತೊಳಲಾಟದಲ್ಲಿದ್ದರು. ಕೆಲಸ ಖಾಯಂಗೆ ಕೋರ್ಟ್ ಮೆಟ್ಟಿಲು ಹತ್ತಿದ್ದರು. ಸಾಯುವ 3–4 ತಿಂಗಳ ಹಿಂದೆಯಷ್ಟೇ ನೌಕರಿ ಖಾಯಂ ಆಗುವ ನ್ಯಾಯ ಸಿಕ್ಕಿತ್ತು. ಈ ಸಂತೋಷದಲ್ಲಿದ್ದಾಗಲೇ ಆರೋಗ್ಯ ಕೈ ಕೊಟ್ಟಿತ್ತು. ದೇಹದಲ್ಲಿಯೂ ಮೇಲ್ನೋಟಕ್ಕೆ ವ್ಯತ್ಯಾಸ ಎದ್ದು ಕಾಣಿಸಿತು. ಚರ್ಮ ಹಾವಿನಂತೆ ಪೊರೆ ಬಿಟ್ಟಿತ್ತು. ಕೆಮ್ಮು ನಿಲ್ಲುವ ಸೂಚನೆ ಕಾಣಲಿಲ್ಲ. ಹೆತ್ತು ಸಾಕಿದವರೇ ಸ್ನಾನ ಮಾಡಿಸುವ ಸ್ಥಿತಿ ಬಂತು. ಒಂದು ತಿಂಗಳು ನೋವು ತಿನ್ನುತ್ತ ಹಾಸಿಗೆ ಹಿಡಿದಿದ್ದರು. ಆದರೆ ಈ ಮರಣವೆಂಬ ಮೃದಂಗ ಯಾವಾಗ ಯಾರನ್ನು ಕಂಡು ಬಡಿಯಲಾರಂಭಿಸುತ್ತದೋ. ಅದು ಬಡಿದಾಗಲೇ ಗೊತ್ತು. ನಮ್ಮ ಇರುವು ಕೂಡಾ ಇಲ್ಲಿರುವುದಿಲ್ಲ. ವೀಣಾ ನಮ್ಮನ್ನಗಲಿದಾಗ ಆಕೆಗೆ ಕೇವಲ ನಲವತ್ತ ನಾಲ್ಕು ವರ್ಷದ ಪ್ರಾಯ.

ಬಳ್ಳಾರಿಯಿಂದ ಲೋಹಿಯಾ ಪ್ರಕಾಶನದ ಚೆನ್ನಬಸವಣ್ಣ ದೂರವಾಣಿಯ ಮೂಲಕ ವೀಣಾ ಮರಣವನ್ನು ದುಃಖದಿಂದಲೇ ತಿಳಿಸಿದಾಗ ನನಗೆ ನಂಬಲಾಗಲಿಲ್ಲ. ಚೆನ್ನಬಸವಣ್ಣ ಬರಿಯ ಪ್ರಕಾಶಕರು ಮಾತ್ರವಲ್ಲ. ತಮ್ಮ ಸಂಪರ್ಕಕ್ಕೆ ಬಂದ ಲೇಖಕರ ಜೊತೆಗಿನ ಸಂಬಂಧವನ್ನು ಪ್ರೀತಿಯಿಂದಲೇ ನಿರ್ವಹಿಸುತ್ತಾ ಬಂದವರು. ಸಹಜವಾಗಿಯೇ ಅವರಿಗೆ. ನನಗೆ ಹಾಗೂ ಅವರೊಂದಿಗಿನ ನಿರಂತರ ಸಂಪರ್ಕವಿಟ್ಟುಕೊಂಡಿದ್ದವರಿಗೆ ಈ ಸಾವು ನಂಬುವಂಥದ್ದೇ ಅಲ್ಲ. ಆದರೆ ಮರೆಯುವಂತಹದ್ದೂ ಅಲ್ಲ. ತಮ್ಮ ಬದುಕಿನ ಅಲ್ಪಾವಧಿಯಲ್ಲೇ ಅವರು ಬರೆದ ಇತರ ಪುಸ್ತಕಗಳೆಂದರೆ 'ಬೇಂದ್ರೆ : ಕಾಳಿದಾಸ ಕಾವ್ಯ ಕಾರಣ'. 'ಉರಿವ ತೇರ ಪಯಣ'. 'ಕಾಲಕೋಶದ ಕಣ್ಣು' ಹಾಗೂ ಹಲವು ಅನುವಾದಿತ ಕೃತಿಗಳು. ಮೃಚ್ಛಕಟಿಕದಲ್ಲಿ ಬರುವ ನ್ಯಾಯದ ಪರಿಕಲ್ಪನೆಗೂ ಇಂದಿನ ಕಾನೂನು ಚೌಕಟ್ಟಿನಲ್ಲಿ ಬರುವ ನ್ಯಾಯ ವ್ಯವಸ್ಥೆಗೂ ಇರುವ ಸಾಮ್ಯ. ಭಿನ್ನತೆಗಳನ್ನು ತಮ್ಮ ಸಂಶೋಧನಾ ಅಧ್ಯಯನಕ್ಕೆ ವಸ್ತುವಾಗಿಸಿಕೊಂಡಿದ್ದರು. ಧಾರವಾಡದ ಪ್ರಸಿದ್ಧ ಲೇಖಕರಾದ 'ಎಸ್ಕೆ'ಯವರ ಮೊಮ್ಮಗಳಾದ ವೀಣಾ ಸಂಸ್ಕೃತ ಭಾಷೆಯ ಉಪನ್ಯಾಸಕರಾಗಿದ್ದರೂ. ತೊಡಗಿಸಿಕೊಂಡಿದ್ದು ಆಧುನಿಕ ಪ್ರಪಂಚ ಸಂಬಂಧಿತ ವಿಷಯಗಳನ್ನು. ಸ್ವಲ್ಪ ಆತುರದಿಂದಲೇ ನಿರ್ಗಮಿಸಿದ ವೀಣಾರವರ ನೆನಪು ಪರಿಚಿತರ ನೆನಪಿನಿಂದ ನಿರ್ಗಮಿಸುವುದು ಅಷ್ಟು ಸುಲಭವಲ್ಲವೆಂದೇ ಹೇಳಬಹುದು. ವೀಣಾ ಅವರೀಗ ನಮ್ಮ ಕಣ್ಣೆದುರಿನ ಚಿತ್ರಪಟ.




ಆತ್ಮಕತೆಯ ತುಣುಕು

# ಮಧ್ಯರಾತ್ರಿಯ ಬೆಂಗಳೂರು ಹಾಗೂ ಕೈಲಾಸಂ ಮಗಳೂ...

–ಗಿರೀಶ ಕಾರ್ನಾಡ

ಬೆಂಗಳೂರಿನ ನನ್ನ ಮೊದಲನೆಯ ಪ್ರಯಾಣವೇ ಅವಿಸ್ಮರಣೀಯ...ನಾನು ಮದ್ರಾಸಿಗೆ ಬಂದು Oxford University Press ಸೇರಿದ ಕೆಲ ತಿಂಗಳಲ್ಲೇ ಬೆಂಗಳೂರಿನಲ್ಲಿ ರಾಮಾನುಜನ್‌ರ ತಮ್ಮನ ಲಗ್ನವಿದ್ದು, ನಾನು ಬರಲೇ ಬೇಕು ಎಂದು ಆಗ್ರಹದ ಆಮಂತ್ರಣವನ್ನಿತ್ತರು. ನನಗೆ ಬೆಂಗಳೂರು ಗೊತ್ತಿರಲಿಲ್ಲ. ಸರಿ ಇದೇ ಅವಕಾಶ ಎಂದು ನನ್ನ ಹೆರಾಲ್ಡ್ ಕಾರಿನಲ್ಲಿ ಸ್ಟೂಅರ್ಟ್ ಮೇಲು ಇಶ್‌ನ ಡ್ರೈವರನಾಗಿದ್ದ ಜಯರಾಮ ಎಂಬ ಯುವಕನೊಡನೆ ನಾನು ಬೆಂಗಳೂರಿಗೆ ಹೋದೆ. ಸಂಜೆ ಆಫೀಸು ಮುಗಿಸಿ ಹೊರಟ ನಾವು ಐದೂವರೆ ತಾಸಿನೊಳಗೆ ಬೆಂಗಳೂರು ತಲುಪಬೇಕಾಗಿತ್ತು. ಆದರೆ ನಾವು ಕಾರಿನ ಟಾಯರುಗಳ ಹರಕು ಸ್ಥಿತಿಯನ್ನು ಗಮನಿಸಿರಲಿಲ್ಲ. ಒಂದರ ಮೇಲೊಂದು ಪಂಕ್ಚರ್ ಆಗಿ ನಾವಿಬ್ಬರೂ ಮಲ್ಲೇಶ್ವರಂ ತಲುಪುವಷ್ಟರಲ್ಲಿ ಮಧ್ಯರಾತ್ರಿ ಸಂದು ಮುಂಜಾವಿನ ಒಂದು ಗಂಟೆಯಾಗಿರಬೇಕು.

ನಮಗಿಬ್ಬರಿಗೂ ಬೆಂಗಳೂರು ಗೊತ್ತಿರಲಿಲ್ಲ. ಮಲ್ಲೇಶ್ವರಂ ನಿರ್ಜನವಾಗಿದ್ದು ಎಲ್ಲಿಯೂ ದೀಪ ಕೂಡ ಉರಿಯುತ್ತಿರಲಿಲ್ಲ. ರಸ್ತೆಗಳಿಗೆ ಹೆಸರಿನ ಸೂಚಿಕೆಗಳಿರುವದಂತೂ ದೂರವೇ ಉಳಿಯಿತು. ನಮಗೊಂದು ಹೊಟೆಲ್ ಕೂಡ ಕಾಣುವಲ್ಲದು. ಕೊನೆಗೆ ಮದುವೆಯ ಮಂಟಪದ ವಿಳಾಸವನ್ನರಸುತ್ತ ಮಲ್ಲೇಶ್ವರದ ಏರಿಳಿತಗಳಲ್ಲೆಲ್ಲ

ಸುತ್ತಾಡಿ. ದೂರದಲ್ಲೆಲ್ಲೋ ಬೆಳಕು ಕಾಣಿಸಿತು. ಗಳಗನಾಥರ ಕಾದಂಬರಿಗಳಲ್ಲಿಯ ಅಶ್ವಾರೂಢರಂತೆ ನಾವು ಅಲ್ಲಿ ಹೋಗಿ ಬಾಗಿಲು ತಟ್ಟಿದೆವು. ಒಬ್ಬ ವಯಸ್ಕ ವ್ಯಕ್ತಿ. ನಾವು ವಿಳಾಸ ಹೇಳಿದಾಗ, 'ಅಯ್ಯೋ, ಈಗ ಇಷ್ಟು ರಾತ್ರಿ ಎಲ್ಲಿ ವಿಳಾಸ ಹುಡುಕುತ್ತೀರಿ? ಎರಡು ಚಾಪೆ ಹಾಕಿ ಕೊಡತೇವೆ. ಇಲ್ಲೇ ನಿದ್ದೆ ಮಾಡಿ ಬಿಡಿ. ನಾಳೆ ಮುಂಜಾನೆ ಕಾಫಿ ಕುಡಿದು, ನಿಮ್ಮ ಕಲ್ಯಾಣಮಂಟಪ ಹುಡುಕಿದರಾಯ್ತು' ಎಂದರು. ನಮಗಷ್ಟೇ ಬೇಕಾಗಿತ್ತು. ಒಪ್ಪಿಕೊಂಡು, ಅಲ್ಲೇ ವಿಶ್ರಮಿಸಿ ಮಾರನೆಯ ದಿನ ಮುಂಜಾನೆ ಮದುವೆಯ ಮಂಟಪ ತಲುಪಿದೆವು.

ಬೆಂಗಳೂರು ಮಹಾನಗರವಾಗುವ ಮೊದಲು ಅದರ ಸಂಸ್ಕೃತಿ ಏನಿತ್ತು ಎಂಬುದಕ್ಕೆ ನಿದರ್ಶನ ಈ ಅನುಭವ. ಕೆಂಪೇಗೌಡನಿಗೆ ಸಿಕ್ಕ ಬೆಂದಕಾಳಿನಿಂದ ಹೆಚ್ಚು ಬದಲಾಗಿದ್ದಿಲ್ಲ ನನಗೆ ದೊರೆತ ಈ ಬೆಂಗಳೂರಿನ ಪ್ರಪ್ರಥಮ ದರ್ಶನ.

ಮಾರನೆಯ ದಿವಸ ಮದುವೆಯ ಮಂಟಪದಲ್ಲಿ ವೈ.ಎನ್. ಕೃಷ್ಣಮೂರ್ತಿ ಅವರ ಪರಿಚಯವಾಯಿತು. ಧಾರವಾಡದಲ್ಲಿ ಜಿ.ಬಿ. ಕೀರ್ತಿ ಇದ್ದಂತೆ ಬೆಂಗಳೂರಲ್ಲಿ 'ವೈಎನ್ಕೆ' ನನಗೆ ಮಾರ್ಗದರ್ಶಿಯಾದರು. ಆದರೂ ಆ ಎರಡೂ ಅನುಭವಗಳಲ್ಲಿ ಮೂಲಭೂತ ಭೇದವಿತ್ತು.

ಧಾರವಾಡದಲ್ಲಿ ಅಟ್ಟ, ಕೆಲವೊಮ್ಮೆ ಜಿ.ಬಿ.ಯ ಮನೆ, ಈ ಕೇಂದ್ರಗಳ ಸುತ್ತ ನನ್ನ ಅಸ್ತಿತ್ವ ಹರಿದಾಡುತ್ತಿತ್ತು. ಬೆಂಗಳೂರಲ್ಲಿ ವೈಎನ್ಕೆಯ ಮನೆಯಲ್ಲೇ ನಾನು ತಂಗುತ್ತಿದ್ದರೂ ಅವರು ಆಫೀಸಿನಲ್ಲಿ ದುಡಿಯುವ ಅವಧಿಯೊಂದನ್ನು ಬಿಟ್ಟರೆ ಅವರು ಅವಿರತ ಚಲನಶೀಲರಾಗಿದ್ದ ವ್ಯಕ್ತಿ. ಬೆಳಗ್ಗೆ ಅವರ ಮನೆಯ ಪಕ್ಕದಲ್ಲೇ ಗಾಂಧಿಬಜಾರಿನಲ್ಲಿದ್ದ 'ವಿದ್ಯಾರ್ಥಿ ಭವನ'ದಲ್ಲಿ ತಿಂಡಿ ತಿಂದು ಹೊರಟರೆ ಬರುತ್ತಿದ್ದುದೇ ತಡವಾಗಿ. ಅವರು 'ಪ್ರಜಾವಾಣಿ'ಯ ಸಂಪಾದಕ ಮಂಡಳಿಯಲ್ಲಿದ್ದುದರಿಂದ, ಆಫೀಸಿನ ಸಮೀಪದಲ್ಲೇ (ಈಗ ಕಾವೇರಿ ಎಂಪೋರಿಯಂ ಆಗಿರುವ ಕಟ್ಟಡದ ಮಹಡಿಯ ಮೇಲಿನ) ಯತಿ ಎಂಬ ವ್ಯಕ್ತಿ ನಿರ್ವಹಿಸುವ Bar, ಬ್ರಿಗೇಡ್ ರೋಡ್‌ದಲ್ಲಿರುವ ಚೀನೀ ರೆಸ್ಟೋರಂಟ್, ಕಬ್ಬನ್ ಪಾರ್ಕದಲ್ಲಿದ್ದ ಪ್ರೆಸ್ ಕ್ಲಬ್, ಸೆಂಚುರಿ ಕ್ಲಬ್ಬಿನವರೆಗಿನ ಆ ಕಾಲದ ಬೆಂಗಳೂರಿನ ಬೌದ್ಧಿಕ ಕ್ಷೇತ್ರದ ಮೂಲೆಮೂಲೆಗಳನ್ನೆಲ್ಲ ಸುತ್ತಾಡಿ, ಹೊಸ ಕವಿಗಳು, ಲೇಖಕರು, ಪ್ರಕಾಶಕರು, ಪತ್ರಕರ್ತರು ಎಲ್ಲರ ಪರಿಚಯ ಮಾಡಿಕೊಳ್ಳುವುದು ಒಂದು ದಿನದ ಸಾಮಾನ್ಯ ಅನುಭವವಾಗಿತ್ತು. ವೈಎನ್ಕೆ ಒಂದು ಕೃತಿಯನ್ನು ಮೆಚ್ಚಿದರೆ ಆ ಮೆಚ್ಚುಗೆ ಮಾತುಗಳಲ್ಲಿ ಮಾತ್ರ ಕೊನೆಗೊಳ್ಳದೆ ಅನಪೇಕ್ಷಿತ ಸ್ವರೂಪಗಳಲ್ಲಿ ಮುಂದುವರೆಯುತ್ತಿತ್ತು.

'ಯಯಾತಿ' ಓದಿ ಮೆಚ್ಚಿಕೊಂಡ ವೈಎನ್ಕೆ ಮದ್ರಾಸಿನಲ್ಲಿ ನೆಲೆಸಿದ್ದ ಕಮಲಾ (ಪ್ಯಾಟಿ) ಸುಬ್ರಹ್ಮಣ್ಯಂ ಅವರಿಗೆ ಒಂದು ಪ್ರತಿ ಕಳಿಸಿಕೊಡಲು ಹೇಳಿದರು. ಪ್ಯಾಟಿ ಟಿ.ಪಿ.ಕೈಲಾಸಂ ಅವರ ಮಗಳು. 'ಪುರುವಿನಂಥ ಪಾತ್ರ ನಿರ್ಮಿಸಿದ್ದೀ ಅಂದಾಗ ನಿನಗೂ ಒಬ್ಬ ಸುಪ್ರಸಿದ್ಧ ತಂದೆ ಇರಬೇಕಲ್ಲವೇನು?' ಎಂದು ಪ್ರತಿಕ್ರಿಯಿಸಿದರು. ಪ್ಯಾಟಿ ಅವರ ಗಂಡ ಭಾರತದಲ್ಲೇ ಹೆಸರಾಂತ E.N.T. ಸರ್ಜನ್. ಆದರೆ ಅವರ ಮನೆ ಮಾತ್ರ ಪ್ಯಾಟಿ ಅವರ ಸುತ್ತ ಸೌರಮಂಡಲದಂತೆ ತಿರುಗುತ್ತಿರುತ್ತಿತ್ತು. ಒಂದು ವಿಶಾಲವಾದ bedroomನಲ್ಲಿ ಸ್ಥೂಲ ಕಾಯದ ಪ್ಯಾಟಿ ಒಂದು ಮಂಚದ ಮೇಲೆ ಗೋಡೆಗೊರಗಿ ಕುಳಿತಿರುತ್ತಿದ್ದು. ಅವರ

# ಸ್ವರ್ಗದ ಕವಿತೆ

-ಕೆ.ಎನ್. ಲಾವಣ್ಯಪ್ರಭಾ

ಹನಿಮೂನಿಗೆಂದು ಮಗಳು ಕನವರಿಸುವ
ಸ್ವರ್ಗವೆಂಬೋ ಕಾಶ್ಮೀರದ ನರಕದಲ್ಲಿ
ಉಸಿರುಗಟ್ಟಿ ವಿಲಿವಿಲಿಗುಟ್ಟುವ ಅದೆಷ್ಟೋ
ಅಪ್ಪ, ಅಮ್ಮ, ಮಕ್ಕಳ ಕನಸೇ ಇಲ್ಲದ
ಕಣ್ಣುಗಳಲ್ಲಿ ಜೀಕುತ್ತಿವೆ ಭೀತ ಹರಿಣಗಳು.



ಶುಭ್ರ ಸ್ಫಟಿಕದಂತೆ ಹೊಳೆವ ನದೀತೀರ-
-ಗಳುದ್ದಕ್ಕೂ ಕೆಂಪುತಾವರೆ ಅರಳಿ
ಚೆಲ್ಲಾಡುತ್ತಿವೆ ನೆತ್ತರಿನ ಓಕುಳಿ.

ತೇಲಾಡುವ ಬೋಟುಗಳಲ್ಲಿ ಸೈತಾನನ
ನೆರಳು ನೀರತುಂಬಾ ಆವರಿಸಿಕೊಂಡು
ಕತ್ತುಹಿಸುಕಿ ಹೊರಟಿವೆ ಸಾವಿನ ಮೆರವಣಿಗೆ.

ಚಂದದ ತೋಟದ ಹೂಗಿಡದ ಮೇಲೆಲ್ಲಾ
ಕೊಲೆಗಾರ ಕೈ ಬೆರಳಾಡಿಸಿ ಚಿವುಟಿ ಚಿಗುರ
ಹಸಿರುದ್ಯಾನದೊಳಗೆಲ್ಲಾ ರಕ್ತಕ್ರಾಂತಿ.

ಗನ್‌ಗಳ ಗಡಚಿಕ್ಕುವ ಗುಡುಗಿನಲಿ
ಸೆರಗ ಕಳೆದುಕೊಂಡು, ನೆಲೆ ಸೂರೆಗೊಂಡು
ಹಿಡಿಯಾಗಿ ಕಾದು ಕುಳಿತಿದ್ದಾವೆ
ತಮ್ಮ ತಾವಲ್ಲೇ ಕುದಿದು ಬೇಯುವ ಹೃದಯಗಳು.

"ನೆನಪಿರಲಿ ಮಗಳೇ, ಹನಿಮೂನಿಗೆಂದು
ನೀನು ಕನವರಿಸುವ ಕಾಶ್ಮೀರ ಬರೀ ಕನಸು"
ನಾನೆಂದೆ
ತಟಕ್ಕನೆ ಇವಳು ತಲೆಯೆತ್ತಿ
"ಕಾಶ್ಮೀರದ ಮೂಲೆಯಲ್ಲೆಲ್ಲೋ ಕವಿತೆ ಹುಟ್ಟಿ,
ಬೆಳೆದು ಕಾಶ್ಮೀರ ಮತ್ತೆ ಸ್ವರ್ಗವಾಗುತ್ತದೆ
ನೋಡುತ್ತಿರು" ಎನ್ನುತ್ತಿದ್ದಾಳೆ ದೃಢವಾಗಿ.



# ಗೌರಿಜಡಿ

– ಗುಂಡೀಗೆರೆ ವಿಶ್ವನಾಥ

ಮುಂಗಾರು ಮಾಗಿ
ಆಗಸದ ಗೊನೆ ತೂಗಿ
ಆಕಾಶಕ್ಕೆ ತೂತು ಬಿದ್ದಿತೇನೋ
ಬಿಡದೆ ಸುರಿಯುತಿದೆ ಜಿಟಿ ಜಿಟಿ ಮಳೆ
ನೆನೆದ ಗೋಣಿ ತೊಪ್ಪೆಯೊಳಗೆ
ಮೈ ಬಿಸಿಯಾಗಿಸಿಕೊಂಡು ದನಕರು
ಹೊಡೆಯುತ್ತಿದ್ದಾರೆ ಹುಡುಗರು ಮನೆಗೆ
ಅಮ್ಮ ಕರಿದ ಉಚ್ಚೆಳ್ಳು, ಹುರುಳಿ
ಹಕ್ಕಲು ಕಾಳ ಉರಿಚಮ್ಮಾಳಿಗೆ ನಾಲಿಗೆಗೆ
ಕವಿಗೆ ಝೇಂಕಾರಗೊಂಡು
ಕವಿತೆಯಾಗುತಿದೆ ಒಳಗೆ.





ಜೀವದುಸಿರಿನ ಕಾಡ ಎಲೆಗಳ ಮೇಲೆ
ಹನಿಗಳ ಲೀಲೆ ಗಿಡ ಮರ ಬಳ್ಳಿ ತೊಪ್ಪೆಯಾಗಿ
ತೊಟ್ಟಿಕ್ಕುವ ನೈದಿಲೆ
ಮುತ್ತು ಉದುರಿಸುತಿದೆ ಭುವಿಗೆ
ಗುಡ್ಡದಾಚೆಯ ಗಿಡದ ಕೊರಳೊಳಗಿಂದ
ಗೀಜಗನ ಕೂಗು, ಅಪರೂಪದ ಕೋಗಿಲೆಗಾನ
ನುಲಿವ ಜೀರುಂಡೆ ಗುಬ್ಬಿ ಗೊರವಂಕ
ಮರಮರದ ಮೈತುಂಬ ಪಾಚಿ ಕೆನೆ ಹಸಿರು



ಸ್ಕೂಟರ್, ಕಾರು, ಮೋಟಾರಿನ
ಕೆಂಪು ಬಸ್ಸಿನ ಒಳಗೆ ಗಿಲಾಸುಹಾಕಿ
ಒದ್ದೆ ಬಟ್ಟೆಯೊಳಗೆ ಕಾವು ಕೂತಿದೆ ಜೀವ
ಟಾಕೀಸಿನೊಳಗೆ ಗಭೆ ತುಂಬಿ ಧೂಪ-
ಧೂಮಲೀಲೆ
ಮಧುಮತ್ತರ ಕಸುರುಗಮಲು
ಕಣ್ಣು ಎವೆಯಿಕ್ಕದೆ ನೋಡಿದ್ದಾನೆ ಸಿನೆಮಾ.
ಹಬೆಯಾಡುವ ಕಾಫಿ ಹೀರುತ್ತಾ ಟಾಕೀಸಿನ
ಮುದುಕ
ರಾಜಕುಮಾರನ ಫೈಟಿಂಗು





ಅಕಾಲದ ಮಳೆ ಅನಿಷ್ಟವಾಗಿ
ಸಕಾಲದ ಮೋಡ ಕನಿಷ್ಟವಾಗಿ
ಗುಡುಗು ಸಿಡಿಲುಗಳಾರ್ಭಟವಿಲ್ಲದೆ
ಕಾಲವೆಂಬ ಕಾಲದಲಿ ಸುರಿಯುತಿರುವ ಮಳೆ
ಚುಮುಚುಮು ಚಳಿಯಲಿ. ಭೂಮ್ಯಾಕಾಶಕ್ಕೂ
ನಿಂತು
ಆಗಸದ ಜರಡಿಯೊಳಗೆ ಬೀಳುತ್ತಿರುವ ಮಳೆ
ಜಿಟಿ ಜಿಟಿ ಜಡಿ ಈ ಗೌರಿಜಡಿ.

# ಹರಿವ ಬಟ್ಟೆಯ ತೊಟ್ಟು

–ಸ್ವಾಮಿನಾಥ



ಮುಗ್ಧ ಭ್ರೂಣ ಎಳೆಯಾಗಿ
ತಿರುಚಿ ತಿರುಚಿ
ಕಟ್ಟಿ ಕೆನೆಪದರ
ತಾನುಗಳಲ್ಲಿ ಹರಡಿತ್ತು
ಜೀವಸತ್ವ.

ಕತ್ತರಿಸಿ ಕಟ್ಟಿ ಮೈಕೈಗೆ
ಒಂದು ಆಕಾರ
ತೊಟ್ಟಿದ್ದೇ ಬದುಕು ವಿಹಾರ...

ತೊಟ್ಟಿದ್ದೋ ಆಗಾಗ ಕೊಳಕು
ಮಡಿ ಮಾಡಿ ಮತ್ತೆ ಗರಿ ಮಾಡಿ
ಹಿರಿಮೆ ಗರಿಮೇಳ ಹುರಿ ಮಾಡಿ
ಬೆಟ್ಟಗಳನ್ನೇರಿ
ಕಣಿವೆಗಳಲ್ಲಿಳಿದು
ಸುತ್ತಿ ಸುತ್ತಾಡುವ ಹೊತ್ತು

ಏನೀ ಗಂಧ ಸುಗಂಧ
ಅಪ್ಪಿ ಮುದ್ದಾಡುವ ತವಕ
ಝರಿಯ ಬದಿ ವನವಾಗಿ
ಜೀ–ವನವಾಗಿ ಹೊಮ್ಮುವ ವೇಳೆಗೆ
ಬಟ್ಟೆ ಹರಿದು ಪದರ ಪದರ
ಮತ್ತೆ ಹೊಲಿದರೂ ಹರಿದು
ಪರಪರ
ಸರಸರ ಮಣ್ಣ ಸೇರಿತ್ತು.

ಸ್ವಾಮಿನಾಥ

ಏನೀ ಗಂಧ ಸುಗಂಧ
ಅಪ್ಪಿ ಮುದ್ದಾಡುವ ತವಕ
ಝರಿಯ ಬದಿ ವನವಾಗಿ
ಜೀ–ವನವಾಗಿ ಹೊಮ್ಮುವ ವೇಳೆಗೆ
ಬಟ್ಟೆ ಹರಿದು ಪದರ ಪದರ
ಮತ್ತೆ ಹೊಲಿದರೂ ಹರಿದು
ಪರಪರ
ಸರಸರ ಮಣ್ಣ ಸೇರಿತ್ತು.

– ಸ್ವಾಮಿನಾಥ

* ೨೦೧೧, ಅಕ್ಟೋಬರ್ ೨೯ರಂದು ಕವಿ ಸ್ವಾಮಿನಾಥ್ ನಮ್ಮನ್ನಗಲಿದರು. ಅವರಿಗೆ 'ಅನ್ವೇಷಣೆ'ಯ ಶ್ರದ್ಧಾಂಜಲಿ.

–ಸಂ.



## ಮಹಿಳಾ ದನಿ

# ಭೈರಪ್ಪನವರ 'ಕವಲು' ಮಹಿಳಾ ದ್ವೇಷಿಯ ತೆವಲು!

– ಸಾವಿತ್ರಿ ಮುಜುಮದಾರ

ಮಹಿಳೆಯನ್ನು ಸದಾ ಸಂಶಯದಿಂದ ನೋಡುತ್ತದೆ ಸಾಂಪ್ರದಾಯಿಕ ಚೌಕಟ್ಟು. ಅದೇ ಚೌಕಟ್ಟಿನಲ್ಲಿ ಆಕೆಯನ್ನು ಬಂಧಿಸುವ ಯತ್ನ ನಡೆಯುತ್ತಲೇ ಇದೆ. ಮಹಿಳಾ ವಿಮೋಚನೆ ಅಂದ್ರೆ ಸ್ವೇಚ್ಛಾಚಾರ, ಆಧುನಿಕತೆ ಅಂದ್ರೆ ವ್ಯಭಿಚಾರ, ವಿದ್ಯೆ ಕಲಿಯಲು ಹೊರಟವಳು, ದುಡಿಯಲು ಹೋದವಳು ಜಾರಿಣಿ ಎಂಬಂತೆ ಭಾವಿಸುವ ಮನಸ್ಸುಗಳಿಗೇನೂ ಕೊರತೆ ಇಲ್ಲ.




ಇದೆಲ್ಲ ಏಕೆ ಹೇಳಬೇಕಾಯಿತೆಂದರೆ, ಮೇಲೆ ಹೇಳಿದ ವಿಕೃತ ಮನಸ್ಸುಗಳಂತಹ ವ್ಯಕ್ತಿ ಬರೆಯಬಹುದಾದಂತಹದ್ದನ್ನೇ ಎಸ್.ಎಲ್. ಭೈರಪ್ಪನವರು ಕವಲು ಕಾದಂಬರಿ ಮೂಲಕ ಆ ಸಾಲಿನಲ್ಲಿ ಸೇರಲು ಕಷ್ಟಪಡುತ್ತಿದ್ದಾರೆ.

'ಆವರಣ' ಕಾದಂಬರಿ ಕುರಿತು ನಡೆದ ಚರ್ಚೆ, ಮಾರಾಟಗಳಿಂದ ತಾವೊಬ್ಬ ಮೆಗಾಸ್ಟಾರ್ ಎಂದು ಭ್ರಮಿಸಿದರೇನೋ ಭೈರಪ್ಪ? ಅದೇ ಭರದಲ್ಲಿ ಇವತ್ತಿನ ಓದಿದ, ದುಡಿಯುವ ಮಹಿಳೆ ಅಂದ್ರೆ ಆಕೆ ಕೆಟ್ಟವಳು, ನಡತೆಗೆಟ್ಟವಳು, ಗಂಡಸರನ್ನು ಹಾಳು ಮಾಡುವವಳು ಎಂದು ತಾವೇ ತೀರ್ಪು ನೀಡುವ ಬೃಹತ್ ಕಾದಂಬರಿ ಕವಲು ಬರೆದು ಬಿಸಾಡಿದ್ದಾರೆ.

ಸಾಹಿತಿ ಸಮಾಜಮುಖಿಯಾಗಿರಬೇಕು, ಪ್ರಪಂಚದ ಅರಿವು ಇಟ್ಟುಕೊಂಡೇ ತನ್ನ ಬರಹದಲ್ಲಿ ತೊಡಗಬೇಕು ಅಂದಾಗ ಮಾತ್ರ ಅಂತಹ ಸಾಹಿತಿ ಜನರ ಮನಸ್ಸಿನಲ್ಲಿ ಶಾಶ್ವತ ಉಳಿಯುವುದಿರಲಿ, ನಾಲ್ಕು ದಿನ ಜನರ ನಾಲಿಗೆ ಮೇಲೆ ಉಳಿಯುತ್ತಾನೆ. ಇಲ್ಲದೇ ಹೋದರೆ ಉರಿಸುವ ಮುನ್ನವೇ ತಂತಿ ಉರಿದ ಬಲ್ಬಿನಂತಾಗುತ್ತಾನೆ.

ಭೈರಪ್ಪ ಕನ್ನಡದಲ್ಲಿ ಯಾವುದೇ ವಿಷಯದ ಮೇಲೆ ಕಾದಂಬರಿ ಬರೆದರೂ, ತುಂಬ ಆಳಕ್ಕೆ ಇಳಿದು ಒಂದರ್ಥದಲ್ಲಿ ಸಂಶೋಧನೆ ರೀತಿಯಲ್ಲಿ ಮೆಚ್ಚುವಂತೆ ಬರೆಯುವವರಲ್ಲಿ ಒಬ್ಬರು. ಆದರೆ 'ಕವಲು' ಓದಿದಾಗ ಅವರು ಮನೆಯ ಯಾವುದೋ ಮೂಲೆಯಲ್ಲಿ

ಕುರಿತು, ಬೆಡ್‌ರೂಂನತ್ತ ನೋಡುತ್ತ ತಮಗೆ ತಾವೇ ಕಲ್ಪಿಸಿಕೊಂಡೋ, ಭ್ರಮಿಸಿಕೊಂಡೋ, ತಮ್ಮೊಳಗಿನ ಮಹಿಳಾ ದ್ವೇಷದ ತೆವಲನ್ನು ಕವಲು ಹೆಸರಲ್ಲಿ ಕಕ್ಕಿದ್ದಾರೆ. ಎಲ್ಲಕ್ಕಿಂತ ಮಿಗಿಲಾಗಿ 5–6 ವರ್ಷಗಳಿಂದ ಏಕ್ತಾಕಪೂರಳ ಮನೆಮುರುಕ ಧಾರಾವಾಹಿಗಳನ್ನು ನೋಡಿಬಿಟ್ಟಿದ್ದಾರೇನೋ ಭೈರಪ್ಪ ಅಂತ ಅನುಮಾನ ಬರುವಂತಿದೆ ಕವಲು.

ಮಂಗಳೆ ಮತ್ತು ಇಳಾ ಎಂಬ ಮಹಿಳೆಯರು ಜೇಡವಾದವರನ್ನು ಕಟ್ಟಿಕೊಂಡು, ಬೇರೆಯವರ ಜೊತೆ ಕದ್ದುಮುಚ್ಚಿ ಮಲಗುವುದೇ ಕಾದಂಬರಿಯ ಕಥಾವಸ್ತುವಾದರೆ ಅದಕ್ಕ 300 ಪುಟ ಹಾಳು ಮಾಡುವಷ್ಟು ಜರೂರತ್ತೇನಿತ್ತು ಭೈರಪ್ಪನವರಿಗೆ?

ಇಂಟರ್‌ನೆಟ್ ತೆರೆದರೆ ಸಾಕು, ಅನೈತಿಕ ಸಂಬಂಧಗಳ ಕಾಲ್ಪನಿಕ ಕಥೆಗಳು ಸಿಗುತ್ತವಂತೆ, ಅವನ್ನೇ ಅನುವಾದಿಸಿ ಬರೆದಿದ್ರೆ ಚೆನ್ನಾಗಿತ್ತಲ್ಲವೇ? ಹಿಂದೊಮ್ಮೆ 'ಕಭಿ ಅಲ್ವಿದಾ ನಾ ಕೆಹನಾ' ಎಂಬ ಹಿಂದಿ ಸಿನೆಮಾ ಬಂದಿತ್ತು. ಅಮಿತಾಭ್ ಬಚ್ಚನ್‌ನ ಗಂಡು ಮಕ್ಕಳಿಬ್ಬರ ಮದುವೆಯಾಗಿರುತ್ತೆ, ಪ್ರೀತಿಸಿ ಮದುವೆಯಾದ ಎರಡನೇ ಮಗ ಮತ್ತು ಸೊಸೆ ನಡುವೆ ಬಿರುಕು ಬಂದು ಸಣ್ಣ ಸೊಸೆಗೂ, ಹಿರಿಯ ಮಗನ ಮಧ್ಯೆಯೂ ಏನೋ ಜರುಗುವಂಥ ಕಥೆಯ ಸಿನೆಮಾ ಅದು. ಆಗ ಅಯ್ಯೋ ಸಂಸ್ಕೃತಿ.... ಅಂತ ಕರುಣಾಜನಕವಾಗಿ ವ್ಯಥೆ ಪಟ್ಟುಕೊಂಡ ಭೈರಪ್ಪವಾದಿಗಳು ಈಗ ಅದೇ ಭಾರತದ ಮಹಿಳೆಯರನ್ನು ಕಂಡವರ ಜೊತೆ ಮಲಗುವವರಂತೆ (ಭೈರಪ್ಪ) ಬರೆದದ್ದು ಓದಿಯೂ ಸುಮ್ಮನಿರುವುದೇಕೆ?

ಕಾದಂಬರಿಯಲ್ಲಿ ಅನೈತಿಕ ಪ್ರಸಂಗಗಳೇ ಹೆಚ್ಚಿವೆ. ಅಲ್ಲಿರುವ ಮಂಗಳೆ ಎಂ.ಎ. ಓದುವಾಗ ಪ್ರಭಾಕರನೊಂದಿಗೆ ಪ್ರೀತಿಸಿ, ಗರ್ಭಧರಿಸಿ, ಅಬಾರ್ಷನ್ ಮಾಡಿಸಿಕೊಂಡು ಬೇರೆಯವರನ್ನು ಮದುವೆಯಾದರೂ ಹಳೆಯ ಗೆಳೆಯನನ್ನು ಮನೆಗೆ ಕರೆದು ಸುಖಿಸುವುದು ಅಂದ್ರೆ ಆಕೆ ಕೆಟ್ಟವಳು ಅಂತ ನಿರೂಪಿಸುವುದು ಭೈರಪ್ಪನವರ ಅಜೆಂಡಾ. ಇನ್ನೂ ಮಂಗಳೆಯನ್ನು ಮದುವೆಯಾಗಿರುವ ಜಯಕುಮಾರನ ಮೊದಲ ಹೆಂಡತಿ ತೀರಿದ್ದರೂ ಬೆಳೆದ ಮಗಳನ್ನು ಪ್ರೀತಿಯಿಂದ ಕಾಣೋ ಅವಳ ತಂದೆಯನ್ನೇ ಅನುಮಾನಿಸಿ ನೋಡುವವಳು.

ಈ ಕಾದಂಬರಿಯಲ್ಲಿ ಭೈರಪ್ಪನವರು ಸ್ತ್ರೀಗೊಂದು ನ್ಯಾಯ, ಪುರುಷರಿಗೊಂದು ನ್ಯಾಯ ಎಂದು ಮೊದಲೇ ತೀರ್ಮಾನಿಸಿ, ಪ್ರಸಂಗಗಳನ್ನು ಸೃಷ್ಟಿಸಿದ್ದಾರೆ. ಕಾಲ್ಪನಿಕ ಘಟನೆ, ಪ್ರಸಂಗ ಬರೆದಿದ್ದಾರೆ ಎಂದು ಸುಮ್ಮನಿರಬಹುದಿತ್ತು. ಆದರೆ ನಲವತ್ತರ ಇಳಾ, ಮಗಳ ಜವಾಬ್ದಾರಿ ಜೊತೆ ತನ್ನ ಹುದ್ದೆಯಲ್ಲಿದ್ದು ಏನಾದರೂ ಸಾಧನೆ ಮಾಡಬೇಕು ಎನ್ನುವ ಛಲವಾದಿ. ಆಕೆಯನ್ನು ಮಂತ್ರಿಯೊಂದಿಗೆ ಚೆಲ್ಲಾಟದ ಫೋಟೋ ತೆಗೆಸಿ ಅವು ಮಂತ್ರಿ ಹೆಂಡತಿ ಕೈಗೆ ಸಿಕ್ಕು ರಂಪಾಟವಾಗಿ, ನಂತರ ಕಂತ್ರಿ ಮಂತ್ರಿಯಿಂದ ಇಳಾಳನ್ನು ಬೀದಿಪಾಲು ಮಾಡಿಸಿ, ಆಕೆ ಸೂಳೆ ಎಂಬಂತೆ ಬರೆದದ್ದು ಭೈರಪ್ಪನವರಿಗೆ ಹೇಸಿಗೆ ತರಿಸಬೇಕು.

ಕಾದಂಬರಿಯ ಎಲ್ಲಾ ಮಹಿಳಾ ಪಾತ್ರಗಳನ್ನು ಭೈರಪ್ಪ ಕೆಟ್ಟ ಭಾವನೆಯಿಂದಲೇ ಸೃಷ್ಟಿಸಿದ್ದಾರೆ. ಜಯಕುಮಾರನ ಅಳಿಯ ನಚಿಕೇತ ಅಮೇರಿಕಾದಲ್ಲಿ ಲಿವಿಂಗ್ ಟುಗೆದರ್ ಸಂಬಂಧ ಇಟ್ಟುಕೊಂಡು ಅಲ್ಲಿನ ಇಬ್ಬರು ಮಹಿಳೆಯರಿಂದ ಮೋಸವಾಗಿ, ವಾಪಸ್ ಭಾರತಕ್ಕೆ ಬಂದು ಮಾವ ಜಯಕುಮಾರನ ಮಗಳು ವತ್ಸಲೆಯನ್ನು ಮದುವೆಯಾಗುವುದು ಆದರ್ಶವೆಂಬಂತೆ ಚಿತ್ರಿಸಿದ್ದಾರೆ.

ಅಮೇರಿಕದ ಹೆಣ್ಣಿನೊಂದಿಗೆ ಮಜಾ ಮಾಡಿ, ಭಾರತದ ಹೆಣ್ಣಿನೊಂದಿಗೆ ಮದುವೆಯಾಗುವುದು ಭೈರಪ್ಪಗೆ ಆದರ್ಶ. ಏಕೆಂದರೆ ಕುಂಕುಮ, ಬಳೆ ಧರಿಸಿ, ಹೂ ಮುಡಿದು ರೇಷ್ಮೆ ಸೀರೆ ಉಟ್ಟು ಗಂಡನೆದುರು ತಲೆ ತಗ್ಗಿಸಿ ನಿಲ್ಲುವುದನ್ನು ಪಾತ್ರ ಪ್ರೀತಿಯಿಂದ ಚಿತ್ರಿಸುತ್ತಾರೆ. ಆದರೆ ಕೈಯಲ್ಲಿ ಬಳೆ ಇರದ, ಕುಂಕುಮ ಇಲ್ಲದವರು ಹೆಣ್ಣೇ

ಅಲ್ಲ ಎನ್ನುವುದು ಸರಿಯಾ? ಅವರನ್ನು ಸೂತಕದ ಛಾತಯೆಯವರು ಎನ್ನುವ ಹಕ್ಕು ಕೊಟ್ಟವರ್ಯಾರು?

ಕುಂಕುಮ ಇಟ್ಟುಕೊಂಡವರು, ಇಟ್ಟುಕೊಳ್ಳದವರೂ ಹೆಣ್ಣೇ. ಅವರ ಸಮಸ್ಯೆ, ನೋವು ಒಂದೇ ಆಗಿರಬಹುದಾ ಎನ್ನುವ ಸಹೃದಯತೆ ಇಲ್ಲದ ಭೈರಪ್ಪ ಸ್ತ್ರೀವಾದಿಗಳನ್ನು ಸ್ವೇಚ್ಛಾಚಾರಿಗಳೆಂದು, ದುಡಿಯಲು ಹೋಗುವವರನ್ನು ಹಾದರ ಮಾಡಲು ಹೊರಟವರು ಎಂಬ ಭಾವನೆ ಮೂಡುವಂತೆ ಬರೆಯುವುದು ಖಂಡನೀಯ.

ಇಂದಿನ ಮಹಿಳೆ ವಸ್ತು ಅಲ್ಲ, ವ್ಯಕ್ತಿ, ಆಕೆಗೂ ಆಸೆ, ಭಾವನೆ, ಕರ್ತವ್ಯ, ಹಕ್ಕುಗಳಿವೆ. ವಿವೇಚನಾ ಶಕ್ತಿಯಿದೆ. ಇವತ್ತು ಕುಟುಂಬ ನಿರ್ವಹಣೆಗೆ ಮಕ್ಕಳ ಭವಿಷ್ಯಕ್ಕಾಗಿ ಮಹಿಳೆ ದುಡಿಯುವ ಅನಿವಾರ್ಯತೆ ಇದೆ. ಭೈರಪ್ಪ ಮಹಿಳೆಯನ್ನು ಗೌರವಿಸದಿದ್ದರೂ ಕತ್ತೆಬಾಲ, ಸಾಹಿತ್ಯ ಮನಸ್ಸು ಅರಳಿಸಬೇಕು. ಆದರೆ ತಮ್ಮೊಳಗಿನ ದರಿದ್ರ ಆಲೋಚನೆಗಳನ್ನು ಸಾಹಿತ್ಯ ಅಂತ ಜನರಿಗೆ ಕೊಟ್ಟು ಮನಸ್ಸು ಮುದುಡಿಸುವ ಕೆಲಸ ಬಿಡಲಿ. ಇಂತಹ ವಯಸ್ಸಲ್ಲಿ ಕೆಟ್ಟ ಆಲೋಚನೆ ಹೊಂದಿರುವ ಭೈರಪ್ಪ ಮನಸ್ಸನ್ನು ಸರ್ಫ್ ಎಕ್ಸೆಲ್‌ನಿಂದ ತೊಳೆದುಕೊಳ್ಳಲಿ, ಘನತೆ ಗೌರವ ಉಳಿಸಿಕೊಳ್ಳಲಿ.

---

# ಕವಲು ಹಾದಿಯಲ್ಲಿ ಭೈರಪ್ಪನವರು ಹೇಳಿದ್ದೇನು?

–ನಾ.ರಾ. ಜ್ಯೋತಿ, ಭಾರತ್ ಎಲೆಕ್ಟ್ರಾನಿಕ್ಸ್

"ಓದಿದ ಗಂಡಸರೆಲ್ಲ ಎಂಗಸರಾಗ್ತಾರೆ, ಓದಿದ ಎಂಗಸರೆಲ್ಲ ಗಂಡಸರಾಗ್ತಾರೆ. ಗಂಡಸರು ಗಂಡಸರಾಗಿ, ಎಂಗಸರು ಎಂಗಸರಾಗಿ ಇರಬೇಕಾದರೆ ಯಾರೂ ಓದಕೂಡದು(!?)

ಕವಲು ಕಾದಂಬರಿಯ ಪ್ರಾರಂಭದಲ್ಲೇ ಕಾನ್‌ಸ್ಟೇಬಲ್ ನಂಜುಂಡೇಗೌಡನ ಬಾಯಲ್ಲಿ ಈ ಮಾತನ್ನು ಆಡಿಸಿರುವ ಎಸ್.ಎಲ್. ಭೈರಪ್ಪನವರು ಮುನ್ನೂರು ಪುಟದ ಕಾದಂಬರಿಯಲ್ಲಿ ಪೂರ್ತಿ ಅದಕ್ಕೆ ಬದ್ಧರಾಗೇ ಇದ್ದಾರೆ. ಓದಿದ ಹೆಂಗಸರ್‍ಯಾರೂ "ಕವಲು" ಕಾದಂಬರಿಯಲ್ಲಿ ಒಳ್ಳೆಯವರಾಗಿಲ್ಲ! ಇನ್ಸ್‌ಪೆಕ್ಟರ್ ಶೀಲಾರಾಣಿ, ಕಾಲೇಜ್ ಲೆಕ್ಚರರ್ ಡಾ॥ ಇಳಾ, ಲಾಯರ್ ಮಾಲಾ ಕೆರೂರ್, ಚಿತ್ರಾ ಹೊಸೂರ್, ಉದ್ಯಮಿ ಸರಾಫ್ ಎಲ್ಲರೂ ಅವಕಾಶವಾದಿಗಳೇ, ಮೋಸಗಾರರೆ! ಸತ್ತ ವೈಜಯಂತಿ, ಮನೆಕೆಲಸದ ದ್ಯಾವಕ್ಕ, ತಾಯಿ ರಾಜಮ್ಮ ಪಾತ್ರಗಳಷ್ಟೇ ಒಳ್ಳೆ ಹೆಂಗಸರು. ಒಬ್ಬರು ಸತ್ತವರು, ಇನ್ನಿಬ್ಬರು ಓದದವರು. ಅದಕ್ಕೇ ಬಹುಶಃ ಒಳ್ಳೆಯವರಾಗಿದ್ದಾರೆ.

ಪ್ರತಿಯೊಂದು ಸ್ತ್ರೀ ಪಾತ್ರವನ್ನು ಭೈರಪ್ಪನವರು ಆ ಹೆಣ್ಣಿನ ಬರಿ ಹಣೆ, ಬರಿ ಕಿವಿ, ಬಳೆ ಇಲ್ಲ, ಸೂತಕದ ಕಳೆ, ಧರಿಸಿರುವ ಬಟ್ಟೆ, ದೇಹದ ವಿನ್ಯಾಸ ಇವುಗಳ ಮೂಲಕವೇ ಓದುಗರಿಗೆ ಪರಿಚಯ ಮಾಡಿಸುತ್ತಾರೆ. ಪ್ರತಿಯೊಂದು ಸ್ತ್ರೀ ಪಾತ್ರಕ್ಕೂ ಈ ರೀತಿಯ ವಿವರಣೆಯ ಅಗತ್ಯವೇನಿತ್ತು ಅರ್ಥವಾಗಲಿಲ್ಲ. ಜಾತ್ಯಾತೀತವಾದ ಭಾರತೀಯ ಸಂಸ್ಕೃತಿಯಲ್ಲಿ ಹಿಂದು ಮಹಿಳೆಯರು ಎಂದರೆ ಮೈ ತುಂಬಾ ಒಡವೆ ಧರಿಸಿ, ತಲೆಗೆ ಹೂ ಮುಡಿದು, ಹಣೆ ತುಂಬಾ ಕುಂಕುಮವಿಡುವುದೇ?

ಏಕವಚನ, ಬಹುವಚನಗಳನ್ನು ತಮ್ಮ ಅನುಕೂಲಕ್ಕೆ ತಕ್ಕಂತೆ ಕನ್ನಡ ಮತ್ತು ಇಂಗ್ಲಿಷ್ ಭಾಷೆಯಲ್ಲಿ ಪಾತ್ರಗಳು ಬಳಸುವುದು ಆ ಬಗೆಗೆ ಸ್ತ್ರೀ ಮತ್ತು ಪುರುಷ ಪಾತ್ರಗಳು ಪದೇ ಪದೇ

ಚರ್ಚೆ ನಡೆಸುವುದು. ಕೊನೆಗೆ "ಹೆಣ್ಣು ಎಂದಿಗೂ ತನ್ನನ್ನು ಏಕವಚನದಲ್ಲಿ ಕರೆಯುವುದನ್ನು ಯಾವ ಗಂಡಸು ಇಷ್ಟಪಡುವುದಿಲ್ಲ" ಎಂದು ಭೈರಪ್ಪನವರೇ ತೀರ್ಮಾನಿಸುತ್ತಾರೆ.

ಮಂಗಳಾ, ಡಾ॥ ಇಳಾರ ಬಾಯಿಂದ ರಾಸ್ಕಲ್, ಲೋಫರ್, ಎಕ್ಸ್‌ಪ್ಲಾಯಿಟರ್, ಮೇಲ್ ಶಾವನಿಸ್ಟಿಕ್ ಪಿಗ್ ಪದಗಳನ್ನು ಪದೇ ಪದೇ ಹೇಳಿಸಿ ಓದುವಾಗ ಅಸಹ್ಯ ಎನ್ನಿಸುವಂತೆ ಚಿತ್ರಿಸಿದ್ದಾರೆ. ಸಧ್ಯ ಬಯ್ಗುಳಗಳು ಕನ್ನಡ ಭಾಷೆಯಲ್ಲಿಲ್ಲ ಎಂದು ಕನ್ನಡಿಗರು ಸಮಾಧಾನ ಪಡಬಹುದು!

"ಕವಲು" ಕಾದಂಬರಿಯಿಂದ ನಮ್ಮ ದೇಶದ ಕಾನೂನುಗಳಷ್ಟೇ ಅಲ್ಲದೇ ವಿದೇಶದ ಕಾನೂನುಗಳ ಪರಿಚಯವೂ ಚೆನ್ನಾಗಿ ಆಯಿತು. ಸ್ತ್ರೀ ಪರವಾಗಿ ಇಷ್ಟೊಂದು ಕಾನೂನುಗಳಿವೆ ಎಂಬುದು ನಿಜಕ್ಕೂ ಶೋಷಣೆಗೊಳಗಾಗುತ್ತಿರುವ ಮಹಿಳೆಯರಿಗೆ ಗೊತ್ತೇ ಇಲ್ಲ. ಅಲ್ಪ ಸ್ವಲ್ಪ ಗೊತ್ತಿರುವವರು ಮಾನಕ್ಕೆ ಅಂಜಿ ಬಳಸುವುದೇ ಇಲ್ಲ. ಎಲ್ಲಾ ಹೆಣ್ಣು ಮಕ್ಕಳು ಇಷ್ಟು ಧೈರ್ಯವಂತರಾಗಿದ್ದರೆ ಗಂಡನಿಂದ ಹತ್ಯೆಯಾಗುತ್ತಿರಲಿಲ್ಲ. ಲಕ್ಷ ಸಂಪಾದನೆ ಮಾಡುವ ಹೆಂಗಸರು ಗಂಡನ ದೌರ್ಜನ್ಯಕ್ಕೆ ಬೇಸತ್ತು ಆತ್ಮಹತ್ಯೆ ಮಾಡಿಕೊಳ್ಳುತ್ತಲೇ ಇರಲಿಲ್ಲ. ಹೀಗೆಂದ ಮಾತ್ರಕ್ಕೆ ಹೆಂಗಸರೆಲ್ಲಾ ಒಳ್ಳೆಯವರು, ಗಂಡಸರೆಲ್ಲಾ ಕೆಟ್ಟವರೇನಲ್ಲ. ಕೆಟ್ಟ ಹೆಂಗಸರೂ ಇದ್ದಾರೆ. ಒಳ್ಳೆಯ ಗಂಡಸರೂ ಇದ್ದಾರೆ. "ಕವಲು" ಕೆಟ್ಟ ಹೆಂಗಸರು ಮತ್ತು ಒಳ್ಳೆಯ ಗಂಡಸರ ನಡುವಿನ ಕಾದಂಬರಿ ಎಂಬುದನ್ನು ಒಪ್ಪಬಹುದು.

ಕಾದಂಬರಿಯಲ್ಲಿನ ಪುರುಷ ಪಾತ್ರಗಳಿಗೆ ಅವರು ಮಾಡಿದ ತಪ್ಪುಗಳ ಅರಿವಾಗುತ್ತದೆ. ಸರಿದಾರಿಯಲ್ಲಿ ನಡೆಯುವ ಅವಕಾಶವೂ ಇದೆ. ತಪ್ಪು ಮಾಡಿ ಬಚಾವಾಗುವ ಬುದ್ಧಿವಂತಿಕೆಯೂ ಇದೆ. ಆದರೆ, ಸ್ತ್ರೀ ಪಾತ್ರಗಳು ಕೊನೆಯವರೆಗೂ ತಪ್ಪು ಮಾಡುತ್ತಲೇ ಹೋಗುತ್ತ ಬದಲಾವಣೆಗೆ ಅವಕಾಶವೇ ಇಲ್ಲ, ಕೊನೆಗೆ ಸೋಲುತ್ತಾಳೆ.

ಕಾನೂನು ತಿಳಿದ ಹೆಣ್ಣು, ಕಾನೂನನ್ನು ತಮ್ಮ ಅನುಕೂಲಕ್ಕೆ ತಕ್ಕಂತೆ ದುರುಪಯೋಗ ಪಡಿಸಿಕೊಳ್ಳುವುದನ್ನು ಭೈರಪ್ಪನವರು ಬಹಳ ಚೆನ್ನಾಗಿ ಹೇಳಿದ್ದಾರೆ. ಖಂಡಿತವಾಗಲೂ ಕಾನೂನಿಗೆ ತಿದ್ದುಪಡಿ ಬೇಕು. ಹೆಣ್ಣಾಗಲಿ, ಗಂಡಾಗಲಿ ತಪ್ಪು ಮಾಡಿದವರಿಗೆ ಶಿಕ್ಷೆಯಾಗಬೇಕು

ಮದುವೆಯಾಗಿದ್ದ ಮಗಳು ತವರು ಮನೆಯಲ್ಲೇ ನೇಣು ಹಾಕಿಕೊಂಡು ಸತ್ತರೂ ಅವಳಿಗಾಗಿ ದುಃಖಿಸದೇ, ಮಗಳ ದಡ್ಡತನವನ್ನೂ, ಹೇಡಿತನವನ್ನೂ ಹಂಗಿಸುವ ಪತ್ತ ತಾಯಿ ಇಂದಿರಾ ಪಾತ್ರ ಸೃಷ್ಟಿ ತಾಯಿ ಕುಲಕ್ಕೇ ಕಳಂಕಪಿಟ್ಟಂತಿದೆ.

"ಕವಲು" ಕಾದಂಬರಿ ಪುರುಷ ಮತ್ತು ಸ್ತ್ರೀ ಇಬ್ಬರಿಗೂ ಸಹಕಾರಿಯಾಗಿದೆ ಹೇಗೆಂದರೆ, ಹೆಂಗಸರಿಗೆ ಕಾನೂನಿನ ಅರಿವು ಮೂಡಿಸಿದರೆ, ಆ ಕಾನೂನಿನ ಕೈಗೆ ಸಿಲುಕದೆ ತಮ್ಮಾಸೆಗಳನ್ನು ಪೂರೈಸಿಕೊಳ್ಳುವುದು ಹೇಗೆಂದು ಪುರುಷರಿಗೂ ಹೇಳಿಕೊಟ್ಟಿದೆ (ಕೊನೆಗೂ ಲಾಭ ಗಂಡಸರಿಗೇ!)

'ಸಂಸ್ಕೃತಿಯ ಉಳಿವಿಗಾಗಿ "ಕವಲು" ಕಾವಲು ಕಾಯುವ ಕೆಲಸ ಮಾಡುತ್ತಿದೆ ಎಂದೊಬ್ಬರು ಪತ್ರಿಕೆಯಲ್ಲಿ ಬರೆದಿದ್ದರು. ಇದು ಉತ್ಪ್ರೇಕ್ಷೆಯಾಯಿತು ಎಂಬುದು ನನ್ನ ಅನಿಸಿಕೆ. (ಪ್ರಾಸಕ್ಕಾಗಿ ಬಳಸಿರಬಹುದು) ದೇಶ ವಿದೇಶದ ಕಾನೂನಿನಲ್ಲಿರುವ ಹುಳುಕನ್ನು ಭೂತಗನ್ನಡಿಯಲ್ಲಿ ತೋರಿಸುತ್ತಿದೆ ಎಂಬುದು ನಿಜ. ಕಾದಂಬರಿಯ ಸೃಷ್ಟಿ ಲೇಖಕರದು ಅದನ್ನು ಹೀಗೇಕೆ ಬರೆದಿರಿ ಎಂದು ಪ್ರಶ್ನಿಸುವ ಅಧಿಕಾರ ಓದುಗರಿಗಿಲ್ಲ ನಿಜ. ಆದರೆ ನಾವು ಪ್ರೀತಿಸುವ ಭೈರಪ್ಪನವರು ಹೀಗೆ ಬರೆದರಲ್ಲ ಎಂಬ ನೋವು ಕಾಡುತ್ತಿದೆ. ಲೋಕದ ಜನರನ್ನೆಲ್ಲಾ ಎಲ್ಲಾ ಕಾಲದಲ್ಲೂ ಮೆಚ್ಚಿಸಲು ಯಾರಿಗೆ ಸಾಧ್ಯ? ಇದು ಭೈರಪ್ಪನವರ ಅಂತರಂಗದಲ್ಲಿಟ್ಟುಕೊಳ್ಳದೆ ಬಹಿರಂಗಪಡಿಸಿದ್ದೆ?

ಸಂಶೋಧನೆ

# ಕೊಂಡಗುಳಿ ಕೇಶಿರಾಜ: ಶರಣ ಧರ್ಮದ ಮೂಲ ಪುರುಷ ಮತ್ತು ಕಾಯಕ ಸಿದ್ಧಾಂತ ಸ್ವರೂಪಿ

– ಡಾ. ಶರಣಪ್ಪ ಎಸ್. ಮಾಳಗಿ

ಜಾಗತಿಕ ಸಾಹಿತ್ಯದಲ್ಲಿ ಶಿವಶರಣರ ವಚನ ಸಾಹಿತ್ಯಕ್ಕೊಂದು ವಿಶಿಷ್ಟವಾದ ಸ್ಥಾನವಿದೆ. ಹಾಗೆಯೇ ಕರ್ನಾಟಕ ಚರಿತ್ರೆಯಲ್ಲಿ ವಚನ ಚಳುವಳಿಯು ಒಂದು ಮಹತ್ವದ ಘಟ್ಟವೂ ಕೂಡ ಆಗಿದೆ. ವಚನ ಸಾಹಿತ್ಯವು ಸಾಹಿತ್ಯದ ದೃಷ್ಟಿಯಿಂದ ಕ್ರಾಂತಿಕಾರಕವಾಗಿರುವಂತೆ ಶರಣ ಚಳುವಳಿಯು ಸಮಾಜ ಉದ್ಧಾರದ ದೃಷ್ಟಿಯಿಂದ ಉದಾತ್ತವಾದುದಾಗಿದೆ. ೧೨ನೇ ಶತಮಾನದ ಬಸವಣ್ಣನವರ ಹಿರಿತನದಲ್ಲಿ ಅನೇಕ ಶಿವಶರಣರು ಕೈಗೊಂಡ ಸಾಮಾಜಿಕ ಮತ್ತು ಧಾರ್ಮಿಕ ಚಳುವಳಿಯು ಆ ಯುಗದಲ್ಲಿ ಕರ್ನಾಟಕವು ಕಂಡ ಅದ್ವಿತೀಯ ಘಟನೆಯಾಗಿದೆ. ಆದುದ್ದರಿಂದ ವಚನ ಚಳುವಳಿಯನ್ನು ಭಾರತೀಯ ಸಾಂಸ್ಕೃತಿಕ ಚರಿತ್ರೆಯಲ್ಲಿಯೇ ಅಪೂರ್ವವಾದುದೆಂದು ಹೇಳಬಹುದು.

ಧರ್ಮವು ತನ್ನ ಸಂಪ್ರದಾಯದ ದೃಷ್ಟಿಯಿಂದ ಕಟ್ಟುಪಾಡುಗಳನ್ನು ಕಿತ್ತೊಗೆದು ಸಾಮಾನ್ಯ ಜನತೆಯನ್ನು ಉದ್ಧರಿಸುವ ಪವಿತ್ರ ಶಕ್ತಿಯಾದುದು ವಚನ ಚಳುವಳಿಯ ಕಾಲದಲ್ಲಿಯೇ ಎಂಬುದನ್ನು ನಾವು ಮರೆಯುವಂತಿಲ್ಲ. ಹೀಗಾಗಿ ಮಧ್ಯಕಾಲಿನ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ವೈಶಿಷ್ಟ್ಯತೆಯನ್ನು ಮೈಗೂಡಿಸಿಕೊಂಡು ಆವಿರ್ಭವಿಸಿದ ವಚನ ರೂಪವು ಅತ್ಯಂತ ಮಹತ್ವದ್ದು. ಪ್ರಥಮ ಬಾರಿಗೆ ಸಮಾಜದ ವಿವಿಧ ಸ್ತರಗಳಿಂದ ಬಂದ ಸಾಮಾನ್ಯ ಜನತೆಗೆ ಲಿಂಗಭೇದವಿಲ್ಲದೇ ಸಾಹಿತ್ಯಾಭಿವ್ಯಕ್ತಿಯಲ್ಲಿ ಪಾಲ್ಗೊಳ್ಳುವಂತೆ ಮಾಡಿದ್ದು ಶರಣ ಸಾಹಿತ್ಯದ ಪ್ರಮುಖ ಸಾಧನೆಯಾಗಿದೆ. ಅಂತರಂಗದ ಅನುಭವ ಮತ್ತು ತುಮುಲಗಳನ್ನು ನೇರವಾಗಿ, ಪ್ರಾಮಾಣಿಕವಾಗಿ, ಸರಳ ಭಾಷೆಯಲ್ಲಿ ತಿಳಿಯುವಂತೆ ಹೇಳಿದರೂ ಸಾಧ್ಯವಾಗಬಲ್ಲದು ಎಂಬುದನ್ನು ವಚನಕಾರರು ತೋರಿಸಿಕೊಟ್ಟಿದ್ದಾರೆ. ಯಾವುದೇ ಪೂರ್ವ ಆಕರಗಳನ್ನು ಅವಲಂಬಿಸದೇ ಅಂತರಾತ್ಮದ ಆಸಕ್ತಿ,

ಘರ್ಷಣೆ ಮತ್ತು ಪ್ರತಿಕ್ರಿಯೆಗಳನ್ನು ವಸ್ತುಗಳನ್ನಾಗಿ ಮಾಡಿಕೊಂಡು ವಸ್ತುನಿಷ್ಠ ಕಾವ್ಯದ
ಅಭಿವ್ಯಕ್ತಿಯನ್ನು ಶರಣ ಸಾಹಿತ್ಯ ಸಾಧಿಸಿ ತೋರಿಸಿದೆ.

ಬಸವಾದಿ ವಚನಕಾರು ತಮ್ಮ ಸಾಹಿತ್ಯಿಕ ಸಾಧನೆಗಳಿಂದ ಇಡೀ ವಿಶ್ವಕ್ಕೆ
ಮಾದರಿಯಾಗುವಂತೆ ಕನ್ನಡ ಸಾಹಿತ್ಯದ ಕೃಷಿ ಗೈದಿದ್ದಾರೆ. ಶರಣರು ರಚಿಸಿದ ವಚನ
ಸಾಹಿತ್ಯವನ್ನು ಶರಣ ಸಾಹಿತ್ಯ, ವೀರಶೈವ ಸಾಹಿತ್ಯವೆಂದು ಕರೆಯಲಾಗುತ್ತದೆ. ತಮ್ಮ ಸಾಹಿತ
ಪ್ರಕಾರವಾದ ವಚನಗಳಲ್ಲಿ ವ್ಯಕ್ತಿಯ ಸಿದ್ಧಿ, ಸಮಾಜದ ಶುದ್ಧಿ ಮತ್ತು ಸಮಾಜ ಸಮೃದ್ಧಿ
ಶರಣರಿಗೆ ಮುಖ್ಯವಾಗಿದ್ದವು. ಈ ಹಿಂದೆ ಚರ್ಚೆ ಮಾಡಿದ ವಿಷಯಗಳೆಲ್ಲವು ಕೊಂಡಗುಳಿ
ಕೇಶಿರಾಜ ಕಾವ್ಯಗಳಿಂದ ತಿಳಿದು ಬರುತ್ತವೆ. ಕೊಂಡಗುಳಿ ಕೇಶಿರಾಜನ ಇತಿವೃತ್ತದ ಬಗ್ಗ
ನಾವು ತಿಳಿದುಕೊಳ್ಳಲು ಕ್ರಿ.ಶ. ೧೧೦೭ ಮತ್ತು ೧೧೩೨ ರ ಕೊಂಡಗುಳಿಯ ಈ ಎರಡು
ಶಾಸನಗಳು ಸಹಕಾರಿಯಾಗುತ್ತವೆ. ಅಲ್ಲದೇ ತಾನೇ ಬರೆದ ಮಂತ್ರ ಮಹತ್ವದ ಕಂದ. ಲಿಂಗ
ಸ್ತೋತ್ರದ ಕಂದ, ಕೇಶೀರಾಜ ದಣ್ಣಾಯಕರ ಕಂದ, ಶೀಲ ಮಹತ್ವದ ಕಂದ, ಅಳಲಾಷ್ಟ
ಮತ್ತು ನವರತ್ನಮಾಲಾ – ಈ ಕೃತಿಗಳನ್ನಲ್ಲದೆ ಹರಿಹರನು ಪೂರ್ಣ ಪ್ರಮಾಣದಲ್ಲಿ
ರಚಿಸಿರುವ ಕೇಶಿರಾಜ ದಣ್ಣಾಯಕರ ರಗಳೆ ಅಲ್ಲದೇ ಪಾಲ್ಕುರಿಕೆ ಸೋಮನಾಥನ ತೆಲುಗು
ಬಸವಪುರಾಣಮು ಈ ಮುಂತಾದ ಕೃತಿಗಳನ್ನು ಅನುಸರಿಸಿ ರಚಿತವಾದ ವೀರಶೈವ ಕಾವ
ಪುರಾಣಗಳಲ್ಲಿಯ ಅನುಷಂಗಿಕ ಸಂಗತಿಗಳು ನೆರವಾಗುತ್ತವೆ. ಕೊಂಡಗುಳಿ ಕೇಶಿರಾಜನು
ಪ್ರತ್ಯೇಕವಾಗಿ ವಚನಗಳನ್ನು ರಚಿಸಿರುವ ಬಗ್ಗೆ ಆಕರಗಳು ಸಿಗದಿದ್ದರೂ ಆತನ ಕೃತಿಗಳ
ಮುಂದೆ ಬಂದ ಶರಣರ ಮೇಲೆ ಗಾಢವಾದ ಪ್ರಭಾವವನ್ನು ಬೀರಿವೆ ಎಂದು ಹೇಳಬಹುದು

ಕೊಂಡಗುಳಿ ಕೇಶಿರಾಜ ಬಸವಣ್ಣನವರಿಗಿಂತ ಪೂರ್ವದಾತ. ಬಸವಪೂರ್ವಯುಗದ
ಶರಣರ ಸಮೂಹದಲ್ಲಿ ಜೀವಿಸಿದ್ದು, ದೇವರ ದಾಸಿಮಯ್ಯ, ತೆಲುಗು ಜೊಮ್ಮಯ್ಯ, ಕೆಂಭಾವಿ
ಭೋಗಣ್ಣ, ಮಾರುಡಿಗೆ ನಾಚಿತಂದೆ, ಅಣ್ಣಿಂಪುರದ ವರದಾನಿ ಗುಡ್ಡವ್ವೆ, ವರಿಯಳಿ
ವೈಜಕ್ಕವ್ವೆ ಕೊಪ್ಪೂರ ಬೊಮ್ಮಯ್ಯ, ಮಾದಾರ ಚೆನ್ನಯ್ಯ, ಡೋಹರ ಕಕ್ಕಯ್ಯ, ಜೇಡರ
ದಾಸಿಮಯ್ಯ, ಬಾಪೂರ ಬೊಮ್ಮಯ್ಯ ಮತ್ತು ಶಂಕರ ದಾಸಿಮಯ್ಯ ಈ ಮುಂತಾದ
ಶರಣರ ಸಮಕಾಲೀನವನಾಗಿದ್ದಾನೆ. ಈ ಹಿಂದೆ ಪ್ರಸ್ತಾಪಿಸಿದಂತೆ ಕೊಂಡಗುಳಿ ಕೇಶಿರಾಜನ
ವಚನಗಳು ದೊರಕದಿದ್ದರೂ ಆತನು ಬರೆದ ಕಾವ್ಯಕೃತಿಗಳು ಶರಣರ ವಚನ ಸಾಹಿತ್ಯಕ್ಕೆ ವಸ
ಮತ್ತು ಧೋರಣೆಗಳನ್ನು ಒದಗಿಸಿರುವುದರ ಮೂಲಕ ಹೊಸ ರೂಪ ಸೃಷ್ಟಿಗೆ ಕಾರಣವಾಗಿವೆ
ಈತನ ಜೀವನ ಚರಿತ್ರೆ, ಈತನು ನಡೆಸಿದ ವೀರಶೈವ ಪರವಾದ ಚಟುವಟಿಕೆಗಳ
ವಚನಕಾರರಿಗೆ ಮಾದರಿಯಾಗಿ ನಿಂತು ಆ ದಿಕ್ಕಿನಲ್ಲಿ ಅವರು ಮುಂದುವರೆಯಲ
ಪ್ರೇರೇಪಿಸಿವೆ. ಒಂದು ರೀತಿಯಲ್ಲಿ ಬಸವಯುಗದ ಶರಣರ ಸಮಷ್ಟಿ ಬದುಕಿಗೆ ಈತನ ವೈ
ಬದುಕು ಮಾರ್ಗದರ್ಶಿಯಾಗಿ ಒಡಮೂಡಿದೆ. ಈತನು ಕನ್ನಡ ಸಾಹಿತ್ಯದ ಇತಿಹಾಸದ
ಸುಲಲಿತವಾದ ಕನ್ನಡ ಸಾಹಿತ್ಯದ ಯುಗವನ್ನು ಆರಂಭಿಸಿದ ಕೀರ್ತಿಗೆ ಪಾತ್ರನಾಗಿದ್ದಾನೆ. ಈ
ಹಿನ್ನೆಲೆಯಲ್ಲಿ ಕೊಂಡಗುಳಿ ಕೇಶೀರಾಜನನ್ನು "ವಾಙ್ಮಯದ ನೂತನ ಸೃಷ್ಟಿಯ ಹರಿಕಾರ
ಎಂದು ಕರೆದರೆ ಅತಿಶಯೋಕ್ತಿಯಾಗಲಾರದು. ಆರಂಭದಿಂದಲೂ ಬೆಳೆದು ಬಂದಿ
ಕನ್ನಡ ಸಾಹಿತ್ಯ ಪರಂಪರೆಯು ಕೊಂಡಗುಳಿ ಕೇಶಿರಾಜನ ಕಾಲದಲ್ಲಿ ಶಿವಭಕ್ತಿಯ ವೇಷ
ಧರಿಸಿಕೊಂಡು ಶಿವ ಪ್ರೇಮಿಗಳಿಗೆ ಸ್ಪಂದಿಸುತ್ತಾ ಹೊರಟಿತ್ತು. ಅಲ್ಲದೇ ಕನ್ನಡ ಸಾಹಿತ್ಯ
ರಾಜಾಶ್ರಯ ಇಲ್ಲದೆಯೂ ಬೆಳೆಯಬಲ್ಲದು ಎಂಬ ಮಾರ್ಗವನ್ನು ಹಾಕಿಕೊಟ್ಟ ಕ್ರಾಂತಿಕಾರ

ಕವಿಯಾಗಿ ಕೊಂಡಗುಳಿ ಕೇಶಿರಾಜನು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಉಲ್ಲೇಖಿಸಲ್ಪಟ್ಟಿದ್ದಾನೆ.

ಕೊಂಡಗುಳಿ ಕೇಶಿರಾಜನು ಒಬ್ಬ ಶ್ರೇಷ್ಠ ಶಿವಭಕ್ತನಾಗಿರುವಂತೆ ಉತ್ತಮ ಶಿವಕವಿಯೂ ಆಗಿದ್ದಾನೆಂಬುವುದಕ್ಕೆ ಅನೇಕ ಪುರಾವೆಗಳು ಪುಷ್ಟಿಯನ್ನು ಒದಗಿಸುತ್ತವೆ. ಸುಕವಿ ಶುಕಚೂತ ಬಂಧುವಿನ ವಸಂತ, ವಚಶ್ರೀ ವಧುಕಾಂತ, ಸಾಹಿತ್ಯ ಸರೋರುಹ ಮಧು ವ್ರತ ಎಂಬ ಶಾಸನೋಕ್ತ ವರ್ಣನೆಗಳು ದೊರೆತಿರುವುದನ್ನು ಸಮರ್ಥಿಸಲಾಗಿದೆ. ಹಾಗೆಯೇ "ನಿಚ್ಚ ಶಿಂಟುಂ ಪದ್ಯಂ ಸೋಮನಾಥಂಗೆ ಅಚ್ಚರಿಯಿಗಳ್ಪ ಪೇಳ್ವಂ ಶಿವನಾಥಂಗೆ" ಎಂಬ ಹರಿಹರನ ಹೇಳಿಕೆಗಳನ್ನು ಗಮನಿಸಬಹುದು.

ಪ್ರತಿಭಾವಂತ ಕವಿಯಾಗಿರುವ ಕೊಂಡಗುಳಿ ಕೇಶಿರಾಜನು ಸರಳವಾದ ಭಾಷೆಯನ್ನು ತನ್ನ ಕೃತಿಗಳಲ್ಲಿ ಬಳಸಿರುವುದು ಸಾಹಿತ್ಯದ ದೃಷ್ಟಿಯಿಂದ ಅತ್ಯಂತ ಗಮನಾರ್ಹ ಅಂಶವಾಗಿದೆ. ತಾನು ಹೇಳಬೇಕಾಗಿದ್ದ ವಿಚಾರಗಳನ್ನು ಜನಸಾಮಾನ್ಯರಿಗೆ ತಿಳಿಯುವಂತಹ ಭಾಷಾ ಮಾಧ್ಯಮವನ್ನು ತನ್ನ ಕೃತಿಗಳಿಗೆ ಬಳಸಿಕೊಂಡಿರುವುದು ಕಂಡು ಬರುತ್ತದೆ. ನಡುಗನ್ನಡದ ಶೈಲಿಯು ಅಲ್ಲಲ್ಲಿ ಕಂಡುಬಂದರೂ ಕೂಡ ಕನ್ನಡ ಭಾಷೆಯು ಹೊಸಗನ್ನಡದ ಕಡೆಗೆ ಹೆಜ್ಜೆಯನ್ನು ಇಡುತ್ತಿರುವಂತೆ ಸ್ಪಷ್ಟವಾಗಿ ಅಲ್ಲಲ್ಲಿ ಕಂಡು ಬರುತ್ತದೆ. ಹಾಗೆಯೇ ಕೊಂಡಗುಳಿ ಕೇಶಿರಾಜನು ವಸ್ತುವಿನ ದೃಷ್ಟಿಯಿಂದಲೂ ನೂತನವಾದ ಹಾದಿಯನ್ನು ತುಳಿದಿದ್ದಾನೆ.

ಹೀಗಾಗಿ ಕೊಂಡಗುಳಿ ಕೇಶಿರಾಜನ ಕೃತಿಗಳಲ್ಲಿ ಕಾವ್ಯಾಂಶಗಳಾದ ಅಲಂಕಾರ, ಛಂದಸ್ಸು ಮತ್ತು ರಸ ವಿಚಾರ ಈ ಮೊದಲಾದ ಅನೇಕ ಅಂಶಗಳನ್ನು ಹೇರಳವಾಗಿ ಗುರುತಿಸಬಹುದಾಗಿದೆ. ಇವು ಮುಂದಿನ ವಚನಕಾರರಿಗೆ ಮತ್ತು ಕವಿಗಳಿಗೆ ಮಾದರಿಯಾಗಿವೆ.

"ಜಿಂಕೆಯು ಅತಿಶಯವಾದ ಬಾಯಾರಿಕೆಯಿಂದಾಗಿ
ಬಿಸಿಲು ಮರೀಚಿಕೆಯನ್ನು ನೀರೆಂದು ಕುಡಿಯಲು ಹೋದಂತೆ
ಆಮಿಷಕ್ಕೊಳಗಾಗುವ ಮಾನವ ಬಿಸುಡು" (ಮಂತ್ರಮಹತ್ವದ ಕಂದ: ಪ:೫೩)

ಸಮದ್ವಂದ್ವಂ ಮೆರೆದಾ
"ನೋರ್ವನೆ ಏಕಾಂತದಲ್ಲಿ ಶಿವನನುಭವದೊಳ್
ನಿರ್ವಂದದಿಂದಮಿರ್ಪಾ
ನಿರ್ವಾಣದ ಪರಮಸುಖಮದೆಂದಾಪ್ಪುದೊ" (ಲಿಂಗಸ್ತೋತ್ರದ ಕಂದ: ಪದ್ಯ: ೫೯)

ಎಂದಿದೆ.

ಮುಖ್ಯವಾಗಿ ಶಿವಭಕ್ತನಾದ ಕೇಶಿರಾಜ ಸಾಹಿತ್ಯ ರಚನೆಗೆ ಕೈ ಹಾಕಿದ್ದು ತನ್ನ ಅಂತರಂಗದ ಒತ್ತಡದ ಫಲವಾಗಿ. ಆತನು ೬ನೇ ವಿಕ್ರಮಾದಿತ್ಯನಂತಹ ಚಕ್ರವರ್ತಿಯ ಮಂತ್ರಿಯಾಗಿದ್ದರೂ ತನ್ನ ಕೃತಿಗಳಲ್ಲಿ ಆತನ ಹೆಸರಿನ ಉಲ್ಲೇಖ ಕೂಡ ಮಾಡಿರುವುದಿಲ್ಲ. ಮನುಷ್ಯರನ್ನು ಸ್ತೋತ್ರ ಮಾಡದಿರುವ "ಶೀಲವನ್ನು ಈತನು ಕಟ್ಟು ನಿಟ್ಟಾಗಿಯೇ ಪರಿಪಾಲಿಸಿದಂತೆ ಕಾಣುತ್ತದೆ." ತನ್ನ ಕೃತಿಗಳ ಕೇಂದ್ರವಸ್ತು ಶಿವಭಕ್ತಿ ಅಥವಾ ಅನುಭವ ವಿಶಾಲವಾದ ಅರ್ಥದಲ್ಲಿ ಹೇಳುವುದಾದರೆ ಈತನ ಆಯಾ ಸಂದರ್ಭದ ಅನುಭವವು ತನ್ನಿಂದ ತನ್ನ ಮನದ ಮೇಲೆ ಮೂಡಿದ ಆಳವಾದ ಮತ್ತು ತೀವ್ರವಾದ ಅನುಭವವು ಪದ್ಯಗಳನ್ನೇ ಹೊರಡಿಸಿದ ರೀತಿಯನ್ನು ಹರಿಹರ ವರ್ಣಿಸಿದ್ದಾನೆ. ವಚನಕಾರರ ಕುರಿತಾಗಿ

ಹರಿಹರನು ಅಭಿವ್ಯಕ್ತಿಸಿದ "ಅಂದಂದಿನುಚಿತಕ್ಕೆ ಗೀತಮಂ ಪಾಡುತಂ" ಎಂಬ ಉಕ್ತಿಯನ್ನು
ಕೊಂಡಗುಳಿ ಕೇಶಿರಾಜನಿಗೂ ಅನ್ವಯಿಸಿ ಹೇಳಬಹುದು. ಹೀಗಾಗಿ ವಚನಗಳಂತೆಯೇ
ಈತನ ಕೃತಿಗಳು ಬಹುಪಾಲು ಮುಕ್ತಕಗಳಾಗಿವೆ. ವಚನದಂತಹ ಸಾಮಾನ್ಯ ಸಾಹಿತ್ಯ
ಪ್ರಕಾರ ಹುಟ್ಟುವುದಕ್ಕೆ ಇದು ಹಿನ್ನೆಲೆಯನ್ನು ಒದಗಿಸುತ್ತದೆ.

'ಭವಿಗಳ ಕಾವ್ಯಗಳನ್ನು ಕೇಳಬಾರದು' ಎಂಬ ಈತನ ಮಾತೇ ಒಂದು ಬಗೆಯ
ತನಗಿಂತ ಹಿಂದೆ ಶಿವ ಸಂಸ್ಕೃತಿಯ ಪರವಾದ ಸಾಹಿತ್ಯವಿದ್ದುದನ್ನು ಸೂಚಿಸುತ್ತದೆ ಎಂದು
ಯಾರಾದರೂ ಪ್ರತಿವಾದಿಸಲು ಅವಕಾಶ ದೊರಕಿದಂತಿದೆ. ಏಕೆಂದರೆ, ತನಗಿಂತ ಹಿಂದಿನ
ಯಾವುದೇ ಶರಣ ಕವಿಯ ಹೆಸರನ್ನು ತನ್ನ ಯಾವುದೇ ಕೃತಿಗಳಲ್ಲಿ ಉಲ್ಲೇಖಿಸಿಲ್ಲ.
ಅದಕ್ಕಿಂತಲೂ ಮಿಗಿಲಾಗಿ ಗಮನಿಸಬೇಕಾದ ಅಂಶವೆಂದರೆ ಬಸವಾದಿ ವಚನಕಾರರಾಗಲಿ
ಹರಿಹರಾದಿ ಕವಿಗಳಾಗಲಿ ಯಾರೂ ಕಾಲದ ಹಿನ್ನೆಲೆಯಲ್ಲಿ ಕೊಂಡಗುಳಿ ಕೇಶಿರಾಜನಿಗಿಂತ
ಹಿಂದೆ ಜೀವಿಸಿರಬಹುದಾದ ಯಾವುದೇ ಶರಣ ಕವಿಯ ಹೆಸರನ್ನು ಪ್ರಸ್ತಾಪಿಸಿಲ್ಲ. ಹೀಗಾಗಿ
ಕೊಂಡಗುಳಿ ಕೇಶಿರಾಜನೇ ಕನ್ನಡ ನಾಡಿನ ಶರಣಧರ್ಮದ ಪ್ರಪ್ರಥಮ ಶಿವ ಕವಿಯೆಂದು
ಹೇಳಿದರೆ ತಪ್ಪಾಗದು. ಪಂಚಾಕ್ಷರಿಯೇ ಈತನಿಗೆ ಛಂದಸ್ಸಾಗಿತ್ತೆಂದೂ, ಶಿವವಾಕ್ಯವೇ ಈತನಿಗೆ
ಶಬ್ದಶುದ್ಧಿಯೂ, ವ್ಯಾಕರಣವೂ ಆಗಿತ್ತೆಂಬ ಹರಿಹರನ ಉಲ್ಲೇಖ ಧ್ವನಿಪೂರ್ಣವಾಗಿದೆ.

ಕೊಂಡಗುಳಿ ಕೇಶಿರಾಜನ ಎಲ್ಲಾ ಕೃತಿಗಳನ್ನು ಅವಲೋಕಿಸಿ ವಸ್ತುವಿಷಯವನ್ನು
ಕುರಿತಾಗಿ ಸಂಕ್ಷಿಪ್ತವಾಗಿ ಪ್ರಸ್ತಾಪಿಸುವುದಾದರೆ, ವೀರಶೈವ ತತ್ವಸಿದ್ಧಾಂತ, ದೃಷ್ಟಿ
ಧೋರಣೆಗಳು ವ್ಯವಸ್ಥಿತವಾಗಿ ವರ್ಣಿತವಾಗಿವೆ. ೧೨ನೇ ಶತಮಾನದಲ್ಲಿ ವೀರಶೈವದ
ಪರಿಭಾಷಾ ಪದಗಳೆಂದು ಹೆಚ್ಚು ಬಳಕೆಯಲ್ಲಿ ಬಂದಿರುವ ಭವಿ-ಭಕ್ತ, ಕಾಯಕ, ವಿಭೂತಿ
ರುದ್ರಾಕ್ಷಿ, ಮಂತ್ರ, ಲಿಂಗ, ಲಿಂಗಾಯುತ, ವೀರಶೈವ, ಮಹಾನುಭಾವ, ಶಿವಾನುಭಾವ,
ಮುಂತಾದವು ಈತನ ಕೃತಿಗಳಲ್ಲಿ ಸ್ಪಷ್ಟವಾದ ಅರ್ಥದಲ್ಲಿ ಬಳಕೆಗೊಂಡಿವೆ. ಶೀಲ ಮಹತ್ವದ
ಕಂದದಲ್ಲಿ ವೀರಶೈವ ತತ್ವ ಕೆನೆಗಟ್ಟಿ ನಿಂತಿದ್ದರೆ, ಲಿಂಗ ಸ್ತೋತ್ರದ ಕಂದದಲ್ಲಿ ಕೇಶಿರಾಜನ
ಕವಿತ್ವ ಶಕ್ತಿ ಗರಿಗೆದರಿ ಮೆರೆದಿದೆ. ಶಿವನೇ ಎನ್ನಾಳ್ದನೆಂಬಂ ಅವನ್ ಅವನೆ ಮಾನ
ರತ್ನಂ, ಭವಿವಂದನೆ, ಭವಿಸೇವನೆಯ ಮಾಡದಿಪ್ಪಾತನೆ ಶೀಲಯುತಂ, ನಾಲಗೆಯನ್ನು
ಶಿವನಿಗೆ ಕೊಡುವುದು ನಲವತ್ತನೆಯ ಶೀಲಂ, ಅಂಗದ ಮೇಲೆ ಲಿಂಗವನ್ನಾಗಲಿ, ಲಿಂ
ಮುದ್ರಿಕೆಯನ್ನಾಗಲಿ ಧರಿಸುವುದು ಲಿಂಗಾಯುತ ಎಂಬ ಶೀಲ, ಗುರುಲಿಂಗ ಜಂಗಮ
ಒಂದೇ, ಭಕ್ತರಲ್ಲಿ ಕುಲಭೇದವಿಲ್ಲ, ಶಿವಭಕ್ತನೇ ಕುಲವಂತ, ಭವಿಗಳ ಸಂಪರ್ಕ ವರ್ಜ್ಯ
ಭವಿಗಳ ನುಡಿಕೇಳ ಕೂಡದು, ಭವಿಗಳ ಕಾವ್ಯ ಓದಕೂಡದು, ತೀರ್ಥ ಕ್ಷೇತ್ರಗಳಿಗೆ
ಹೋಗಕೂಡದು, ಜಾತಿ, ಜನನ, ಪ್ರಥಸೂತಕವಿಲ್ಲ, ವಾರ, ತಿಥಿ, ತಾರಾಬಲ
ಚಂದ್ರಬಲಗಳನ್ನು ನೋಡಬಾರದು, ಸಮಶೀಲದ ಜಂಗಮರ ಜೊತೆ ಉಣ್ಣುತ್ತಿರುವಾ
ಜಂಗಮ ಮಡಿದರೆ ತಾನು ಅವರ ಜೊತೆ ಮಡಿಯಬೇಕು. ನರರೊಳಗೆ ಭಕ್ತಧಿಕರ
ಸುರರೊಳಗೆ ಪ್ರಮಥರಧಿಕರ್, ಮುಕ್ಕಣ್ಣನಿಂದ ವೆಗ್ಗಳ ದೈವ ಬೇರಿಲ್ಲ. ಮೈತುಂಬ ವಿಭೂತಿ
ಬಾಯಿಯಲ್ಲಿ ಶಿವ ಸ್ಮರಣೆ, ಕೊರಳಲ್ಲಿ ಕೊಂಡಗುಳಿ ಕೇಶಿರಾಜನ ವೀರಶೈವ ನಿಷ್ಠೆಯನ್ನು
ಕಾಣಬಹುದಾಗಿದೆ.

ಕೊಂಡಗುಳಿ ಕೇಶಿರಾಜನ ಎಲ್ಲಾ ಕೃತಿಗಳಲ್ಲಿ ಅತೀ ಹೆಚ್ಚು ನಮ್ಮನ್ನು ಗಮನ ಸೆಳೆಯು
ಕೃತಿಯೆಂದರೆ ಲಿಂಗಸ್ತೋತ್ರದ ಕಂದ. ಈ ಕೃತಿಯಲ್ಲಿ ಈತನ ಭಕ್ತಿ ಹೊಳೆಯಾಗಿ ಹರಿ

ಉತ್ಕಟವಾದ ಭಾವನೆಗಳು ತುಂಬಿ ತುಳುಕಿವೆ. ಪುಲಕದಿಂದ ತನ್ನ ದೇಹ ನಾಟಿ ಮಾಡಿದ ಹೊಲದಂತಾಗಿದೆ. ಅದರಂತೆ ಶೀಲ ಮಹತ್ವದ ಕಂದದಲ್ಲಿಯೂ ಕಾಯಕ ಸಿದ್ಧಾಂತದ ಸ್ವರೂಪ ಧ್ವನಿಸುತ್ತದೆ. ಉದಾಹರಣೆಗೆ,

ಆವ ಕೆಲಸವ ಮಾಡಲು
ದೇವನ ಮುಖದವನು ಸವೆಸಲದು ಕರಲೇಸುಂ
ಆವ ಸೇವೆಗಳ ಮಾಡಲು
ದೇವನ ದೇಂದಂಬನಾವನದು ಕಾಯಕಂ (ಪದ್ಯ: ೯೭)

ಇಂತಹ ಅದ್ಭುತ ಪ್ರತಿಭಾ ಶಕ್ತಿಯ ಶಿವಕವಿಯಾಗಿರುವ ಕೊಂಡಗುಳಿ ಕೇಶಿರಾಜನು ತನ್ನ ತರುವಾಯ ಬಂದ ಬಸವಾದಿ ಶರಣರ ಮೇಲೆ, ಹರಿಹರಾದಿ ಕವಿಗಳ ಮೇಲೆ ದಟ್ಟವಾದ ಪ್ರಭಾವವನ್ನು ಬೀರಿರುವುದು ಕಂಡು ಬರುತ್ತದೆ. ಉದಾಹರಣೆಗಾಗಿ ಈಗಾಗಲೇ ವಿದ್ವಾಂಸರು ಈತನ ಕಂದಗಳ ವಸ್ತು, ಭಾವ, ಮತ್ತು ಧ್ಯೇಯ – ಧೋರಣೆಗಳನ್ನು ಬಸವಣ್ಣನವರ ಮೇಲೆ ಆಗಿರುವುದನ್ನು ಗುರುತಿಸಿದ್ದಾರೆ. ನಿದರ್ಶನಕ್ಕೆ ಈ ಮುಂದಿನ ಪದ್ಯ – ವಚನಗಳನ್ನು ಹೋಲಿಸಿ ನೋಡಬಹುದು.

೧) ಕರಿಯಂಕುಶಕಂಜುಗಮಾ
ಗಿರಿಯೆಂಜುಗು ಕುಲಿಶಕ್ಕೆ ತಮಂಧಂ ಪರಿಗುಂ
ಕರಕಿರಣಕ್ಕೆ ಮಗಂ
ಪರಿಪೊಡೆ ಪಾಪೋಂ ನಮಃ ಶಿವಾಯೆಂಬ ಪದಂ।

(ಕೇಶಿರಾಜ: ಮಂತ್ರಮಹತ್ವದ ಕಂದ ಪದ್ಯ: ೯೪)

ಕರಿಯಂಜುವುದು ಕಶಕ್ಕಯ್ಯಾ
ಗಿರಿಯಂಜುವುದು ಕುಲಿಶಕ್ಕಯ್ಯಾ
ತಮಂಧವಂಜುವುದು ಬೇಗೆಗಯ್ಯಾ
ಪಂಚಮಹಾ ಪಾತಕವಂಜುವುದು
ಕೂಡಲ ಸಂಗಮನ ನಾಮಕ್ಕಯ್ಯಾ (ಬಸವಣ್ಣನವರ ವಚನ)

೨) ನೆರೆದಿರ್ದ ಮುಗಿಲ ಮಂಜಿನ
ತೆರಳಿಕೆ ಕುಡಿಮಿಂಚು ಗಾಳಿಗೊಡ್ಡಿದ ಸೊಡರೀ।
ಸರಿರವಿದ ನೆಚ್ಚಿ ಕೆಡದಿರು
ಹರಜಪಮಮಗೋಂ ನಮಃ ಶಿವಾಯೆಂಬ ಪದಂ॥

(ಕೇಶಿರಾಜ: ಮಂತ್ರ ಮಹತ್ವದ ಕಂದ: ಪ:೭೬)

ಸಂಸಾರಯೆಂಬುದೊಂದು ಗಾಳಿಯ ಸೊಡರು।
ಸಿರಿಯೆಂಬುದೊಂದು ಸಂತೆ ಮಂದಿ ಕಂಡಯ್ಯ ।
ಇದನೆಚ್ಚಿ ಕೆಡಬೇಡ ಸಿರಿಯೆಂಬುದ
ಮರೆಯದೆ ಪೂಜಿಸು ನಮ್ಮ ಕೂಡಲ ಸಂಗಮದೇವನ (ಬಸವಣ್ಣ)

೩) ಭಾರದ ಭವಂಗಳಲ್ಲಿ ಬಂದು (ಕೇಶಿರಾಜ)
ಬರದ ಭವಂಗಳಲ್ಲಿ ಬರಿಸುವನಲ್ಲದೆ (ಬಸವಣ್ಣ)

೪) ಎನ್ನ ಮನವೆಂಬ ಶುಕನಂ

ನಿನ್ನ ಗದ್ದ ಭಕ್ತಿವನಿತೆ ಪಡೆದೊಯ್ದು
ಶಿವಾಯೆನ್ನೆಂದೊದಿಸಿ... (ಕೇಶಿರಾಜ)
ನರಪಂಥ್ಯದೊಳಗನ್ನ ಹುಲುಗಿಣಿಯ ಮಾಡಿ ಸಲಹುತ್ತ
ಶಿವ ಶಿವ ಎಂದೋದಿಸಯ್ಯ (ಬಸವಣ್ಣ)

೫) ಸಜ್ಜೆಯನ ತೆಗೆದು ನೋಡಲ್... ಜಜ್ಜನೆ ಜರೆಯುತ್ತೆ (ಕೇಶಿರಾಜ)
ಜಜ್ಜನೇ ಜರೆದೆನು ಜಜ್ಜನೆ ಜರೆದೆನು ಜಜ್ಜನೆ ಜರೆದೆನು ನೋಡಯ್ಯ (ಬಸವಣ್ಣ)

ಹೀಗೆ ಈ ಹಿಂದೆ ಪ್ರಸ್ತಾಪಿಸಿದ ಕೊಂಡಗುಳಿ ಕೇಶಿರಾಜನ ಸಾಹಿತ್ಯಿಕ ಪ್ರಭಾವ ಬಸವಾದಿ ಶರಣರ ಮೇಲೆ ಎಷ್ಟು ಗಾಢವಾಗಿ ಬೀರಿದೆ ಎಂಬುದನ್ನು ಸಾಕಷ್ಟು ಸಾಧಾರಣಗಳಿಂದ ನಾವು ಗಮನಿಸಬಹುದು. ಅಂತೆಯೇ ಶರಣ ಧರ್ಮದ ಮೂಲ ಪುರುಷ ಕೊಂಡಗುಳಿ ಕೇಶಿರಾಜನೆಂಬುದು ಔಚಿತ್ಯಪೂರ್ಣವಾಗಿದೆ.

ಜೊತೆಗೆ ಕೊಂಡಗುಳಿ ಕೇಶಿರಾಜನು ಕಾಯಕ ಸಿದ್ಧಾಂತದ ಸ್ವರೂಪಿಯೂ ಆಗಿದ್ದನು ಎಂಬುದನ್ನು ಪೆರ್ಮಾಡಿರಾಯನ ಮಂತ್ರಿ ಪದವಿ ತ್ಯಜಿಸಿದ ಪ್ರಸಂಗವನ್ನು ನಾವು ನೋಡಬಹುದು. ಪೆರ್ಮಾಡಿರಾಯ ಕೇಶಿರಾಜನಿಗೆ ಭಂಡಾರದ ಬೀಗದ ಕೈಯನ್ನು ಒಪ್ಪಿಸಿದ ವಿಷಯ ಸಹಿಸಲಾರದ ಕುಹಕಿಗಳು ಕುತಂತ್ರ ಹೂಡಿದ್ದು ಮಂತ್ರಿ ಪದವಿ ತ್ಯಜಿಸಲು ಕಾರಣವಾಯಿತು. ಒಂದು ದಿನ ಕೇಶಿರಾಜ ತನ್ನ ರಾಜ್ಯ ಕಾರ್ಯವನ್ನು ಪೂರೈಸಿ ಬಂದು ಎಂದಿನಂತೆ ಶಿವಭಕ್ತರೊಡಗೂಡಿ ಶಿವಗೋಷ್ಠಿಯಲ್ಲಿ ಒಂದಾಗಿ ಅಧ್ಯಾತ್ಮದಲ್ಲಿ ಮುಳುಗಿ ಹೋಗಿದ್ದನು. ಆಗ ಚಕ್ರವರ್ತಿಯಿಂದ ಕರೆ ಬಂತು. ಕೂಡಲೇ ಬರಬೇಕೆಂದು ಕೇಶಿರಾಜ ಸಂಕಷ್ಟದಲ್ಲಿ ಬಿದ್ದಿದ್ದಾನೆಂದು ಕುಹಕಿಗಳು ಹರುಷ ತಾಳಿದರು. ಆದರೆ ಕೇಶಿರಾಜ ಶಿವಾನುಭವಗೋಷ್ಠಿ ಮುಗಿದಾದ ಮೇಲೆಯೇ ಅರಸನಲ್ಲಿಗೆ ಹೋಗುತ್ತಾನೆ. ಈ ಸುಸಂದರ್ಭವನ್ನು ಬಳಸಿಕೊಂಡು ಕುಹಕಿಗಳು ಚಾಡಿ ಹೇಳುತ್ತಾರೆ.

ದೇವಾ ದೇವಾ ಕೇಶಿರಾಜನಿಗೆ ನಿನ್ನ ಮೇಲೆ ಸ್ವಲ್ಪವೂ ಭಕ್ತಿ, ನಿಷ್ಠೆ ಮತ್ತು ಗೌರವವಿಲ್ಲ ಇವನು ದಿನನಿತ್ಯ ನಮಸ್ಕರಿಸುವುದು ನಿಮಗಲ್ಲ. ಅವನ ಬೆರಳಿನಲ್ಲಿದ್ದ ಗುರುವಿನ ಪಾದ ಮುದ್ರಿಕೆಯುಳ್ಳ ಉಂಗುರಕ್ಕೆ. ಬೇಕಾದರೆ ನೀವೆ ಪರೀಕ್ಷಿಸಿಕೊಳ್ಳಿರೆನ್ನುತ್ತಾರೆ. ಮರುದಿವಸ ಅ ದಿನದ ಕಾರ್ಯ ಕಲಾಪಗಳು ಮುಗಿದಾದ ಮೇಲೆ ಅರಸ ಉಂಗುರ ನೋಡುವ ನೆಪದಲ್ಲಿ ಕೇಶಿರಾಜನಿಂದ ಉಂಗುರ ತೆಗೆದುಕೊಂಡು ತನ್ನ ಬೆರಳಿಗೆ ಹಾಕಿಕೊಳ್ಳುತ್ತಾನೆ. ಕೇಶಿರಾಜನು ತನ್ನ ದಿನನಿತ್ಯದ ಕಾರ್ಯಕಲಾಪಗಳು ಮುಗಿದಾದ ಮೇಲೆ ಹೊರಡುವ ಉದ್ಯುಕ್ತನಾದ ಆದರೆ, ಅರಸ ಉಂಗುರ ಮರಳಿಸಲಿಲ್ಲ. ಕೇಶಿರಾಜ ಸುಮ್ಮನೆ ಮನೆಗೆ ಮರಳಿದ. ತಾನು (ಅರಸ) ಕಂಡುಕೊಂಡದ್ದು ಸರಿ ಎಂದು ಕಾಣುತ್ತದೆ. ಏಕೆಂದರೆ ಕೇಶಿರಾಜ ಅರಸನಿಗೆ ವಂದಿಸದೆ ಹೊರಡುತ್ತಾನೆ. 'ಕೇಶಿರಾಜ ನೀನು ಮಹಾರಾಜರಿಗೆ ನಮಸ್ಕರಿಸುವ ಪರಿಪಾಠ ಇಟ್ಟುಕೊಂಡಿಲ್ಲ ಎಂದೆನಿಸುತ್ತದೆ. ಇದು ರಾಜನಿಗೆ ಅಪಮಾನಿಸಿದಂತೆ' ಎಂದು ಜನರು ಹೇಳುತ್ತಿದ್ದರು. ಅದು ನಿಜವಾಯಿತು. ನೀನು ಮಂತ್ರಿ ಪದವಿ ಬಿಟ್ಟು ಹೋಗೆಂದ ಅರಸ.

ಹೀಗೆ ಕೊಂಡುಗಳಿ ಕೇಶಿರಾಜನ ಕೃತಿಗಳನ್ನು ಹಾಗೂ ನಂತರ ಬಂದ ವೀರಶೈವ ಕಾವ್ಯ ಪುರಾಣಗಳನ್ನು ಅಭ್ಯಾಸಿಸಿದಾಗ ಕೊಂಡಗುಳಿ ಕೇಶಿರಾಜ ಕನ್ನಡ ನಾಡಿನ ಶರಣ ಧರ್ಮದ ಮೂಲ ಪುರುಷ ಮತ್ತು ಕಾಯಕ ಸ್ವರೂಪಿಯೂ ಆಗಿದ್ದನೆಂದು ತಿಳಿದುಬರುತ್ತದೆ

## ಪುಸ್ತಕ ಸ್ವೀಕಾರ

* **ಬೇವು ಬೆಲ್ಲ** (ಚಿಂತನಾ ಲೇಖನ: ದ್ವಿತೀಯ ಮುದ್ರಣ )
  ಪುಟ 112, ಬೆಲೆ ರೂ 40




* **ಬಿಸಿಲು ಬೆಳದಿಂಗಳು** (ದ್ವಿತೀಯ ಮುದ್ರಣ)
  ಪುಟ 140, ಬೆಲೆ ರೂ 50
* **ಜನಪ್ರತಿನಿಧಿಗಳ ಪಾಳೆಗಾರಿಕೆ**
  ಪುಟ 152, ಬೆಲೆ ರೂ 50
* **ಬುದ್ಧಿ ಮತ್ತು ಹೃದಯ** (ದ್ವಿತೀಯ ಮುದ್ರಣ)
  ಪುಟ 118, ಬೆಲೆ ರೂ 40
* **ಶರೀರ ಸೌಂದರ್ಯ V/s ಆತ್ಮಸೌಂದರ್ಯ**
  ಪುಟ 132, ಬೆಲೆ ರೂ 30




ಈ ಮೇಲಿನ ಐದು ಕೃತಿಗಳ ಲೇಖಕರು:
**ಶ್ರೀ ತರಳಬಾಳು ಜಗದ್ಗುರು ಡಾ॥ ಶಿವಮೂರ್ತಿ ಶಿವಾಚಾರ್ಯ ಮಹಾಸ್ವಾಮಿಗಳು**
ಪ್ರಕಾಶನ : **ಸಾಹಿತ್ಯ** ಸಿರಿ, ಶ್ರೀ ತರಳಬಾಳು ಜಗದ್ಗುರು ಬೃಹನ್ಮಠ, ಸಿರಿಗೆರೆ–577 541.

* **ಸಮಾನತೆಯತ್ತ** (ಸಾಣೇಹಳ್ಳಿ ನಾಟಕೋತ್ಸವ ಸಂದರ್ಭದ ಭಾಷಣಗಳ ಬರಹಗಳು) ಸಂಪಾದಕರು: ಶ್ರೀ ಪಂಡಿತಾರಾಧ್ಯ ಶಿವಾಚಾರ್ಯ ಸ್ವಾಮಿಗಳು, ಪುಟ 112, ಬೆಲೆ ರೂ 50, ಪ್ರ: ಶ್ರೀ ಶಿವಕುಮಾರ ಕಲಾಸಂಘ, ಸಾಣೇಹಳ್ಳಿ–577 515, ಹೊಸದುರ್ಗ
* **ದೇಶ–ಕಾಲ–ಶ್ರಮ** (Outliers- ಕೃತಿಯ ಸಾರಾಂಶ ರೂಪದ ಲೇಖನಗಳು) ರವಿ ಕೃಷ್ಣಾರೆಡ್ಡಿ, ಪುಟ 84, ಬೆಲೆ ರೂ 60, ಪ್ರ: ಮೌಲ್ಯಾಗ್ರಹ ಪ್ರಕಾಶನ, # 400, 23ನೇ ಮೇನ್, ಬಿಟಿಎಂ ಬಡಾವಣೆ, 2ನೇ ಹಂತ, ಬೆಂಗಳೂರು–560 076
* **ನಾನು ಪ್ರೀತಿಸುತ್ತೇನೆ** (ಕಾವ್ಯ)
  ನಿರ್ಮಲಾ, ಪುಟ 84, ಬೆಲೆ ರೂ 45, ಪ್ರ: ಶ್ರೀನಿವಾಸ ಪುಸ್ತಕ ಪ್ರಕಾಶನ, ಕನಕಪುರ ಮುಖ್ಯರಸ್ತೆ, ಬಸವನಗುಡಿ, ಬೆಂಗಳೂರು–560 004
* **ಮೊಹಮ್ಮದ್ ಪೈಗಂಬರ್ ಮತ್ತು ಖಲೀಫರು** (ಜೀವನ ಚಿತ್ರಾವಳಿ)
  ಆಗುಂಬೆ ಎಸ್. ನಟರಾಜ್, ಪುಟ 400, ಬೆಲೆ ರೂ 200
* **ದಿಲ್ಲಿ ದಂಗೆ ಮತ್ತು ಇತರ ಕತೆಗಳು:**
  ಆಗುಂಬೆ ಎಸ್. ನಟರಾಜ್, ಪುಟ 148, ಬೆಲೆ ರೂ 100

**ಮೇಲಿನ ಎರಡೂ ಪುಸ್ತಕಗಳ ಪ್ರಕಾಶಕರು:** ಹಂಸ ಪ್ರಕಾಶನ, #947, 3ನೇ ಮೇನ್, ವಿಜಯನಗರ, ಬೆಂಗಳೂರು–560 040.

